ಪ್ರತಿಭಾ ಗ್ರಂಥಮಾಲೆ, ವರುಷ ೧೩—ಕಿರಣ ೪.

# ಮಾವನ ಆಸ್ತಿ

( ಹಾಸ್ಯರಸ ಪ್ರಧಾನ ಕಾದಂಬರಿ )



ಲೇಖಕರು :

ಕೆ. ವೀರೇಶ

ಪ್ರತಿಭಾ ಗ್ರಂಥಮಾಲೆ, ಧಾರವಾಡ.

ನವೆಂಬರ ೧೯೫೫



ಬೆಲೆ : ೧—೮—೦

**ಪ್ರತಿಭಾ ಗ್ರಂಥಮಾಲೆ**
ಭಗತಸಿಂಗ ಬೀದಿ,
**ಧಾರವಾಡ.**

---

ಸಂಪಾದಕರು :
**ಭಾಲಚಂದ್ರ ಘಾಣೇಕರ**

---

ಮುದ್ರಕರು ಮತ್ತು ಪ್ರಕಾಶಕರು :
ಭಾಲಚಂದ್ರ ಘಾಣೇಕರ,
ಪ್ರತಿಭಾ ಮುದ್ರಣ,
ಧಾರವಾಡ.

---

ಮಾರಾಟಗಾರರು :
**ಸಮಾಜ ಪುಸ್ತಕಾಲಯ,**
**ಧಾರವಾಡ.**

---

ವಾರ್ಷಿಕ ಚಂದಾ :
ರಜಿಸ್ಟರ್ ಅಂಚೆ ವೆಚ್ಚ ಸೇರಿ
**೭ ರೂಪಾಯಿ**

---

ಈ ಪುಸ್ತಕದ ಬೆಲೆ :
೧—೮—೦

# ಮುನ್ನುಡಿ.

ಕನ್ನಡದಲ್ಲಿ ಇಂದು ಕಾದಂಬರಿಗಳ ಬೆಳೆ ಹುಲುಸಾಗಿ ಬರುತ್ತಿದೆಯಾದರೂ ಹಾಸ್ಯರಸ ಪ್ರಧಾನ ಕಾದಂಬರಿಗಳ ಕೊರತೆ ಮಾತ್ರ ಎದ್ದು ಕಾಣುತ್ತಿದೆ. ವಿದೇಶೀಯ ಸಾಹಿತ್ಯದಲ್ಲಿ ಈ ಕೊರತೆ ಎಂದೂ ಕಾಣಿಸಿಕೊಂಡಿಲ್ಲ. ಇಂಗ್ಲಂಡ, ಅಮೇರಿಕಾ, ಫ್ರಾನ್ಸ್ ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ಪ್ರತಿವರ್ಷವೂ ಸಾವಿರ ಸಾವಿರಗಳ ಸಂಖ್ಯೆಯಲ್ಲಿ ಇಂಥ ಕಾದಂಬರಿಗಳೂ ಕಥೆಗಳೂ ಪ್ರಕಟವಾಗಿ ಜನರನ್ನು ರಂಜಿಸುತ್ತವೆ. ಚೆಸ್ಟರಟನ್, ವೋಡ್‌ಹೌಸ್, ಷಾ ಮೊದಲಾದ ಹಾಸ್ಯ ಲೇಖಕರು ಅಲ್ಲಿನ ಜನರ ಕಣ್ಮಣಿಗಳಾಗಿ ಮೆರೆದಿದ್ದಾರೆ.

ಕನ್ನಡದಲ್ಲಿ ಇಂಥ ಸಾಹಿತ್ಯ ರಚಿಸಬೇಕೆಂಬ ಬಹು ದಿನಗಳ ನನ್ನ ಬಯಕೆ ಇಂದು ಕೃತಿಗಿಳಿದಿರುವದಕ್ಕಾಗಿ ನನಗೆ ಆನಂದವಾಗಿದೆ. ವೋಡ್‌ಹೌಸ್‌ರವರ ಕಾದಂಬರಿಯೊಂದು ಇದರ ರಚನೆಗೆ ಪ್ರೇರಕವಾಯಿತಾದರೂ ಇದು ಅದರ ಭಾಷಾಂತರವೆಂದು ಹೇಳುವಂತಿಲ್ಲ. ಮೂಲ ಕಲ್ಪನೆಯನ್ನಷ್ಟೆ ತೆಗೆದುಕೊಂಡು ಭಾರತೀಯ ಜೀವನಕ್ಕೆ ಸರಿ ಹೋಗುವಂತೆ ಕಥೆಯನ್ನು ನಿರೂಪಿಸಿದ್ದೇನೆ. ಈ ಕೃತಿ ನಮ್ಮ ವಾಚಕರಿಗೆ ಒಪ್ಪಿಗೆಯಾದರೆ ಮುಂದೆಯೂ ಇದೇ ಬಗೆಯ ಕೆಲವು ಕಾದಂಬರಿಗಳನ್ನು ರಚಿಸುವ ಅಪೇಕ್ಷೆ ನನಗಿದೆ.

ಈ ಕಾದಂಬರಿಯನ್ನು ಪ್ರಕಟಿಸಲು ಮುಂದೆ ಬಂದಿರುವ ಪ್ರತಿಭಾ ಗ್ರಂಥ ಮಾಲೆಯ ಪ್ರಕಾಶಕರಿಗೆ ನನ್ನ ಕೃತಜ್ಞತೆಯ ವಂದನೆಗಳು ಸಲ್ಲುತ್ತವೆ.

ಧಾರವಾಡ
೮—೧೦—೧೯೫೫

**ಕೆ. ವೀರೇಶ**

# ಪ್ರತಿಭಾ ಗ್ರಂಥಮಾಲೆಯ

೧೩ ನೇ ವರುಷದ ಕಿರಣಗಳು.



## ಹೊರಬಂದಿವೆ:

೧. **ಜೀವದಾನ** (ಕಾದಂಬರಿ)
ಶ್ರೀ. ನಾರಾಯಣ ಹುಲಿಗಿ, ಎಂ. ಎ. ೧—೦—೦

೨. **ವಿದ್ಯಾ** (ಸಾಮಾಜಿಕ ನಾಟಕ)
'ಎಸ್ಕೆ' ೦—೧೨—೦

೩. **ಪ್ರತಿಜ್ಞೆ** (ಪ್ರೇಮಚಂದ-ಕಾದಂಬರಿ)
ಶ್ರೀಮತಿ ಸುಬ್ಬಲಕ್ಷ್ಮಿ, ರಾಷ್ಟ್ರಭಾಷಾಪ್ರವೀಣೆ ೧—೮—೦

೪. **ಮಾವನ ಆಸ್ತಿ** (ಕಾದಂಬರಿ)
ಶ್ರೀ. ಕೆ. ವೀರೇಶ ೧—೮—೦



## ಬರಲಿವೆ :

೫. **ಆಶ್ರಮವಾಸಿ** (ಕಾದಂಬರಿ)
ಶ್ರೀ. ಬಸವರಾಜ ಕಟ್ಟೀಮನಿ

೬. **ಕನಸಿನ ಕನ್ನಡಿ** (ಕಥಾಸಂಕಲನ)
ಶ್ರೀ. ವೆಂ. ಮು. ಜೋಶಿ

೭. **ಬರಡು ಬಾಳು** (ಕಾದಂಬರಿ)
ಶ್ರೀ. ಜೈನೇಂದ್ರಕುಮಾರ

........ಇತ್ಯಾದಿ.

# ಮಾನಸ ಆಸ್ತಿ

## ೧

ಜೂನ್ ತಿಂಗಳಿನ ಒಂದು ದಿನ. ಮಧ್ಯಾಹ್ನದ ಹನ್ನೆರಡು ಗಂಟೆಯಾಗಿದೆ. ಗೊಬ್ಬೂರಿನ ನಾಗರಿಕರ ಊಟದ ಸಮಯ. ಗಿರಣಿಗಳಿಂದ ತುಂಬಿದ ಈ ನಗರದಲ್ಲಿನ ಕೂಲಿಕಾರರು ಊಟದ ಬಿಡುವು ದೊರೆತೊಡನೆ ತಮ್ಮ ಮನೆಗಳಿಗೋ ಹೋಟಲುಗಳಿಗೋ ಊಟಕ್ಕಾಗಿ ಓಡುತ್ತಿರುವ ಗಡಿಬಿಡಿಯೇ ಎಲ್ಲಿ ನೋಡಿದರೂ.

"ಕೋಮಲ ವಿಲಾಸ ಬೋರ್ಡಿಂಗ್ ಆ್ಯಂಡ್ ಲಾಜಿಂಗ್ ಹೌಸ್" ನ ಎದುರಿಗೆ ಓರ್ವ ತರುಣ ನಿಂತಿದ್ದಾನೆ. ಎತ್ತರವಾದ ನಿಲುವು, ತುಂಬಿ ಬೆಳೆದ ದೇಹ, ಅಗಲ ಮುಖ, ತುಟಿಗಳಂಚಿನಲ್ಲಿ ಸೂಸಿ ಬರುತ್ತಿದ್ದ ನಗು. ನೋಡಿದರೆ ತೃಪ್ತಿಯಾಗುವ ರೂಪ ಅವನದು. ಎದುರಿಗಿನ ಬೀದಿಗಳಲ್ಲಿ ಓಡಾಡುತ್ತಿರುವ ಜನಜಂಗುಳಿಯತ್ತ ಅವನ ಲಕ್ಷ್ಯವೇ ಇದ್ದಂತಿರಲಿಲ್ಲ. ಎಲ್ಲಿಯೋ ದೂರ ಒಂದೆಡೆಗೆ ಅವನ ದೃಷ್ಟಿ ನೆಲೆಸಿ ನಿಂತಿದೆ. ಗಾಂಭೀರ್ಯದೊಡನೆ ವಿಷಾದ, ಬೆದರಿಕೆ ಕೂಡಿರುವುದನ್ನೂ ಅವನ ಮುಖದಲ್ಲಿ ಗುರುತಿಸಬಹುದು.

ಅತ್ತೀಗೇರಿಯ ರಾಜ ಅಪ್ಪಾಸಾಹೇಬ್ ಜಹಾಗೀರದಾರನ ಮನಸ್ಸಿನಲ್ಲಿ ಅಂಥ ಭಯಂಕರ ದುಃಖವಾವುದೂ ಇರಲಿಲ್ಲ. ಅವನನ್ನು ಇಂಥ ಸ್ಥಿತಿಗೆ ತಂದ ವಿಚಾರವೇ ಬೇರೆ. ಗೇಟಿನ ಬದಿಯ "ಪಿಚ್" ಮೇಲೆ ನಿಂತು, ಪವಿಲಿಯನ್ ಆಚೆಗೆ ಚೆಂಡು ತೂರಿ ಹೋಗಿ "ಸಿಕ್ಸರ್" ಆಗಬೇಕಾದರೆ ಯಾವ ಹೊಡೆತ ಉಪಯೋಗಿಸಬೇಕು? ಎಂಬುದೇ ಅವನ ಚಿಂತೆ. ಅವನ ಪ್ರೇಯಸಿ

ಸುಶೀಲಾರಾಣಿ ಗೊತ್ತುಪಡಿಸಿದ ವೇಳೆಗೆ ಸರಿಯಾಗಿ ಬಂದು ಭೇಟಿಯಾಗಲು ತಪ್ಪಿದರೆ ಅವನು ಕ್ರಿಕೆಟ್ ಆಟದ ಕಲ್ಪನಾ ಸಾಮ್ರಾಜ್ಯದಲ್ಲಿ ಪ್ರವೇಶಿಸಿಬಿಡುತ್ತಿದ್ದ. ಸುಶೀಲಾರಾಣಿ ಬರುವದು ಎಂದಿಗಿಂತಲೂ ತಡವಾಯಿತೆಂದರೆ ರಾಜಾಸಾಹೇಬ್ ಕೈಯಲ್ಲಿ ಬ್ಯಾಟ್ ಹಿಡಿದು ಬಯಲಿನಲ್ಲಿ ಪ್ರವೇಶಿಸಿ ಒಂದು "ಸೆಂಚುರಿ" ಸಾಧಿಸಿ ಪ್ರೇಕ್ಷಕರ ಕರತಾಡನ ಕೇಳಿ ವಾಸ್ತವ ಪ್ರಸಂಗಕ್ಕೆ ಹಿಂದಿರುಗುತ್ತಿದ್ದ. ಅವನ ಮನಸ್ಸು ತೀರ ಸಾದಾ ರೀತಿಯದು. ಗಹನ ವಿಚಾರಗಳೇ ಅವನ ಬಳಿ ಸುಳಿಯುತ್ತಿರಲಿಲ್ಲ.

ಅವನು ಈಗಿದ್ದುದೂ ಕ್ರಿಕೆಟ್ ಆಟದ ಕಲ್ಪನಾ ಸಾಮ್ರಾಜ್ಯದಲ್ಲಿಯೇ. ಆಗಲೇ ಯಾವನೋ ಒಬ್ಬ ಬಂದು ಅವನ ಮುಂದೆ ನಿಂತ. ಬಡಕಲು ದೇಹದ ಆ ಆಗಂತುಕನ ಮೈಮೇಲಿನ ಬಟ್ಟೆಗಳನ್ನು ಕಂಡು, ಒಂದು ಕೋಲಿಗೆ ಬಟ್ಟೆ ತೊಡಿಸಿರುವಂತೆ ತೋರುತ್ತಿತ್ತು. ಕೆಲ ಸಮಯ ಅವನು ರಾಜಾಸಾಹೇಬನನ್ನು ಪರೀಕ್ಷಿಸಿ ಸುತ್ತಲೂ ದೃಷ್ಟಿ ತೂರಿ ಪೋಲೀಸರಾರೂ ಇಲ್ಲವೆಂದು ಖಾತ್ರಿಯಾದೊಡನೆ ಎದುರಿಗೆ ಬಂದು ನಿಂತ. ಮನೆಯಲ್ಲಿ ಹೆಂಡತಿ ಮಕ್ಕಳು ಉಪವಾಸವಿರುವರೆಂದೇ ಆತ ಭಿಕ್ಷೆ ಯಾಚಿಸುತ್ತಿದ್ದುದು.

ರಾಜಾಸಾಹೇಬನಿಗೆ ಇಂಥ ಅನುಭವಗಳು ದಿನವೂ ಆಗುತ್ತಿದ್ದವು. ಅವನನ್ನು ಕಂಡೊಡನೆಯೇ ಅವನು ದಯಾಪರನೆಂಬುದನ್ನು ಭಿಕ್ಷುಕರು ಗುರುತಿಸಿಕೊಳ್ಳುತ್ತಿರಬೇಕು.

ಬಾಹ್ಯ ರೂಪ ವೇಷ ಭೂಷಣಗಳಿಂದ ಮನುಷ್ಯನ ಸ್ವಭಾವ ಮತ್ತು ಸ್ಥಿತಿಗಳನ್ನು ನಿರ್ದಿಷ್ಟಗೊಳಿಸಿಕೊಳ್ಳುವದೂ ಇಂದಿನ ಕಾಲದಲ್ಲಿ ಸಾಧ್ಯವಿದೆಯೇನೋ. ರಾಜಾಸಾಹೇಬನ ಬಹು ಬೆಲೆಯ ವೇಷಭೂಷಣ ಗಾಂಭೀರ್ಯಗಳನ್ನು ಕಂಡು ಆ ಭಿಕ್ಷುಕ ಅವನ ಸ್ವಭಾವವನ್ನೂ ಗುರುತಿಸಿಕೊಂಡಿರಬೇಕು. ರಾಜಾಸಾಹೇಬ ಈಗ ಮೈಮರೆತು ನಿಂತಂತೆ ನಿಲ್ಲುವದೂ ಗೂಬ್ಬೂರಿನ ಕೆಲ ಭಾಗಗಳಲ್ಲಿ ಗಂಡಾಂತರಕಾರಿಯಾಗಿತ್ತು. ಚಪಲ ಕೈಗಳವರು ಅನುಕೂಲ ಸಮಯಕ್ಕಾಗಿ ದೇವರಿಗೆ ಮೊರೆಯಿಡುತ್ತ ಸುತ್ತುತ್ತಿದ್ದರೆ, ಎಚ್ಚರಿಕೆಯುಳ್ಳ ಕೆಲವರು ತಮ್ಮ ಜೇಬುಗಳಲ್ಲಿನ ಚಿಲ್ಲರೆ ಹಣವನ್ನು ಮುಟ್ಟಿ ನೋಡುತ್ತ, ಆ ಭಾಗಗಳಿಂದ ತೀವ್ರ ಮಾಯವಾಗಲು ವೇಗವಾಗಿ ಹೆಜ್ಜೆಗಳನ್ನಿಕ್ಕುತ್ತಿದ್ದರು. ರಾಜಾಸಾಹೇಬ ಅಲ್ಲಿ ನಿಂತಿದ್ದ ಆ ಆರೇಳು ನಿಮಿಷಗಳಲ್ಲಿ ಇರುಬ್ಬ ಬಂದು "ಶನಿವಾರ

ಸಂತೆ" ಯ ದಿನ ಹಣ ತಿರುಗಿ ಕೊಡುವುದಾಗಿ ಹೇಳಿ ನಾಲ್ಕಾರು ರೂಪಾಯಿ ಇಸಿದುಕೊಂಡು ಹೋಗಿದ್ದರು. ಆ ಇಬ್ಬರು ಅವನೊಡನೆ ಮಾತನಾಡಿದ ರೀತಿಯನ್ನೂ, ಅವನನ್ನು ರಾಜಾಸಾಹೇಬನೆಂದು ಸಂಬೋಧಿಸಿದುದನ್ನೂ ನೋಡಿದರೆ ಅವರು ಅವನ ಸ್ನೇಹಿತರೆಂದೇ ಹೇಳಬಹುದಾಗಿತ್ತು. ಆ ನಗರದಲ್ಲಿನ ಅವನ ಪರಿಚಿತರೆಲ್ಲ ಅವನನ್ನು ರಾಜಾಸಾಹೇಬನೆಂದೇ ಕರೆಯುತ್ತಿದ್ದರು. ಅವರು ತೋರಿಸುತ್ತಿದ್ದ ಸಲುಗೆಯಿಂದಲೂ ಅವನ ಸ್ವಭಾವವನ್ನು ಗುರುತಿಸಬಹುದಿತ್ತು. ಅವನನ್ನು ಕಂಡೊಡನೆಯೇ 'ರಾಜಾಸಾಹೇಬ' ನೆಂದೇ ಕರೆಯಬೇಕೆಂದೆನ್ನಿಸುವ ವ್ಯಕ್ತಿತ್ವ ಅವನದು. ಮಾರ್ಕೆಟ್ಟಿನಲ್ಲಿನ ಕೂಲಿಯವರನ್ನು ಮೊದಲು ಮಾಡಿಕೊಂಡು ಪ್ರತಿಷ್ಠಿತರು ಕೂಡ ರಾಜಾಸಾಹೇಬನೆಂದು ಸಲುಗೆಯಿಂದಲೇ ಅವನನ್ನು ಕರೆಯುತ್ತಿದ್ದರು.

ಮನೆಯಲ್ಲಿ ನಾಲ್ಕೆಂಟು ಜನರನ್ನು ಉಪವಾಸಕ್ಕೆ ಬಲಿ ಮಾಡಿದ್ದವನೂ ಅವನನ್ನು ಆ ಸಲುಗೆಯ ಹೆಸರಿನಿಂದಲೇ ಕರೆದಿದ್ದ. ಒಂದೊಂದೇ ಹೆಜ್ಜೆಯಂತೆ ಗಂಭೀರವಾಗಿಯೂ ನಿಧಾನವಾಗಿಯೂ ದೂರ ಹೋಗಿದ್ದ ದೃಷ್ಟಿಯನ್ನು ಸಮೀಪಕ್ಕೆ ತಂದುಕೊಂಡು ಬಂದವನನ್ನುದ್ದೇಶಿಸಿ, ರಾಜಾಸಾಹೇಬ್,

"ಏನೋ ಅಂದೆಯಲ್ಲ ? ಏನದು ?" ಎಂದ.

"ನಾಲ್ಕು ಮಕ್ಕಳು ಉಪವಾಸ ಬಿದ್ದಿವೆ. ನಿಜವಾಗಿಯೂ ನಾಲ್ಕು ಮಕ್ಕಳು ಉಪವಾಸ........ಸಹಾಯ ಮಾಡಿರಿ ಧಣಿಯರೇ........"

"ಈ ಜಂಜಾಟದಲ್ಲ ನಿನಗೆ ಕ್ರಿಕೆಟ್ ಆಡಲು ಸಮಯವಾದರೂ ಎಲ್ಲಿಯದು ?" ಎಂದು ರಾಜಾಸಾಹೇಬ ಮರುಕವನ್ನು ವ್ಯಕ್ತಪಡಿಸಿದ.

ಕಳೆದ ಮೂರು ದಿನಗಳಿಂದಲೂ ಅವನ ವಂಶವೃಕ್ಷದ ಆ ಕುಡಿಗಳು ರೊಟ್ಟಿಯ ರುಚಿಯನ್ನೇ ನೋಡಿಲ್ಲವಾಗಿ ಕಣ್ಣಲ್ಲಿ ನೀರು ತಂದು ಆಗಂತುಕನು ಹೇಳಿದ. ಅವನ ಹೇಳಿಕೆಯ ಪರಿಣಾಮ ರಾಜಾಸಾಹೇಬನ ಮನಸ್ಸಿನ ಮೇಲಾಗಲಿಲ್ಲ. ಯಾಕಂದರೆ ರೊಟ್ಟಿಯ ಮೇಲೆ ಅವನಿಗೆ ಹೆಚ್ಚಿನ ಆಸ್ಥೆಯಿರಲಿಲ್ಲ. ಎದುರಿನಲ್ಲಿ ನಿಂತಿದ್ದವನಿಗೆ ಮಾತ್ರ ತೊಂದರೆಯಿರುವದನ್ನು ನೋಡಿ, 'ಪ್ರತಿಯೊಬ್ಬನ ಇಚ್ಛೆಗಳೂ ಬೇರೆಯಾಗಿರುತ್ತವೆಂ'ದುಕೊಂಡು, ಅವನತ್ತ ಕರುಣೆಯ ದೃಷ್ಟಿ ಬೀರಿ,

"ಆ ನಿನ್ನ ಮಕ್ಕಳಿಗೆ ರೊಟ್ಟಿಯ ಮೇಲೆ ಅಷ್ಟೊಂದು ಆಸೆಯೇಕೆ ?

ಯಾವ ವಸ್ತುವಿನ ಮೇಲೇ ಆಗಲಿ ಹೆಚ್ಚು ಆಶೆ ತರವಲ್ಲ. ಆ ರೊಟ್ಟಿಗಾಗಿ ನೀನೇನು ಮಾಡಲಿರುವಿ?" ಎಂದ.

ಎದುರಿಗಿದ್ದವನ ಮನಸ್ಸಿನಲ್ಲಿ ಮೂಡಿ ನಿಂತಿದ್ದ ರೊಟ್ಟಿಯ ಚಿತ್ರವು ಕರಗಿ ಹೋದಂತಾಯಿತು.

"ಪಕ್ಕದ ಹೋಟಲಿನಿಂದ ನಾಲ್ಕಾರು ತಂಗುಳ ರೊಟ್ಟಿಗಳನ್ನು ಕೊಂಡೊಯ್ಯಬೇಕೆನ್ನುವೆ ರಾಜಾಸಾಹೇಬ. ನಮ್ಮಂಥವರ ಮಕ್ಕಳಿಗೆ ಅವೇ ಪೃಷ್ಟಾನ್ನ. ನಿಮಗೆ ಮೋಜು ರಾಜಾಸಾಹೇಬ."

ರಾಜಾಸಾಹೇಬನು ಆ ಮುದಿಗೂಬೆಯತ್ತ ತೀಕ್ಷ್ಣ ನೋಟವೊಂದನ್ನು ಬೀರುತ್ತ,

"ಛೆ" ಎಂದು ಒಮ್ಮೆ ಭುಜ ಹಾರಿಸಿದ. ಕ್ಷಣಕಾಲ ಮೌನ. ಅವರ ವ್ಯವಹಾರ ಬಗೆಹರಿದಂತೆ ಕಾಣಿಸಹತ್ತಿತು. ರಾಜಾಸಾಹೇಬನೇ ಹೇಳ ಹತ್ತಿದ—ಬಹಳ ಹೊತ್ತಿನ ತನಕ ದೀರ್ಘ ಯೋಚನೆಮಾಡಿ ಉಪಾಯ ಹೊಳೆದವನಂತೆ.

"ನನಗಂತೂ ರೊಟ್ಟಿಯ ವಿಚಾರ ಗೊತ್ತಿಲ್ಲ. ನಾನು ತಿನ್ನುವದು ಬ್ರೆಡ್ ಅಥವಾ ಚಪಾತಿ. ನಿನಗೆ ನಾನು ರೊಟ್ಟಿಗಳನ್ನು ಕೊಂಡುಕೊಡಲು ಸಿದ್ಧನಿಲ್ಲ. ನಿನ್ನ ಈ ಬಟ್ಟೆಗಳಂತೂ ಹೇಸಿಕೆ ತರುತ್ತಿವೆ. ನನ್ನನ್ನು ಗೋರಿಗೆ ಹಾಕುವಾಗಲೂ ಇಂಥ ಬಟ್ಟೆಗಳನ್ನು ನಾನು ಸಹಿಸಲಾರೆ. ನಿನ್ನನ್ನು ಅವಮಾನಪಡಿಸುವ ಮನಸ್ಸು ನನಗಿಲ್ಲ. ನಿನಗೆ ನಾಲ್ಕು ಮಕ್ಕಳಿದ್ದು ಉಪಕಾರ್ಯದ ಆ ನಿನ್ನ ಸ್ತ್ರೀರತ್ನವು ಎಂದೂ ನಿನಗೆ ಉಪದೇಶ ಮಾಡಿಲ್ಲವೇನು ? ಅದೇನೇ ಇರಲಿ, ನಿನಗೊಂದು ರೂಪಾಯಿ ಕೊಡುವೆ. ಅಷ್ಟರ ಮೇಲೆ ನನ್ನ ಕೈಬಿಡು."

"ದೇವರು ನಿಮಗೆ ಕಲ್ಯಾಣ ಮಾಡಲಿ, ರಾಜಾಸಾಹೇಬ್."

"ಕಲ್ಯಾಣದ ಮಾತು ಸಾಕು. ನಿನ್ನ ಮಕ್ಕಳಿಗಾಗಿ ರೊಟ್ಟಿಯನ್ನು ಕೊಂಡುಕೋ. ಒಂದು ರೂಪಾಯಿನಲ್ಲಿ ಸಾಕಷ್ಟು ಬರಬಹುದು. ನಿನ್ನ ಆ ಮಕ್ಕಳಿಗೆ ರೊಟ್ಟಿ ನಿಜವಾಗಿಯೂ ರುಚಿಸುವದೇ ? ವಿಚಿತ್ರ ಆಶೆ!"

ಈ ಆರ್ಥಿಕ ವ್ಯವಸ್ಥೆಯನ್ನು ಬಗೆಹರಿಸಿ ಆತ ಬೇರೆ ಓಕ್ಕಿಗೆ ಮುಖ ತಿರುಗಿಸುತ್ತಿದ್ದಂತೆ, ಎದುರಿಗೆ ಎತ್ತರ ನಿಲುವಿನ ಬಿಳಿಯ ವಸ್ತ್ರಗಳನ್ನು ಧರಿಸಿದ್ದ

ಯುವತಿಯೋರ್ವಳು ಬಂದು ನಿಂತಿರುವುದನ್ನು ಕಂಡ.

ಈ ವ್ಯವಹಾರದ ಮಾತು ಕತೆಗಳು ನಡೆದಿದ್ದಾಗ ಆ ಯುವತಿಯು ಬೀದಿಯ ಆ ತುದಿಯಿಂದ ಇವರತ್ತ ಬರುತ್ತಿದ್ದಳು. ಸ್ತ್ರೀಸೌಂದರ್ಯ ಪ್ರೇಮಿಗಳನೇಕರು ಅವಳನ್ನೇ ನೋಡುತ್ತಿದ್ದರು. ಅವರಲ್ಲಿ ಕೆಲವರ ಕುತ್ತಿಗೆಯು ಶಿರಗಳೂ ನೋವಾಗಿರಬೇಕು. ಅವಳು ಸುಂದರಿಯೆಂಬುವರಲ್ಲಿ ಸಂದೆಯವಿರಲಿಲ್ಲ. ಬಳುಕುವ ದೇಹ. ಯಥೇಚ್ಛವಾಗಿ ಬೆಳೆದ ಕೇಶರಾಶಿಯನ್ನು ಇಬ್ಭಾಗಿಸಿ ಹೆಣೆದು ಬೆನ್ನಿನ ಮೇಲೆ ಬಿಟ್ಟುದನ್ನು ಕಂಡರೆ ಕಪ್ಪಗಿನ ಎರಡು ಹಾವುಗಳೇ ಅಲ್ಲಿ ಓಡಾಡುತ್ತಿರುವಂತಿದ್ದವು. ವಿಶಾಲ ನೇತ್ರಗಳು, ಮಾಟವಾದ ಮೂಗು, ತುಟಿಗಳು ಬಿಗಿಯಾಗಿದ್ದರೂ ಕೊರೆದು ತೆಗೆದಂತಿದ್ದವು. ನಡಿಗೆಯಲ್ಲೂ ಮನಮೋಹಕತೆ ತುಂಬಿತ್ತು. ಅವಳು ರಾಜಾಸಾಹೇಬನಿದ್ದ ಸ್ಥಳದತ್ತ ಬರುತ್ತಿದ್ದಾಗ ಚೌಕದಲ್ಲಿನ ಪೋಲೀಸನು "ಯಾವ ಪುಣ್ಯಶಾಲಿಯ ಭೇಟಿಗೆ ಹೊರಟಿರುವಳೋ ?" ಎಂದು ಉದ್ಗಾರ ತೆಗೆದು ತನ್ನ ದುರ್ದೈವಕ್ಕಾಗಿ ವ್ಯಸನದ ನಿಡಿಯುಸಿರೊಂದನ್ನು ಬಿಟ್ಟ.

ಆ ಪುಣ್ಯಶಾಲಿಯೇ ನಮ್ಮ ರಾಜಾಸಾಹೇಬ್. ಅವಳನ್ನು ಕಂಡೊಡನೆ ಅವನ ಮುಖದಲ್ಲಾದ ಬದಲಾವಣೆಯನ್ನು ನೋಡಿದರೆ ಆ ಪುಣ್ಯಶಾಲಿಗೆ ತನ್ನ ಸುದೈವದ ಬಗ್ಗೆ ಸಂದೆಯವಿರಬೇಕೆಂದು ಅನ್ನಬಹುದಿತ್ತು. ಆಗ ತಾನೇ ಆ ಬಡ ಮಕ್ಕಳ ತಂದೆಗೆ ಒಂದು ರೂಪಾಯಿ ಕೊಟ್ಟಿದ್ದ. ಅದನ್ನೆಲ್ಲಿ ಅವಳು ಕಂಡಳೋ ಎಂಬ ಭಯ ಅವನಿಗೆ. ಏಕೆಂದರೆ ಅವನ ಪ್ರೇಯಸಿ ಸುಶೀಲಾರಾಣಿಗೆ ಇಂಥ ದಯಾಳುತನವೆಂದರೆ ಆಗುತ್ತಿರಲಿಲ್ಲ. ಸುಶೀಲಾರಾಣಿ ದೃಷ್ಟಿಗೆ ಬಿದ್ದ ನಿಮಿಷಾರ್ಧದಲ್ಲಿ ಈ ಎಲ್ಲ ವಿಚಾರಗಳು ರಾಜಾಸಾಹೇಬನ ಮನಸ್ಸಿನಲ್ಲಿ ಬಂದು ಅವನ ಮುಖದಲ್ಲಿ ಬದಲಾವಣೆಯಾಯಿತು. ತನ್ನ ಕಲ್ಯಾಣದ ಚಿಂತನೆಯಲ್ಲಿ ಮಗ್ನನಾಗಿದ್ದ ಆ ಭಿಕ್ಷುಕನು ಹೋದವನೋ ಇಲ್ಲವೋ ನೋಡಲೆಂದು ಹಿಂದೆ ಹೊರಳಿ ನೋಡಿದರೆ ಅವನು ಇನ್ನೂ ಅಲ್ಲಿಯೇ ನಿಂತುದು ಕಾಣಿಸಿತು.

"ಎಷ್ಟೊಂದು ತಡವಾಯಿತಲ್ಲ, ಸುಶೀಲಾರಾಣಿ ?" ಆತ ಅವಳನ್ನುದ್ದೇಶಿಸಿ ನಡುಗುವ ಧ್ವನಿಯಲ್ಲಿ ಹೇಳಿದ, "ಅಂತೂ ಬಂದೆಯಲ್ಲ."

"ರಾಜಾಸಾಹೇಬ್, ನೀವು ಆ ಮನುಷ್ಯನಿಗೆ ರೊಕ್ಕ ಕೊಟ್ಟಿರಾ ?"

" ಒಂದೇ ಕಾಸು. " ಗಡಿಬಿಡಿಯಿಂದ ರಾಜಾಸಾಹೇಬ ತೊದಲಿದ, "ಸಂಕಟದ ಪರಿಸ್ಥಿತಿ, ಹಿಂಡುಗಟ್ಟಲೆ ಉಪವಾಸವಿರುವ ಮಕ್ಕಳು ಅವನ ಮನೆಯಲ್ಲಿ, ಅವಕ್ಕೆ ಬೇರಾವ ಆಶೆಯೂ ಇಲ್ಲವಂತೆ. ರೊಟ್ಟಿಯಾದರೆ ಸಾಕಂತೆ. "

"ಆವನು ಆ ಹಣ ತಕ್ಕೊಂಡು ಸೇಂದಿ ಅಂಗಡಿಗೆ ಹೋದ."

"ಛೆ, ಯಾರನ್ನಾದರೂ ನೋಡಲು ಹೋಗಿರಬಹುದು."

ಕೋಮಲವಿಲಾಸದ ಅಟ್ಟವನ್ನೇರುತ್ತಿದ್ದ ಸುಶೀಲಾರಾಣಿ ತಡೆದು, "ಇಡಿಯ ಗೊಬ್ಬೂರಿನವರೆಲ್ಲ ನಿಮ್ಮನ್ನು ಹೀಗೆ ಸುಲಿಯುವುದನ್ನು ಮೊದಲು ನಿಲ್ಲಿಸಿರಿ. ಹೀಗೆ ಹಣ ಹಾಳು ಮಾಡಕೂಡದೆಂದು ಸಾವಿರ ಸಲ ಹೇಳಿದರೂ ನಿಮಗೆ ಪರಿವೆಯೇ ಇಲ್ಲ. ಇದ್ದ ಸ್ವಲ್ಪ ಹಣವನ್ನು ಎಚ್ಚರಿಕೆಯಿಂದ ಇರಿಸಿಕೊಳ್ಳಬೇಕಾದ ಆವಶ್ಯಕತೆಯಿರುವವರು ನೀವೊಬ್ಬರು ಮಾತ್ರ." ಎಂದು ತುಸು ಸಿಟ್ಟಿನಿಂದ ಹೇಳಿದಳು.

ಅವಳ ಮಾತು ಸುಳ್ಳಲ್ಲ. ಹನ್ನೊಂದು ಕಾಸು ಉಳಿದಿದ್ದರೂ ಅವನ್ನು ಭದ್ರವಾಗಿರಿಕೊಳ್ಳಬೇಕಾದ ಆವಶ್ಯಕತೆ ರಾಜಾಸಾಹೇಬನಿಗಿದ್ದಿತು. ಅವನೇನು ಶ್ರೀಮಂತನಾಗಿರಲಿಲ್ಲ. ಅವನಲ್ಲಿದ್ದುದಾದರೂ ಏನು? ಒಂದು ಕಾಸಿನ ಉತ್ಪನ್ನವೂ ಇರದ 'ರಾಜೇಸಾಹೇಬ್' ಎಂಬುದೊಂದು ಬಿರುದು, ಅಷ್ಟೆ. ಕಳ್ಳೀಕಾಯಿ ಜಿಲ್ಲೆಯಲ್ಲಿನ ಎಲ್ಲ ಜಾಗೀರದಾರರಲ್ಲಿ ತೀರ ಬಡವನಾದವನೆಂದರೆ ಅವನೇ.

ಒಂದು ಕಾಲದಲ್ಲಿ ಅವನ ಮನೆತನದ ಉತ್ಪನ್ನಕ್ಕೇನೂ ಕೊರತೆಯಿರಲಿಲ್ಲ. ಅವನ ತಂದೆಯವರ ಕೈಗೆ ಅವರ ಆಸ್ತಿಯ ಅಧಿಕಾರ ಸಿಕ್ಕಿದ ಕೆಲವೇ ದಿನಗಳಲ್ಲಿ ಅದು ಬಹಳ ದಿನ ಉಳಿಯಲಾರದೆಂಬ ಚಿಹ್ನೆಗಳು ಕಂಡುಬರಹತ್ತಿದವು. ಅಂಥ ದೊಡ್ಡ ಆಸ್ತಿಯ ಮೇಲ್ವಿಚಾರಣೆಯ ಕೆಲಸ ತಮ್ಮ ಏಕಮಾತ್ರ ಪುತ್ರನ ತಲೆಗೆ ಭಾರವಾಗಬಾರದೆಂಬ ಸದುದ್ದೇಶದಿಂದ ರಾಜಾಸಾಹೇಬರಿನ್ನೂ ಕಾಲೇಜಿನಲ್ಲಿದ್ದಾಗಲೇ ಅವರು ಎಲ್ಲವನ್ನೂ ಕಳೆದುಬಿಟ್ಟರು. ಹಣದ ಪೆಟ್ಟಿಗೆಯಲ್ಲಾಗಲೀ, ತಮ್ಮ ಜೇಬಿನಲ್ಲಾಗಲೀ ಒಂದು ರೂಪಾಯಿ ಕೂಡ ಉಳಿಯದಂತೆ ನೋಡಿಕೊಂಡರು. ಮಾರಲು ಬಾರದ 'ವತನೀ' ಭೂಮಿಗಳ ಮೇಲೂ ರಾಜಾಸಾಹೇಬ ತನ್ನ ಜೀವಿತವಲ್ಲೇ ತೀರಿಸಲಾರದಷ್ಟು ಸಾಲದ ಭಾರವನ್ನಿರಿಸಿದ್ದರು. ಅವರು ಸತ್ತಾಗ ಯಾರು ಯಾರೋ ಆವರ ಸ್ಮಶಾನ

ಯಾತ್ರೆಗೆ ಖರ್ಚು ಮಾಡಬೇಕಾಗಿ ಬಂದಿತ್ತು. ಆಗ ರಾಜಾಸಾಹೇಬನಿಗೆ ಇಪ್ಪತ್ತರ ಪ್ರಾಯ. ಆತ ಇಂಟರಿನಲ್ಲಿ ಓದುತ್ತಿದ್ದ.

ಸುಶೀಲಳೊಡನೆ ಲಗ್ನವಾಗಲು ಒಪ್ಪಿ ಇಂದಿಗೆ ಆರು ತಿಂಗಳಾಗಿದ್ದವು. ಅದಕ್ಕೂ ಹಿಂದೆ ಅವನನ್ನು ಯಾವ ಚಿಂತೆಯೂ ಕಾಡಿರಲಿಲ್ಲ. ವ್ಯರ್ಥವಾದ ವ್ಯಸನಗಳಲ್ಲಿ ವೇಳೆ ಕಳೆಯುವ ವ್ಯಕ್ತಿಯೂ ಅವನಾಗಿರಲಿಲ್ಲ. ಅವನದು ನಿರಾಡಂಬರದ ಸಾದಾ ಜೀವನ. ಅವನ ತಂದೆ ಜೀವಿಸಿದ್ದಾಗಲೇ ಆತ ಒಂದೆರಡು ಕ್ಲಬ್ಬುಗಳ ಸದಸ್ಯನಾಗಿದ್ದ. ಅವನ ಬಿರುದಿಗೆ ಜೆಲಿ ಕೊಟ್ಟು ಹತ್ತೆಂಟು ರೂಪಾಯಿಗಳ ಸಾಲ ಕೊಡುವವರೂ ಇದ್ದರು. ಅದೇ ಹಣದ ಸಹಾಯದಿಂದ ಅಲ್ಲಿ ಕೂಡುತ್ತಲಿದ್ದ ಇನ್ನಿತರ ಬಿರುದಿನವರೊಡನೆ ಸೇರಿ ಇಸ್ಪೀಟು ಆಟವಾಡಿ ಹತ್ತಿಪ್ಪತ್ತು ರೂಪಾಯಿ ದೊರಕಿಸಿ, ಹಿಂದಿನ ಸಾಲ ತೀರಿಸಿ ಬಿಡುತ್ತಿದ್ದ. ಹಣದ ವಿಚಾರದಲ್ಲಿ ಅವನು ಪ್ರಾಮಾಣಿಕನಾಗಿದ್ದುದರಿಂದ ಅವನು ಎಲ್ಲರಿಗೂ ಬೇಕಾದವನಾಗಿದ್ದ. ಅವನ ತಂದೆ ತೀರಿಹೋದ ನಂತರವೂ ಇದೇ ಅವನ ಕಾಯಕವಾಯಿತು. ಈಗಂತೂ ಅವನು ಅತ್ತೀಗೇರಿಯ ರಾಜಾಸಾಹೇಬನಲ್ಲವೇ! ಬೇಡಿದಾಗ ಸಾಲವೂ ಸಿಗುತ್ತಿದ್ದಿತು. ತಂದೆ ಸತ್ತು ಹೋದರೂ ಅವನಿಗೆ ಯಾವ ತೊಂದರೆಯೂ ಬರಲಿಲ್ಲ. ಇಸ್ಪೀಟಿನ ಆಟದಲ್ಲಿ ಪ್ರಾವೀಣ್ಯತೆ ಗಳಿಸಿದ್ದಂತೆ ಆತ ಕ್ರಿಕೆಟ್, ಹಾಕಿ, ಟೆನಿಸ್, ಬ್ಯಾಡ್ಮಿಂಟನ್ ಮೊದಲಾದ ಆಟಗಳಲ್ಲೂ ಪ್ರಾವೀಣ್ಯತೆ ಪಡೆದಿದ್ದ. ಅತ್ತೀಗೇರಿ ಅಧಿಕಾರ ದೊರೆತ ನಂತರ "ಲಾರ್ಡ್ಸ್ ಕ್ಲಬ್" ಸದಸ್ಯನಾದುದೂ ಆಗಿತ್ತು. ಆ ಕ್ಲಬ್ಬಿನ ಸದಸ್ಯರ ಮಕ್ಕಳಿಗೂ ಪ್ರವೇಶ ಸಿಗುವ ಹೊಸ ನಿಯಮವೊಂದು ಅಲ್ಲಿ ಪಾಸಾದೊಡನೆ ಸದಸ್ಯರ ಸಂಖ್ಯೆಯೂ ಬೆಳೆಯಿತು. ಆ ಚಿಕ್ಕ ಸದಸ್ಯರಿಗೆ ಆಟಗಳ ಪಾಠ ಕಲಿಸಲು ಓರ್ವ ಶಿಕ್ಷಕನ ಅವಶ್ಯಕತೆಯೂ ಕಂಡುಬಂದಿತು. ರಾಜಾಸಾಹೇಬನಿಗಿಂತ ಸಮರ್ಥ ಶಿಕ್ಷಕರಾದರೂ ಯಾರು ? ಸರಿ, ತಿಂಗಳಿಗೆ ನೂರು ರೂಪಾಯಿ ಗೌರವ ಧನದ ಮೇಲೆ ರಾಜಾಸಾಹೇಬನಿಗೆ ಆ ಕೆಲಸದ ಜವಾಬ್ದಾರಿ ಒಪ್ಪಿಸಲಾಯಿತು. ಈ ನೂರು ರೂಪಾಯಿಗಳೇ ರಾಜಾಸಾಹೇಬನ ಉತ್ಪನ್ನ. ಆ ಕೆಲಸ, ಆ ಸಂಬಳಗಳೊಡನೆ ಅದೇ ಕ್ಲಬ್ಬಿನಲ್ಲಿ ವಾಸವಾಗಿರಲು ಒಂದು ಕೋಣೆಯೂ ಅವನಿಗೆ ದೊರೆಯಿತು. ಬಾಡಿಗೆಯ ಚಿಂತೆ ತಪ್ಪಿತು. ಫರ್ನಿಚರ ಕೂಡ ಪುಕ್ಕಟೆಯಾಗಿ ದೊರೆತವು. ಆ ನಗರದ ಮತ್ತು ಜಿಲ್ಲೆಯ ರಾಜರು,

ದೇಸಾಯರು, ಜಾಗೀರದಾರರು ಮತ್ತು ಅವರ ಮಕ್ಕಳ ಸ್ನೇಹ ಲಭಿಸಿತು. ಅದರೊಡನೆ, ಆಟಪಾಟಗಳಿಂದಾಗಿ ಅಚ್ಚುಕಟ್ಟಾಗಿ ಬೆಳೆದ ದೇಹದ ಸೌಖ್ಯವಿರುವಾಗ ಇಲ್ಲದ ಯಾವುದನ್ನೋ ಚಿಂತಿಸುವವರಲ್ಲಿ ಯಾವ ಪುರುಷಾರ್ಥ? ಅಂತೂ ರಾಜಾಸಾಹೇಬ ಪೂರ್ಣ ತೃಪ್ತನಾಗಿದ್ದ.

ರಾಜಾಸಾಹೇಬನಿಗೆ ತೀರ ವಿರುದ್ಧವಾದ ದೃಷ್ಟಿ ಸುಶೀಲಳದು. ಅವನದು ಕೇವಲ ನೂರು ರೂಪಾಯಿಗಳ ಉತ್ಪನ್ನವೆಂದು ತಿಳಿದೊಡನೆ ಅವಳು ಅಷ್ಟನ್ನೇ ನಂಬಿ ಅವನನ್ನು ಲಗ್ನವಾಗಲು ಹಿಂಜರಿದಳು. ಅವನನ್ನು ತುಚ್ಛೀಕರಿಸಿ ಮಾತನಾಡಿದಳು. ಆ ಮಾತಿನ ವೈಖರಿಯನ್ನು ಕಂಡವರು, 'ಇವಳು ಕುಬೇರನ ಮೊಮ್ಮಗಳಿರಬೇಕು. ಅಂಥವಳಿಗೆ ನೂರು ರೂಪಾಯಿಗಳೆಂದರೇನು? ಪೈಗಳಿದ್ದಂತೆ. ಅಷ್ಟು ಹಣವನ್ನವಳು ಭಿಕ್ಷುಕರಿಗೆ ದಾನ ಕೊಡುತ್ತಿರಬೇಕು' ಎನ್ನಬಹುದಿತ್ತು. ಅವಳ ಈ ರೀತಿಯ ವರ್ತನೆಯಿಂದಾಗಿಯೇ, 'ನನ್ನಲ್ಲಿ ಒಂದು ಸಂಸಾರಕ್ಕೆ ಬೇಕಾಗುವ ಹಣವಿಲ್ಲವೇ?' ಎಂದು ರಾಜಾಸಾಹೇಬ ಯೋಚಿಸುವಂತಾಗಿತ್ತು. ಅವನ ಈ ಸಂಶಯವನ್ನು ಅರಿತುಕೊಂಡು ಅದನ್ನು ಬಲಗೊಳಿಸಲೆಂದೇ ಅವಳು, ಹಣವೆಂದರೇನು? ಅದನ್ನು ಗಳಿಸುವ ರೀತಿಗಳೇನು? ಅವನೇಕೆ ಹಣ ಗಳಿಸಲು ಪ್ರಯತ್ನಿಸಬಾರದು? ಎಂದು ಮೊದಲಾಗಿ ಪ್ರಶ್ನಿಸಿ ಭಾಷಣಗಳನ್ನು ಬಿಗಿಯುತ್ತಿದ್ದಳು.

ಈ ದಿನವೂ ಅವಳು ಇದೇ ಭಾಷಣ ಪ್ರಾರಂಭಿಸಿದ್ದಳು. ಅಟ್ಟದ ಮೆಟ್ಟಲುಗಳ ಮೇಲಿದ್ದಾಗ ಪ್ರಾರಂಭವಾದ ಆ ಮಾತು ಅವರು ಕೋಣೆಯೊಂದನ್ನು ಪ್ರವೇಶಿಸಿ ಕುರ್ಚಿಗಳ ಮೇಲೆ ಕುಳಿತರೂ ನಿಲ್ಲಲಿಲ್ಲ. ಅಷ್ಟರಲ್ಲಿ ಹೋಟಲಿನ ಆಳು ಊಟದ ತಟ್ಟೆ ತಂದುದನ್ನು ಕಂಡ ರಾಜಾಸಾಹೇಬನಿಗೆ ತುಸು ಸಮಾಧಾನವಾಯಿತು.

"ಮುಂಜಾನೆಯಿಂದ ಏನು ಮಾಡುತ್ತಿದ್ದಿ, ಸುಶೀಲಾರಾಣಿ?"

"ರಾಮರಾಯರನ್ನು ಕಾಣಲು ಥಿಯೆಟರಿಗೆ ಹೋಗಿದ್ದೆ."

"ಏಕೆ?"

"ಅವರ ನಾಟಕದಲ್ಲಿ ನಾನೊಂದು ಪಾತ್ರ ವಹಿಸಬೇಕೆಂದು ಅವರಿಂದ ಕರೆ ಬಂದಿತ್ತು."

"ಒಳ್ಳೆಯದಾಯಿತು."

"ಅಂದರೆ........?"

"ಮಹತ್ವದ ಪಾತ್ರ ಸಿಕ್ಕಬಹುದಲ್ಲ ?"

"ಊರೂರು ತಿರುಗುವ ಕಂಪನಿಯಲ್ಲಿ ತಾನೆ ?"

"ನೀನನ್ನುವದರ ಅರ್ಥವಾಯಿತು." ಅವಳ ಮಾತಿನ ಅರ್ಥ ಹೊಳೆಯದಿದ್ದರೂ ರಾಜಾಸಾಹೇಬ ಹೇಳಿದ. ರಾಮರಾಯರ ಕಂಪನಿ ಮೊದಲ ದರ್ಜೆಯದೆಂದೇ ಆತನ ನಂಬುಗೆಯಾಗಿತ್ತು.

"ಕಂಪನಿಯವರು ನಾಟಕವನ್ನಾಡಲು ಪ್ರಾರಂಭಿಸಿದಾಗಿನಿಂದಲೂ ಅವರು ನನಗೆ ಆ ಪಾತ್ರ ಕೊಟ್ಟಿದ್ದರೆ ಆ ಮಾತು ಬೇರೆ. ಕರ್ನಾಟಕದ ಪ್ರಮುಖ ನಗರಗಳನ್ನೆಲ್ಲ ಸುತ್ತಿ ಈಗ ಬೆಳಗಾವಿಗೆ ಬಂದಿದೆ ಆ ಕಂಪನಿ. ನಾನು ಅಲ್ಲಿ ಹೋಗಿ ಸೇರಿಕೊಳ್ಳಬೇಕು."

"ಬೆಳಗಾವಿ ನಿನ್ನ ಮನಸ್ಸಿಗೂ ಬರಬಹುದು."

"ಅದೇಕೆ ?"

"ಸುಸಂಸ್ಕೃತ ಜನರ ಸಹವಾಸ........"

"ನನಗೆ ಕ್ರಿಕೆಟ್ ಆಟ ಬರುತ್ತದೇನು ?"

"ಓಹೋ ಮರೆತಿದ್ದೆ, ಆದರೂ ಒಳ್ಳೆಯ ನಗರ."

"ಈಗಂತೂ ಮಳೆಗಾಲದ ಪ್ರಾರಂಭ. ಅಲ್ಲಿಗೆ ಹೋಗಲು ಬೇಸರ. "

"ಹಾಗಾದರೆ ನಿನ್ನ ಇಚ್ಛೆಯೇನು ಸುಶೀಲಾರಾಣಿ ?"

ರಾಜಾಸಾಹೇಬನ ಮನಸ್ಸಿನಲ್ಲಿ ಗೊಂದಲವೆದ್ದಿತ್ತು. ಅವನು ಆಡುತ್ತಿದ್ದ ಪ್ರತಿಯೊಂದು ಮಾತಿನಿಂದಲೂ ವಿರುದ್ಧ ಪರಿಣಾಮವಾಗುತ್ತಿದ್ದಿತು. ಸುಶೀಲಾರಾಣಿ ಆನಂದದಿಂದಿರುವ ಸಂದರ್ಭಗಳನ್ನೂ ಕಂಡಿದ್ದನಾತ. ಆದರೆ ಇಂದು ಅವಳ ಮನಸ್ಸು ನೆಮ್ಮದಿಯಾಗಿರಲಿಲ್ಲ. ಇತ್ತೀಚೆಗೆ ಅವಳು ತನ್ನ ಮಾತುಗಳೆಲ್ಲವನ್ನೂ ವಿರೋಧಿಸುತ್ತ ಬರುತ್ತಿದ್ದುದು ನೆನಪಾಯಿತು. ಪಾಪ, ಅವಳಾದರೂ ಏನು ಮಾಡಿಯಾಳು, ಅವಳಿಗೆ ಪ್ರತಿಕೂಲ ಕಾಲ ಬಂದಿರುವಾಗ? ಎಂದು ಆತ ತನ್ನಷ್ಟಕ್ಕೆ ತಾನೇ ಸಮಾಧಾನ ತಂದುಕೊಂಡ.

ಇಂಥ ಎಲ್ಲ ಸಂದರ್ಭಗಳಲ್ಲೂ ಮೇಲಿನಂತೆ ಸಮಾಧಾನ ತಂದುಕೊಳ್ಳುವುದು ರಾಜಾಸಾಹೇಬನ ರೂಢಿಯಾಗಿದ್ದಿತು. ಅದು ಯೋಗ್ಯ ಸಮಾಧಾನವೂ ಹೌದು. ಪ್ರತಿಕೂಲ ಕಾಲವೆಂದು ಭಾವಿಸುವಷ್ಟು ಕೆಟ್ಟ ಸ್ಥಿತಿಯಲ್ಲಿ

ಅವಳೇನೂ ಇರಲಿಲ್ಲ; ಮುಖ್ಯವಾಗಿ ಅವಳ ತಾಯಿಯದು ದುಂದುಗಾರಿಕೆಯ ಜೀವನ. ತನ್ನ ಬಡತನವನ್ನು ಮರೆತು ವೆಚ್ಚ ಮಾಡುವ ಸ್ವಭಾವ. ಅದ ರಿಂದಾಗಿ ಸುಶೀಲಾರಾಣಿ ನಾಟಕಗಳಲ್ಲಿ ಪಾತ್ರ ವಹಿಸಿ ಹಣ ಗಳಿಸಬೇಕಾಗಿರ ಲಿಲ್ಲವೇ ? ಕುಲೀನ ಮನೆತನದ ಹೆಂಗುಸರು ನಟಿಯರಾಗುವದೆಂದರೆ ಗೌರ ವದ ಮಾತಲ್ಲವೆಂದೇ ಅವಳ ಕಲ್ಪನೆ. ಹೀಗಿರುವಾಗ ಅವಳು ನಟಿಯಾಗ ಬೇಕಾದುದಕ್ಕೆ ಕಾರಣ ಪ್ರತಿಕೂಲ ಗ್ರಹಗಳಲ್ಲವೇ ? ಇದು ಮೊದಲ ಕಾರಣ. ಪ್ರತಿಕೂಲ ಗ್ರಹವನ್ನು ಎತ್ತಿ ತೋರಿಸಲು ಎರಡನೆಯ ಕಾರಣವೆಂದರೆ ನಟಿ ಯಾಗಿ ಕೆಲಸ ಮಾಡಿದರೂ ಅವಳು ಬಯಸಿದ್ದ ಸ್ಥಾನ ಅವಳಿಗೆ ಸಿಕ್ಕಿರಲಿಲ್ಲ. ರಾಜಾಸಾಹೇಬನೊಡನೆ ಅವಳ ಲಗ್ನದ ಮಾತು ನಿಶ್ಚಯವಾದ ನಂತರ ಅವಳಿಗೆ ಮಹತ್ವದ ಪಾತ್ರಗಳೇನೋ ಸಿಕ್ಕಿದ್ದವು. ಆದರೆ ಮುಖ್ಯ ಪಾತ್ರಗಳು ಸಿಕ್ಕಿರ ಲಿಲ್ಲ. ಆವಳಿಗೆ ಅಂಥ ತೊಂದರೆಗಳು ಇರಲಿಲ್ಲವಾದರೂ ಆವಳನ್ನು ಪ್ರೀತಿಸುವ ರಾಜಾಸಾಹೇಬನಿಗೆ ಮಾತ್ರ ಮೇಲಿನಂತೆ ಎಲ್ಲವೂ ಪ್ರತಿಕೂಲವಾಗಿಯೇ ಕಾಣುತ್ತಿತ್ತು.

"ನಿನ್ನ ಇಚ್ಛೆಯೇನು ? ಎಂದು ನೀವು ಕೇಳಿದಿರಲ್ಲ ರಾಜಾಸಾಹೇಬ, ಅದರ ಉದ್ದೇಶವೇನು ?" ಎಂದು ಸುಶೀಲಾರಾಣಿ ಕೇಳಿದೊಡನೆ, ತಾನು ಹಾಗಂದುದೇಕೆ ? ಎಂದು ರಾಜಾಸಾಹೇಬ ಯೋಚಿಸಹತ್ತಿದ.

"ಏನಿಲ್ಲ ಸುಶೀಲಾರಾಣಿ, ರಾಮರಾಯರು ಈಗ ನಿನ್ನನ್ನೇ ನಂಬಿ ಕೊಂಡಂತಿದೆ. ನೀನು ಅಲ್ಲಿಗೆ ಹೋಗದಿದ್ದರೆ ಅವರ ಮನಸ್ಸಿಗೆ ಎಂಥ ಆಘಾತ ವಾಗಬಹುದು !" ಎಂದ.

"ರಾಮರಾಯರನ್ನು ಒಲಿಸಿಕೊಂಡಿರಲು ಪ್ರಯತ್ನಿಸಿ ನನಗೆ ಸಾಕಾಗಿ ಹೋಗಿದೆ. ಅವರಿಂದ ಹೆಚ್ಚಿನ ಲಾಭವೂ ಸಿಕ್ಕುವಂತಿಲ್ಲ. ನಮ್ಮೂರಿನಲ್ಲಿ ಕಂಪನಿಯಿರುವಾಗ ನನಗೆಂದೂ ಪಾತ್ರ ಕೊಡಲಿಲ್ಲ. ಪ್ರವಾಸದಲ್ಲಿದ್ದಾಗ ಮಾತ್ರ ನಾನು ಬೇಕು. ಪ್ರವಾಸ............ಬೇರೆ ಊರಿನ ವಾಸ............ ಥೂ........"

"ಹೌದು. ಅದು ಅಸಹನೀಯ........"

"ಅದಲ್ಲ, ನೀವು........"

"ನಾನೇ ? ನನ್ನಿಂದೇನಾಗಿದೆ ಸುಶೀಲಾರಾಣಿ ?"

"ಹೌದು, ನಿಮ್ಮಿಂದ ಏನೂ ಆಗುತ್ತಿಲ್ಲ? ನೀವೇ ಇದಕ್ಕೆ ಕಾರಣ. ನೀವೇಕೆ ಸಾಹಸಪಟ್ಟು ಇನ್ನಿಷ್ಟು ಹಣ ಗಳಿಸಬಾರದು?"

ರಾಜಾಸಾಹೇಬನ ಮುಖದಿಂದ ಭಾರವಾದ ಶ್ವಸನದ ಉಸಿರೊಂದು ಹೊರಬಂದಿತು. ಅದೇ ಆ ಹಳೆಯ ವಿಷಯಕ್ಕೇನೆ ಅವಳು ಬಂದು ತಲಪಿದ್ದಳು.

"ನಮ್ಮ ಲಗ್ನ ನಿಶ್ಚಯವಾಗಿ ಆರು ತಿಂಗಳು ತೀರಿಹೋದವು. ಆದರೂ ನಮ್ಮಿಬ್ಬರ ಲಗ್ನವಾಗಲಿಲ್ಲ, ಅದರ ಭರವಸೆಯೂ ಇಲ್ಲ. ಲಗ್ನವಾಗುವ ಮೊದಲೆ ನಾವಿಬ್ಬರೂ ಸತ್ತುಹೋಗುವೆವೋ ಏನೋ?"

"ಆದರೆ ಸುಶೀಲಾರಾಣಿ?"

"ಏನು?"

"ನೀನು ಹೂಂ ಅಂದರೆ ಸಾಕು, ಇಂದೇ ಲಗ್ನವಾಗಬಹುದು."

"ಸಾಕು, ಆ ಮಾತೇ ಬೇಡ. ನಿಮ್ಮ ಆ ನೂರು ರೂಪಾಯಿ ಸಂಬಳ ನಂಬಿ ನಾನು ಲಗ್ನವಾಗಲೇ? ಸಾಯುವ ತನಕ ಬಡತನದಲ್ಲೇ ನರಳಬೇಕಾದೀತು. ನಿಮ್ಮ ಗಳಿಕೆ ಹೆಚ್ಚಿಸುವ ಹಂಚಿಕೆಯನ್ನು ಮೊದಲು ಮಾಡಿರಿ."

"ನಾನೇನು ಕಡಿಮೆ ಪ್ರಯತ್ನಿಸಿದ್ದೇನೆಯೆ? ನಮ್ಮ ಕ್ಲಬ್ಬಿನ ಅಧ್ಯಕ್ಷರಿಗೆ 'ವಿಸ್ಕಿ' ಪಾರ್ಟಿ ಕೊಟ್ಟು ನನ್ನ ಸಂಬಳ ಹೆಚ್ಚಿಸಲು ಕೇಳಿಕೊಂಡೆ ಅವರು ಯಥೇಚ್ಛವಾಗಿ ಕುಡಿದನಂತರ ನನ್ನನ್ನೇ ಬೈದರು. ಈಗಿದ್ದ ಕೆಲಸದಿಂದ ತೆಗೆದು ಹಾಕಲಿಲ್ಲವಲ್ಲಾ ನನ್ನ ಪುಣ್ಯ. ಅಷ್ಟು ಉಪಕಾರ ಮಾಡಿದ್ದೇ ನನಗೆ ಸಾಕಾಯಿತು."

"ಕ್ಲಬ್ಬಿನಲ್ಲಿ ನೀವು ಎಲ್ಲರಿಗೂ ಬೇಕಾದವರು. ಆದರೂ........"

"ಅದರಿಂದೇನು?"

"ಅಯ್ಯೋ, ನೀವು ಮನಸ್ಸು ಮಾಡಿದರೆ ಆ ಅಧ್ಯಕ್ಷರನ್ನೇ ಕಿತ್ತುಹಾಕಿಸಿ ರಾವರಾಜೆಯವರನ್ನು ಆರಿಸಿ ತರಬಹುದಾಗಿತ್ತು. ಅವರು ಅಧ್ಯಕ್ಷರಾಗಿದ್ದರೆ ನಿಮ್ಮ ಸಂಬಳವೂ ಇನ್ನೂರಕ್ಕೆ ತಲಪುತ್ತಿದ್ದಿತು. ನೀವು ಮನಸ್ಸು ಮಾಡಿದರೆ ಅದು ಸಾಧ್ಯವೆಂದು ನೀವೇ ಹೇಳಿರಲಿಲ್ಲವೇ?"

"ಏನನ್ನುವಿ ಸುಶೀಲಾರಾಣಿ, ರಾವರಾಜೆಯಂಥ ಕೆಟ್ಟ ಮನುಷ್ಯ ಈ

ನಗರದಲ್ಲಿ ಬೇರೊಬ್ಬನಿಲ್ಲ. ನಾನೊಮ್ಮೆ ಅವನ ಬಲೆಗೆ ಬಿದ್ದರೆ ಆಯಿತು. ನನ್ನ ವ್ಯಕ್ತಿತ್ವವೇ ನಷ್ಟವಾಗುವದು."

"ಅವನು ಈ ನಗರದಲ್ಲೇ ಶ್ರೀಮಂತನೆಂಬುದನ್ನು ಮರೆಯಕೂಡದು. ಅವನು ನಿಮಗೆ ಬೇಕಾದಂಥ ಸಹಾಯ ಮಾಡಬಹುದು. ಅಂಥವನನ್ನು ನೀವು ತಿರಸ್ಕರಿಸಿ ಅವಮಾನಗೊಳಿಸುತ್ತೀರಿ."

"ಅವಮಾನಗೊಳಿಸಿದೆನೇ ?"

"ಇಲ್ಲವೆ ? ಅಂದು ಕ್ಲಬ್ಬಿನಲ್ಲಿಯ ಕಾರ್ಯಕ್ರಮಕ್ಕೆ ಅವನಿಗೆ 'ಕಾಂಪ್ಲಿಮೆಂಟರಿ' ಪಾಸ್ ಕಳಿಸಲಿಲ್ಲವೇ ?"

"ಹೌದು. ಅವನು ಕಾರ್ಯಕ್ರಮ ನೋಡಲೂ ಬಂದನಲ್ಲ? ಈ ಶ್ರೀಮಂತರಿಗೆ ಪುಕ್ಕಟೆ ಸಿಕ್ಕುವುದರ ಮೇಲೆ ಅತಿ ಪ್ರೀತಿ. ಮುಂಬಯಿಯ ವರ್ತಕನ ವಿಚಾರವೂ ಅಷ್ಟೆ. ಕಳೆದ ವರ್ಷ ಅವನು ಇಲ್ಲಿಗೆ ಬಂದಿದ್ದಾಗ...."

"ಅದಂತೂ ನಿಮ್ಮ ಮೂರ್ಖತನ. ಅವನ ಸಹಾಯದಿಂದಂತೂ ಬೇಕಾದಷ್ಟು ಹಣ ಗಳಿಸಬಹುದಿತ್ತು. ಅದಿರಲಿ, ರಾವರಾಜೆಯವರ ಅಲ್ಪ ಸಹಾಯದಿಂದಲೇ ಬೇಕಾದ್ದನ್ನು ಮಾಡಬಹುದಿತ್ತು."

"ಸುಶೀಲಾರಾಣಿ, ಇದರಲ್ಲಿ ಕೆಲ ವಿಷಯ ಯೋಚಿಸಬೇಕು. ಲಾರ್ಡ್ಸ್ ಕ್ಲಬ್ಬಿನ ಎಲ್ಲ ಸದಸ್ಯರೂ ನನ್ನ ಬಗ್ಗೆ ವಿಶ್ವಾಸವಿಟ್ಟುಕೊಂಡಿದ್ದಾರೆ. ಅವರ ವಿಶ್ವಾಸದ ದುರ್ಲಾಭ ಪಡೆದು ರಾವರಾಜೆಯಂಥವನನ್ನು ಅಧ್ಯಕ್ಷನಾಗಿ ಮಾಡಲು ನನ್ನ ವಿವೇಕ ಒಪ್ಪಲಾರದು. ಅದು ಮೋಸಗಾರಿಕೆ........"

"ಇದು ಬರೀ ಮೂರ್ಖತನ" ಎಂದಳು ಸುಶೀಲಾರಾಣಿ.

ರಾಜಾಸಾಹೇಬನ ಬಾಯಿಂದ ಮಾತು ಹೊರಡದಂತಾಯಿತು. ಅವನ ಕಪಾಳಕ್ಕೆ ಒಂದೇಟು ಬಿಗಿದಂತಾಯಿತು. ರಾವರಾಜೆಯ ಬಗೆಗೆ ಮಾತನಾಡಲು ರಾಜಾಸಾಹೇಬನಿಗೆ ಮನಸ್ಸಿರಲಿಲ್ಲ. ಹಿಂದೆಯೂ ಸುಶೀಲಾರಾಣಿ ಅವನ ಪ್ರಸ್ತಾಪವನ್ನು ಅನೇಕ ಸಲ ಎತ್ತಿದ್ದುಂಟು. ರಾವರಾಜೆಯು ಹಣದ ವಿಷಯದಲ್ಲಿ ಅಪ್ರಾಮಾಣಿಕನಾಗಿ ವರ್ತಿಸಿ ಹಿಂದೆ ಒಂದೆರಡು ಸಲ ಜೈಲಿಗೆ ಹೋಗುವ ಪ್ರಸಂಗ ಬಂದೂ ಕೇವಲ ಹಣದ ಬಲದ ಮೇಲೆ ಪಾರಾಗಿದ್ದುದನ್ನು ಅವನು ಹಿಂದೆಯೂ ಅವಳಿಗೆ ತಿಳಿಸಿ ಹೇಳಲು ಪ್ರಯತ್ನಿಸಿದ್ದ. ಆದರೆ ಅವನ ಮಾತು ಸುಶೀಲಾರಾಣಿಯ ಮೇಲೆ ಯಾವ ಪರಿಣಾಮವನ್ನೂ ಮಾಡಿರಲಿಲ್ಲ. ಎಂತಲೇ

ಅವನ ಮಾತು ಬಂದೊಡನೆ ಮೌನವಾಗಿರುವುದೇ ಸರಿಯಾದುದೆಂದು ಕಂಡು ಕೊಂಡು ರಾಜಾಸಾಹೇಬ ಸುಮ್ಮನಾದ.

"ಅದಿರಲಿ, ಮುಂಬಯಿಯ ಆ ವರ್ತಕನಿಂದಲೂ ಬೇಕಾದಷ್ಟು ಲಾಭ ಮಾಡಿಕೊಳ್ಳಬಹುದಿತ್ತು." ಸುಶೀಲಾರಾಣಿ ಎಂದಳು.

"ಸುಶೀಲಾರಾಣಿ, ಎಂಥ ಮಾತಿದು? ಮೋಜಿಗಾಗಿ ಕ್ರಿಕೆಟ್ ಆಡುತ್ತಿದ್ದವನಿಂದ ಯಾವ ಲಾಭ?"

"ನೀವು ಅವನಿಗೆ ಮಾಡಿದ ಉಪಕಾರಕ್ಕೆ ಬೆಲೆಯಿಲ್ಲವೇ? ಅವನಿಗೆ ಸಿಕ್ಸರ್ ಹೊಡೆಯಲು ಕಲಿಸಲು ನಿಮ್ಮ ಅಮೌಲ್ಯ ವೇಳೆ ಹಾಳು ಮಾಡಿ ಕೊಳ್ಳಲಿಲ್ಲವೇ?"

"ನನ್ನ ಹೊರತು ಬೇರೆಯವರಾರೂ ಅಲ್ಲಿರಲಿಲ್ಲ. ತಪ್ಪು ಮಾಡುತ್ತಿದ್ದವನನ್ನು ತಿದ್ದುವದು ನನ್ನ ಕರ್ತವ್ಯವಾಗಿತ್ತು. ತುಸು ಹೇಳಿಕೊಟ್ಟೆ. ಅಷ್ಟು ಆಧಾರದ ಮೇಲೆ ಅವನಿಂದ ಸಹಾಯ ಬಯಸುವದು ಸಭ್ಯತನವಾಗಲಾರದು. ಇಲ್ಲಿಂದ ಹೋದನಂತರ ಅವನು ನನ್ನನ್ನು ಮರೆತೇ ಬಿಟ್ಟಿರಬಹುದು."

"ಅದಾದ ಒಂದೆರಡು ತಿಂಗಳಿನ ನಂತರ ನೀವು ಮುಂಬಯಿಗೆ ಹೋಗಿದ್ದಾಗ ಅವನು ಭೇಟಿಯಾಗಿದ್ದನೆಂದು ನೀವೇ ಹೇಳಲಿಲ್ಲವೇ? ನಿಮ್ಮ ಗುರುತು ಹಿಡಿದನಷ್ಟೆ? ಅಂದಮೇಲೆ ಅವನು ನಿಮ್ಮನ್ನು ಮರೆತಂತಾಯಿತೇ?"

"ಹೌದು ಚೌಪಾಟಿಯಲ್ಲಿ ನಾವಿಬ್ಬರೂ ಭೇಟಿಯಾದೆವು. ನಾನು ಅವನನ್ನು ನೋಡಿದೆ. ಅವನೂ ನನ್ನತ್ತ ದೃಷ್ಟಿ ಬೀರಿ ತುಸು ಸನ್ನೆ ಮಾಡಿ ಮುಂದೆ ಹೋದ. ಆ ಸನ್ನೆಯನ್ನೇ ಆಮಂತ್ರಣವೆಂದು ಭಾವಿಸಿ ಅವನ ಮನೆಗೆ ಹೋಗಿ ಅವನ ತೊಡೆಗಳ ಮೇಲೆ ಕುಳಿತು, 'ಅಜ್ಜಾ, ನನಗೆ ತುಸು ಸಹಾಯ ಮಾಡು' ಎಂದು ಕೇಳಲಾದೀತೇ? ಹಾಗೆ ಮಾಡಿದರೂ ಅವನು ತನ್ನ ಜೇಬುಗಳಿಂದ ಹಣ ತೆಗೆದು ನನಗೆ ಕೊಡಬಹುದೇ ಅಥವಾ ನನ್ನನ್ನು ದತ್ತು ತೆಗೆದುಕೊಳ್ಳಬಹುದೇ?"

"ಅಸಾಧ್ಯವಾದದ್ದನ್ನು ಅವನು ನಿಮಗೆ ಕೊಡಬಹುದೆಂದು ನಾನು ಭಾವಿಸುತ್ತಿಲ್ಲ. ಯಾವದಾದರೊಂದು ಕೆಲಸ ದೊರಕಿಸಲು ಅನುಕೂಲಮಾಡಿ ಕೊಡಬಹುದಿತ್ತು. ಅದರಿಂದ ನಿಮ್ಮ ಉತ್ಪನ್ನ ಬೆಳೆಯಿಸಿಕೊಳ್ಳಲು ಸುಲಭವಾಗುತ್ತಿರಲಿಲ್ಲವೇ?"

"ಆ ವರ್ತಕನ, ಅಂದರೆ ಸುಂದರರಾಯನ ಪರಿಚಯ ನಿನಗಿಲ್ಲವೆಂದೇ ನೀನು ಹೀಗೆ ಹೇಳುತ್ತಿರುವಿ, ಸುಶೀಲಾರಾಣಿ. ಅಷ್ಟು ಸುಲಭವಾಗಿ ಯಾರ ಕೈಗೂ ಸಿಕ್ಕುವ ಆಸಾಮಿ ಅವನಲ್ಲ. ಚೌಪಾಟಿಯಲ್ಲಿ ಕಂಡಾಗ ಒಂದು ಮಾತನ್ನೂ ಆಡಲಿಲ್ಲ. ಮೇಲಾಗಿ ಹತ್ತೆಂಟು ನಿಮಿಷಗಳ ಪರಿಚಯ ಮಾತ್ರ ದಿಂದ ಅಂಥ ಉಪಕಾರ ಬಯಸಿದರೆ ಸಾಧ್ಯವಾದೀತೇ ?"

"ನಿಮಗೂ ನನಗೂ ಜಗಳ ಬರುವುದೂ ಇಲ್ಲಿಯೇ. ನೀವು ವಿಚಿತ್ರ ಸ್ವಭಾವದವರು, ದುರಭಿಮಾನಿಗಳು........"

"ದುರಭಿಮಾನವೆಂದು ನನಗನ್ನಿಸುವದಿಲ್ಲ. ಅದಿರಲಿ, ನಿನ್ನೆ ಗೆಳೆಯ ನೊಬ್ಬನೊಡನೆ ಸುಂದರರಾಯನ ಬಗ್ಗೆ ಮಾತಾಡುವಾಗ ಮುಂಬಯಿಯ ವಿಚಾರ ಬಂತು. ಅಲ್ಲಿ ಹಣ ಗಳಿಸಲು ಬೇಕಾದ ಅನುಕೂಲತೆಗಳಿವೆಯೆಂದು ಆತ ಹೇಳಿದ. ಮಳೆಗಾಲದಲ್ಲಿ ನನಗೂ ಸೂಟಿಯಿದೆ. ಆಗ ನಾನು ಅಲ್ಲಿಗೆ ಹೋಗಬಹುದು. ಏನಾದರೂ ಪ್ರಯತ್ನ ಮಾಡಿದರೆ ಹಣ ದೊರಕಿಸುವ ದಾರಿ ಸಿಕ್ಕಬಹುದು. ನಿನ್ನ ಅಭಿಪ್ರಾಯವೇನು, ಸುಶೀಲಾರಾಣಿ ?"

"ಮುಂಬಯಿಯ ಪ್ರವಾಸಕ್ಕೂ ವಾಸಕ್ಕೂ ಸಾಕಷ್ಟು ಹಣ ವೆಚ್ಚವಾಗು ವದು, ಅಷ್ಟೆ. ಹಣ ದೊರಕಿಸುವ ಮನಸ್ಸು ನಿಮಗಿದ್ದರೆ ಗೊಬ್ಬೂರಿನಲ್ಲೂ ಸಾಧ್ಯವಿದೆ. ಮುಂಬಯಿಯಲ್ಲಿ ವ್ಯಯವಾಗುವ ಹಣವೂ ಉಳಿದೀತು. ಇಲ್ಲಿ ಹಣ ಗಳಿಸುವ ಸಂಧಿಗಳೇ ಸಿಕ್ಕಿಲ್ಲ ಅನ್ನುವಂತೆ ನೀವು ಮಾತನಾಡುತ್ತಿದ್ದೀರಿ. ನಿಮಗೆ ಅಂಥ ಚಾನ್ಸ್ ಬೇಕಾದಷ್ಟಿವೆ. ನಿಮ್ಮ ಬಿರುದು ನಿಮಗೇನು ಕೊಡಲಿ ಕ್ಕಿಲ್ಲ? ಒಂದೆರಡು ವ್ಯಾಪಾರೀ ಕಂಪನಿಗಳಲ್ಲಿ ಡೈರೆಕ್ಟರ್ ಆದರೆ ಅದರಿಂದಲೂ ತುಸು ಹಣ ಸಿಕ್ಕಬಹುದು."

"ಡೈರೆಕ್ಟರನಾಗುವದು ಮಾತ್ರ ನನಗೆ ಆಗದ ವಿಷಯ. ವ್ಯಾಪಾರದ ವಿಚಾರದಲ್ಲಿ ನನ್ನ ಅನುಭವ, ಜ್ಞಾನ ಶೂನ್ಯ. ಏನೂ ಗೊತ್ತಿಲ್ಲದೆ ಡೈರೆಕ್ಟರ ನಾದರೆ ಯಾವದಾದರೊಂದು ಪೇಚಿನಲ್ಲಿ ಸಿಕ್ಕಬಹುದು. ಕಂಪನಿಯ ಬಗ್ಗೆ ಮೋಸಹೋಗಬಹುದು. ನನಗಂತೂ ಬಲೆಯಲ್ಲಿ ಸಿಕ್ಕಿದ ಮೀನದಂತೆ ನೋವಾ ದೀತು."

ಸುಶೀಲಾರಾಣಿ ತುಟಿಗಳನ್ನು ಕಚ್ಚಿಕೊಂಡು—

"ಸಾಕು, ನನಗೆ ಈ ಮಾತು ಕೇಳಿ ತಲೆ ತಿರುಗುತ್ತಿದೆ. ನಿಮ್ಮನ್ನು

ಲಗ್ನವಾಗಲು ಮಾತು ಕೊಟ್ಟ ಮೊದಲಲ್ಲಿ ನನ್ನ ಗೆಳತಿಯರ ಮುಂದೆ ಅದೇ ಮಾತು ಬರುತ್ತಿತ್ತು. ಅವರಿಗಾಗಿದ್ದ ಆನಂದ ಹೇಳತೀರದು. ಅತ್ತಿಗೇರಿಯ ರಾಜಾಸಾಹೇಬರನ್ನು ಲಗ್ನವಾಗಲಿರುವ ನನ್ನ ದೈವವನ್ನು ಅವರೆಲ್ಲಾ ಪ್ರಶಂಸಿಸಿದ್ದರು. ಆದರೇನು ? ನಮ್ಮ ಲಗ್ನದ ದಿನ ಮುಂದೆ ಮುಂದೆ ಹೋಗುವದನ್ನೂ ನಿಮ್ಮ ಆರ್ಥಿಕ ಸ್ಥಿತಿಯನ್ನೂ ಕೇಳಿದ ಅವರಿಗೆ ಅದೊಂದು ನಗೆಯ ಮಾತಾಗುತ್ತಿದೆ. ಕೇವಲ ನಿಮ್ಮ ಬಿರುದು ನಂಬಿ ನಾನು ನಿಮ್ಮೊಡನೆ ಲಗ್ನವಾಗಲು ಬಯಸುವದಿಲ್ಲ. ನನ್ನ ಗೆಳತಿ ಲೀಲಾವತಿ ಕಾಮನೂರ ಸರದಾರರ ಬಿರುದು ನಂಬಿ ಪಟ್ಟ ಕಷ್ಟ ನನಗೆ ನೆನಪಿದೆ. 'ರಾಜಾಸಾಹೇಬ್', 'ಸರದಾರ' ಎಂಬ ಟಾಯಟಲ್. ನೋಡಿದರೆ ಜೇಬಿನಲ್ಲಿ ಕಾಸಿಲ್ಲ ! ರಾಜಾಸಾಹೇಬ್, ನಾನೇ ನಿಮ್ಮ ಸ್ಥಾನದಲ್ಲಿದ್ದರೆ ನೂರಾರು ಪ್ರಯತ್ನ ಮಾಡಿ ಶ್ರೀಮಂತಳಾಗುತ್ತಿದ್ದೆ. ಹಿಂದೆ ಕಾರಿನ ಎಜನ್ಸಿಯೊಂದು ನಿಮಗೆ ಸಿಗುವಂತಿರಲಿಲ್ಲವೇ ? ಅದರಿಂದೇನು ಸ್ವಲ್ಪ ಲಾಭವಿಷ್ಟಿತೇ ? ನೀವು ಎಲ್ಲದಕ್ಕೂ ಏನಾದರೊಂದು ನೆಪ ಹೇಳುವದನ್ನು ಮಾತ್ರ ಕಲಿತಿರುವಿರಿ."

"ಅಯ್ಯೋ, ಆ ಕಾರು ಕೊಂಡವರಿಗೆ ಯಾವ ಪ್ರಯೋಜನವಾಗುತ್ತಿತ್ತೊ ದೇವರೇ ಬಲ್ಲ."

"ಸಾಕು ಮಾಡಿರಿ ರಾಜಾಸಾಹೇಬ್, ಅಂಥ ನೂರಾರು ಕಾರುಗಳನ್ನು ನೀವು ಮಾರಬಹುದಿತ್ತು. ಆ ಕಂಪನಿಯಿಂದ ಸಾವಿರಾರು ರೂಪಾಯಿಗಳ ಕಮಿಶನ್ ಸಿಕ್ಕಬಹುದಾಗಿತ್ತು. ಕಾರು ಕೊಳ್ಳುವ ಜನರ ಪರಿಚಯವೂ ನಿಮಗೆ ಬೇಕಾದಷ್ಟಿದೆ, ಆದರೇನು ?"

"ಸುಶೀಲಾರಾಣಿ, ರಾವರಾಜೆಯನ್ನು ಕ್ಲಬ್ಬಿನ ಅಧ್ಯಕ್ಷನಾಗಿ ಮಾಡುವದೂ, ಈ ಕಾರು ಮಾರುವದೂ ಒಂದೇ. ಆ ಭಯಂಕರ ಎಂಜಿನುಗಳನ್ನು ಗೊಬ್ಬೂರಿಗೆ ತರಲು ನನ್ನ ಮನಸ್ಸು ಒಪ್ಪಲಿಲ್ಲ. ಅಂಥ ಭಯಾನಕ ವಸ್ತುಗಳನ್ನು ಕೊಳ್ಳಲು ನನ್ನ ಗೆಳೆಯರನ್ನು ಕೇಳಲು ನನ್ನ ಮನಸ್ಸು ಸಿದ್ಧವಾಗಲಾರದು."

"ಅದೇಕೆ ? ಆದರಲ್ಲೇನಿದೆ ಅಂಥದು. ಕಾರು ಸರಿಯಾಗಿರದಿದ್ದರೆ ನಿಮ್ಮ ತಪ್ಪೇನು ? ಅವರೇ ಒಪ್ಪಿಕೊಂಡಿರುವದಿಲ್ಲವೇ ? ಒಮ್ಮೆ ವ್ಯಾಪಾರವಾದರೆ ತೀರಿತು. ಅನಂತರ ನೀವೇಕೆ ವ್ಯಸನ ಪಡಬೇಕು ?"

ಅಂದಿನ ದಿನವೇ ರಾಜಾಸಾಹೇಬನಿಗೆ ಅಶುಭಕಾರಿಯಾಗಿದ್ದಿತು. ಊಟ ಮುಗಿಯುವವರೆಗೆ ಅವನು ಮಾತನಾಡಿದ್ದೆಲ್ಲವೂ ಆವನಿಗೆ ವಿರೋಧವಾಗಿ ಪರಿಣಮಿಸಿತ್ತು. ಆ ಎಲ್ಲ ವಿರೋಧವನ್ನು ಒಮ್ಮೆಲೇ ತೊಡೆದುಹಾಕಲೆಂದು ಮಾತನಾಡ ಹೋದರೆ ಸುಶೀಲಾರಾಣಿಗೆ ಅದಂತೂ ಮಹಾಪ್ರಮಾದವಂತೆ ಕಂಡಿತೇನೋ.

"ಮೋಸದ ಕೃತಿ ಬೇಡ, ಪರೋಪಕಾರ ಭಾವನೆ ಬೇಕು." ಎಂದು ಆವನು ಹೇಳುವುದನ್ನು ತಡೆದು, ಅವಳು ಅವನ ಮಾತು ಕೇಳುವದನ್ನು ಬಿಟ್ಟು ಎದ್ದು ನಿಂತು ತನ್ನ ಕೈಗಡಿಯಾರ ನೋಡಿಕೊಂಡು,

"ನನಗೆ ವೇಳೆಯಾಯಿತು. ಬರುತ್ತೇನೆ." ಎಂದಳು.

"ಕಾಫಿಯನ್ನೂ ತೆಗೆದುಕೊಳ್ಳಲಿಲ್ಲವಲ್ಲ ಸುಶೀಲಾರಾಣಿ ?"

"ನನಗೆ ಬೇಡ."

"ಏನಾಗಿದೆ ಸುಶೀಲಾ ? ಇಂದು ಹೀಗೇಕಿರುವಿ ?"

"ಏನೂ ಇಲ್ಲ, ಮನೆಗೆ ಹೋಗಿ ನನ್ನ ಗಂಟು ಗದಡೆ ಕಟ್ಟಿಕೊಂಡು ಬೆಳಗಾವಿಗೆ ಹೊರಡಬೇಕು."

ಅವಳು ಹೊರಟೇ ಬಿಟ್ಟಳು. ಅವಳನ್ನು ಹಿಂಬಾಲಿಸಲೆಂದು ರಾಜಾಸಾಹೇಬ ಏಳಲಿದ್ದ. ಆಳು ಬಂದು ಹಣಕಪ್ಪಾಗಿ ಕೈ ಮುಂದೆ ಮಾಡಿದುದನ್ನು ಕಂಡು, ಆವನಿಗೆ ಕೊಡಬೇಕಾದುದನ್ನು ಕೊಟ್ಟು ಬಾಗಿಲಿನತ್ತ ಧಾವಿಸಿದ. ಹೊರಕ್ಕೆ ಇಣಿಕಿ ನೋಡಿದಾಗ ಸುಶೀಲಾರಾಣಿ ಕಾಣಿಸಲಿಲ್ಲ.

ಉಕ್ಕಿ ಬಂದ ಪ್ರೇಮದ ಭಾರವನ್ನು ಕಾಲುಗಳ ಮೇಲೆ ಹೊತ್ತುಕೊಂಡಿದ್ದರೂ ವೇಗವಾಗಿಯೇ ಅಟ್ಟವನ್ನಿಳಿದು, ರಸ್ತೆಯಲ್ಲಿ ಸುಶೀಲಾರಾಣಿ ಕಾಣುವಳೇನೋ ಎಂದು ದೃಷ್ಟಿ ತೂರಿದ. ಆವಳು ಮಾಯವಾಗಿದ್ದಳು.

## ೨

ರಾಜಾಸಾಹೇಬನ ಹೃದಯದಲ್ಲಿ ವ್ಯಸನ ತುಂಬಿಕೊಂಡಿತು. ಆಕಾಶದಲ್ಲಿನ ಸೂರ್ಯನ ಮುಖಕ್ಕೆ ಕಪ್ಪಾಗಿನ ಮೋಡವೊಂದು ತೆರೆಯಂತೆ ಅಡ್ಡ

ವಾಯಿತು. ತಂಪಾದ ಗಾಳಿ ಬೀಸಿ ಎಲ್ಲರ ಹೃದಯಗಳನ್ನು ನಡುಗಿಸಿತು. ಮಾರ್ಕೆಟ್ಟಿಯ ದಾರಿಯಿಂದ ಮುಂದೆ ಸಾಗಿದ್ದ ಅವನಿಗೆ ಆ ಜನಜಂಗುಳಿಯು ಭಯಂಕರವಾಗಿ ಕಂಡಿತು. ಎಲ್ಲಿ ನೋಡಿದರೂ ಗಂಡಸರು ಹೆಂಗಸರ ಗುಂಪುಗಳು. ಅದರಿಂದಂತೂ ಅವನ ಮನಸ್ಸಿಗೆ ಅತೀವ ವ್ಯಥೆಯಾಯಿತು.

ತನ್ನ ಬಗೆಗೆ ತಾನೇ ಮರುಕ ತಂದುಕೊಂಡ. 'ಜಗತ್ತಿನ ರೀತಿಯೇ ಹೀಗೆ, ಇಲ್ಲಿ ವಾಸಿಸಿರುವ ತನಕ ಈ ನರಕಯಾತನೆ ತಪ್ಪಿದುದಲ್ಲ.' ಮೋಸ ಮಾಡಬಾರದು, ಪರೋಪಕಾರ ಮಾಡಬೇಕು ಎಂದು ತಾನು ಹೇಳಿದಾಗಲೆಲ್ಲ ಕೇಳಿದವರು ಸಿಟ್ಟಾಗಿಬಿಡುವರು. ಹೀಗೆ ಜಗತ್ತಿನ ರೀತಿಯೇ ಭಯಂಕರವಾಗಿರುವಾಗ ತಾನೇಕೆ ವ್ಯಸನಪಡಬೇಕು ? ಮತ್ತೆ ಅವನ ವಿಚಾರ ಸುಶೀಲಳತ್ತ ಹೊರಳಿತು. ಅವಳ ಬಗೆಗೆ ಮರುಕ ಬಂದಿತು. ಪಾಪ ! ಮೊದಲನೆಯದಾಗಿ ಅವಳ ಗ್ರಹಗಳೇ ಪ್ರತಿಕೂಲವಾಗಿವೆ. ಹೆಚ್ಚು ಹಣ ಗಳಿಸುತ್ತಿಲ್ಲವೆಂದು ಅವಳೆಂದರೆ ತಾನು ಅವಳನ್ನೇಕೆ ದೂಷಿಸಬೇಕು ? ಹಣ ಗಳಿಸುವ ರೀತಿಯನ್ನು ಅವಳು ಹೇಳಿಕೊಟ್ಟರೆ ಮೋಸ–ಪರೋಪಕಾರಗಳ ಮಾತನ್ನು ಮುಂದೊಡ್ಡಿ ಅವಳನ್ನು ಖಂಡಿಸಿದಂತಾಗುವುದಿಲ್ಲವೇ ? ವಿದ್ಯಾವತಿಯೂ ಸುಸಂಸ್ಕೃತಳೂ ಆದ ಅವಳೆದುರಿಗೆ 'ಮೋಸ ಬೇಡ'ವೆಂದು ಹೇಳಿದರೆ ಅವಳಿಗೆ ಅವಮಾನವಾದಂತಾಗಲಿಲ್ಲವೇ ? ಮೋಸ ಬೇಡವೆನ್ನುವದರ ಅರ್ಥವಾದರೂ ಏನು ? ಅದರರ್ಥ ಅವಳಿಗೆ ತಿಳಿದಿಲ್ಲವೆಂದು ಹೇಳಿದಂತಾಗಲಿಲ್ಲವೇ ? ಹಾಗನ್ನುವದು ಯೋಗ್ಯವಾದೀತೇ? ಮೂರ್ಖನಾದವನು ಮಾತ್ರ ಹಾಗೆ ಅವಳ ಹೃದಯಕ್ಕೆ ಬರೆ ಕೊಡುವ ಮಾತುಗಳನ್ನಾಡಬಹುದು. ರಾಜಾಸಾಹೇಬ್ ಹೀಗೆ ಯೋಚನಾಮಗ್ನನಾಗಿ ಹೋಗುತ್ತಿದ್ದಂತೆ ಎದುರಿನಿಂದ ಬರುತ್ತಿದ್ದವನೊಬ್ಬನಿಗೆ ಡಿಕ್ಕಿ ಹೊಡೆದ. ಅದರಿಂದ ಅವನ ಮನಸ್ಸು ತಿಳಿಯಾಗಿರಬೇಕು.

"ಖಂಡಿತವಾಗಿಯೂ ಅದನ್ನು ಮಾಡಿಯೇ ತೀರುವೆ" ಎಂದುಕೊಂಡು ಒಂದು ಜಟಕಾ ಕರೆದು ಅದನ್ನೇರಿ ಮುಂದೆ ಸಾಗಿದ, "ಮುಂಬಯಿಗೆ ಹೋಗಬೇಕು" ಎಂದು ಮೆಲುಕು ಹಾಕಹತ್ತಿದ.

ರಾಜಾಸಾಹೇಬ್ ಮುಂಬಯಿಗೆ ಹಿಂದೆ ಒಂದೆರಡು ಸಲ ಹೋಗಿದ್ದನಾದರೂ ಅಲ್ಲಿನವರ ರೀತಿನೀತಿ, ಅಲ್ಲಿಯ ಜೀವನಗಳ ಬಗೆಗೆ ಅವನಿಗೆ ಹೆಚ್ಚಿಗೇನೂ ಗೊತ್ತಿರಲಿಲ್ಲ. ಅವನು ಮುಂಬಯಿಗೆ ಹೋಗಿದ್ದಾಗ ಹೋಟಲೊಂದರಲ್ಲಿ

ಉಳಿದು ಆಟದ ವಸ್ತುಗಳ ಅಂಗಡಿಗೆ ಟ್ಯಾಕ್ಸಿಯೊಂದರಲ್ಲಿ ಹೋಗಿ ಬೇಕಾಗಿದ್ದ ವಸ್ತುಗಳನ್ನು ಕೊಂಡು ತಿರುಗಿ ಬಂದಿದ್ದ. ಹೋಟಲಿನ ಮಾಲಿಕ, ಆಟದ ಸಾಮುಗ್ರಿ ಅಂಗಡಿಯ ಮಾಲಿಕ ಇವರಿಬ್ಬರ ಪರಿಚಯವಾಗಿತ್ತಾದರೂ ಅದು ವ್ಯವಹಾರದ ಸಂಬಂಧವಲ್ಲಿ ಮಾತ್ರ. ಇನ್ನುಳಿದ ನಾಗರಿಕರ ಬಗೆಗೆ ಅವನಿಗೇನೂ ತಿಳಿದಿರಲಿಲ್ಲ. ಮುಂಬಯಿಯಲ್ಲಿ ಭಾಷೆಗಳ ಜಗಳವಿದೆಯೆಂದೂ ಕನ್ನಡಿಗರು ಮುಂಬಯಿಗೆ ಹೋದರೆ ಇತರರಿಂದ ಸಹಕಾರ ದೊರೆಯುವದಿಲ್ಲವೆಂದೂ ಒಬ್ಬರು ಹೇಳಿದ್ದರೆ, ಈಗೀಗ ಅನೇಕ ಕನ್ನಡಿಗರು ಅಲ್ಲಿ ವಾಸಿಸುತ್ತಿದ್ದು ಪರಸ್ಪರರ ಸಹಕಾರದಿಂದ ಅವರಿಗೆ ಮೊದಲಿನಷ್ಟು ತೊಂದರೆಯಾಗುತ್ತಿಲ್ಲವೆಂದು ಇನ್ನೊಬ್ಬರು ಹೇಳಿದ್ದರು. ಮುಂಬಯಿಯಲ್ಲಿನ ಜೀವನ ಮೋಜಿನದೆಂದು ಆತ ಕೇಳಿದ್ದನೇನೋ ನಿಜ. ಆದರೆ ಅಲ್ಲಿನ ಸಂಘ ಸಂಸ್ಥೆಗಳ ಬಗೆಗೆ ಅವನಿಗೇನೂ ಗೊತ್ತಿರಲಿಲ್ಲ.

ಇತ್ತೀಚೆಗೆ, ಗೊಬ್ಬೂರು ನಗರ ಸಭೆಯ ಕಾರ್ಯಕಲಾಪಗಳ ಬಗೆಗೆ ಅಲ್ಲ ಸಲ್ಲದ ಆರೋಪಗಳು ಎದ್ದು ಗೊಂದಲ ಪ್ರಾರಂಭವಾಗಿತ್ತು. ಅದರ ಪ್ರತ್ಯಕ್ಷ ವರದಿ ಮಾಡಲೆಂದು ಮುಂಬಯಿಯ ದಿನಪತ್ರಿಕೆಯೊಂದರ ವರದಿಗಾರ ಶಾಮರಾಯ ಇಲ್ಲಿಗೆ ಬಂದು ಸುಮಾರು ದಿನಗಳಾಗಿದ್ದವು. ಶಾಮರಾಯ "ಕಾಗದ–ಮಸಿ ಸಂಘ"ದ ಕಚೇರಿಯಲ್ಲೇ ಬಿಡಾರ ಬಿಟ್ಟಿದ್ದ. ಅಂತೆಯೇ ಮುಂಬಯಿಗೆ ಹೋಗುವ ನಿರ್ಧಾರ ಮಾಡಿದ ರಾಜಾಸಾಹೇಬ್ ಮೊದಲು 'ಕಾಗದ–ಮಸಿ ಸಂಘ'ಕ್ಕೇ ಬಂದ. ಕಾಗದ ಮತ್ತು ಮಸಿಗಳೆರಡರ ಸದುಪಯೋಗ ಮಾಡುವ ಯಾರೇ ಬರಲಿ:ಅವರಿಗೆ ವಾಸಸ್ಥಳ ಕಾಗದಮಸಿ ಸಂಘವೇ. ರಾಜಾಸಾಹೇಬನೂ ಆ ಸಂಘದ ಮಾನ್ಯ ಸದಸ್ಯನಾಗಿದ್ದುದರಿಂದ ಅಲ್ಲಿಗೆ ಬಂದವರೆಲ್ಲ ಅವನ ಸ್ನೇಹಿತರಾಗುತ್ತಿದ್ದರು. ರಾಜಾಸಾಹೇಬನ ವಿಶಾಲವಾದ ಗೆಳೆಯರ ಪಟ್ಟಿಗೆ ಹೊಸದಾಗಿ ಶಾಮರಾಯನ ಸೇರ್ಪಡೆಯೂ ಆಗಿತ್ತು. ರಾಜಾಸಾಹೇಬ ಸಂಘದ ಕಚೇರಿಯಲ್ಲಿ ಪ್ರವೇಶಿಸಿದಾಗ ಶಾಮರಾಯ ಏನನ್ನೋ ಓದುತ್ತ ಕುಳಿತಿದ್ದ.

"ಏನು ರಾಜಾಸಾಹೇಬ್, ದಾರಿ ತಪ್ಪಿ ಬಂದಂತಾಯಿತಲ್ಲ?" ಎನ್ನುತ್ತ ಶಾಮರಾಯ ರಾಜಾಸಾಹೇಬನನ್ನು ಬರಮಾಡಿಕೊಂಡ. ಆ ಕೋಣೆಯ ಪಕ್ಕದಲ್ಲಿ ವಾಚನಾಲಯವೂ ಇದ್ದಿತು. ಓದಲು ಬಂದವರಿಗೆ ತೊಂದರೆಯಾಗ

ಬಾರದೆಂದು ಅವರಿಬ್ಬರೂ ದೂರದ ಮೂಲೆಯೊಂದರಲ್ಲಿ ಕುರ್ಚಿಗಳನ್ನೆಳೆದೊಯ್ದು ಕುಳಿತರು.

"ಬಹಳ ಗಡಿಬಿಡಿಯಿಂದ ಬಂದಂತಿದೆಯಲ್ಲ ರಾಜಾಸಾಹೇಬ್, ಅಂಥ ಕೆಲಸವೇನು ?"

"ನನಗೊಂದು ವಿಚಾರ ಬಂದಿದೆ ಶಾಮರಾವ್."

"ಏನ್ರೀ ಅದು ?"

"ಮುಂಬಯಿಯ ವಿಚಾರವಾಗಿ ನೀವು ಹೇಳಿದ್ದು ನೆನಪಿದೆಯೇ ?"

"ಮುಂಬಯಿಯ ವಿಚಾರವಾಗಿಯೇ ?"

"ಹೌದು, ನಿನ್ನೆ ಹೇಳಲಿಲ್ಲವೇ ? ಮನಸ್ಸಿದ್ದವರು ಮುಂಬಯಿಯಲ್ಲಿ ಬೇಕಾದಷ್ಟು ಹಣ ಗಳಿಸಬಹುದೆಂದು ನೀವನ್ನಲಿಲ್ಲವೇ ?"

"ಹೌದು. "

"ನಾನೂ ಮುಂಬಯಿಗೆ ಬರಬೇಕೆಂದು ನಿಶ್ಚಯಿಸಿದ್ದೇನೆ."

"ಮುಂಬಯಿಗೆ ?"

"ಹೌದು."

"ಹಣ ಗಳಿಸಲೆಂದೇ ?"

"ಹಾಗನ್ನಬಹುದು."

ಶಾಮರಾಯ ಕತ್ತು ತೂಗಿದುದನ್ನು ಕಂಡ ರಾಜಾಸಾಹೇಬನಿಗೆ ಅವನ ರೀತಿ ಸರಿ ಕಾಣಲಿಲ್ಲ. ಕುದುರೆಯಂತೆ ಉದ್ದವಾಗಿದ್ದ ಶಾಮರಾಯನ ಮುಖ ಉತ್ತೇಜನವೀಯುವಂತೆ ಕಾಣಿಸಲಿಲ್ಲ.

"ತೊಂದರೆಯ ಕೆಲಸವೇ." ಎಂದ ಶಾಮರಾಯ.

ರಾಜಾಸಾಹೇಬನ ಹೃದಯವನ್ನು ಯಾರೋ ತುಳಿದಂತಾಯಿತು. ರಾಜಾಸಾಹೇಬನನ್ನೇ ಉತ್ಸುಕತೆಯಿಂದ ನೋಡುತ್ತ ಶಾಮರಾಯ,—

"ನಿಮ್ಮ ಉದ್ದೇಶವಾದರೂ ಏನು ? ನನಗಂತೂ ತಿಳಿಯುವಂತಿಲ್ಲ. ನೀವೇನೋ ಮುಂಬಯಿಗೆ ಮೋಜಿಗಾಗಿ ಹೋಗುವಿರೆಂದೇ ನಾನು ಭಾವಿಸಿದ್ದೆ. ಹಾಗಿದ್ದರೆ ಆ ಮಾತು ಬೇರೆಯಾಗಿತ್ತು. ಈಗ ನೀವು ಹೇಳುತ್ತಿರುವದು ಹಣದ ವಿಚಾರ. ನಿಮ್ಮಂಥವರು ಹಣದ ಯೋಚನೆ ಮಾಡುವದೆಂದರೆ

ವಿಚಿತ್ರ ಮಾತೇ. ಇನ್ನೂ ಹೆಚ್ಚು ಹಣ ಗಳಿಸಿ ನೀವು ಮಾಡುವದಾದರೂ ಏನು ?"

"ಶಾಮರಾಯರೆ, ನನ್ನ ಹತ್ತಿರ ಹಣವೇ ಇಲ್ಲ."

"ಯಾಕೆ, ನಿಮ್ಮ ರೈತರು ವೇಳೆಗೆ ಸರಿಯಾಗಿ ಹಣ ಸಲ್ಲಿಸುವದಿಲ್ಲವೇ ?"

ಶಾಮರಾಯನ ಕನಿಕರದ ಮಾತುಗಳನ್ನು ಕೇಳಿ ರಾಜಾಸಾಹೇಬನಿಗೆ ನಗು ಬಂದಿತು.

"ದೋಸ್ತ, ನನ್ನಲ್ಲಿ ಬಹಳ ಹಣವಿರುವದೆಂದು ನಿಮ್ಮ ಕಲ್ಪನೆಯೇ ? ಒಂದು ನೂರು ರೂಪಾಯಿನ ಸಂಬಳದ ಹೊರತು ಹೆಚ್ಚಿಗಿನ್ನೇನೂ ಇಲ್ಲ. ಹೆಚ್ಚು ಗಳಿಸಬೇಕಾದರೆ ನಾನು ಬೆವರು ಸುರಿಸಬೇಕು."

"ಹಾಗಾದರೆ ನೀವೊಬ್ಬ ಲಕ್ಷ್ಮೀಪುತ್ರರೆಂದು ನಾನು ಭಾವಿಸಿದ್ದು ತಪ್ಪೆ ?" —ತುಸು ಅಸಂತೋಷದಿಂದ ಶಾಮರಾಯ ಕೇಳಿದ.

"ನಾನು ಲಕ್ಷ್ಮೀಪುತ್ರನೆಂದು ನೀವು ತಿಳಿಯಲು ಕಾರಣವೇನು ?"

"ರಾಜಾಸಾಹೇಬ್, ನಿಮ್ಮನ್ನು ನೋಡಿದರೆ ಸಾಕು, ಎಲ್ಲರೂ ಹಾಗೇ ಅನ್ನುವರು. ನಿಮ್ಮ ಜನರ ರೀತಿಗಳೇ ವಿಚಿತ್ರ. ಅದರಲ್ಲೂ ನಿಮ್ಮ ಭಾಗದ ಟೈಟಲ್‌ಧಾರಿಗಳು ! ನಿಮ್ಮನ್ನೂ ನಿಮ್ಮ ಗೆಳೆಯರನ್ನೂ ಇಷ್ಟು ದಿನಗಳಿಂದ ಬಲ್ಲೆನಾದರೂ ಒಬ್ಬರೂ ನಿಮ್ಮ ಆರ್ಥಿಕ ವಿಚಾರ ಮಾತಾಡಿಲ್ಲ. ಮುಂಬಯಿಯ ರೀತಿಯೇ ಬೇರೆ. ನೋಡಿದ ತಕ್ಷಣ ಅಲ್ಲಿನವರ ಆರ್ಥಿಕ ಸ್ಥಿತಿಯನ್ನು ಅರಿತು ಕೊಳ್ಳಬಹುದು. ನೀವು ಹಣ ದೊರಕಿಸಲು ಮುಂಬಯಿಗೆ ಹೊರಟಿರುವದೇ ನಿಜವಾದರೆ ತುಸು ಯೋಚಿಸಬೇಕಾದೀತು. ಅಲ್ಲಿ ಬೇಕಾದಷ್ಟು ಅನುಕೂಲತೆ ಗಳಿವೆ. ಆದರೆ ನೀವು ಅಲ್ಲಿ ಹೋಗಿ ಮಾಡುವದಾದರೂ ಏನೆಂದು ನಾನು ಯೋಚಿಸಬೇಕು. ನಿಮ್ಮ ವಿಚಾರವೇನು ?"

"ಏನಾದರೂ ಮಾಡುವೆ."

"ಏನು ಮಾಡಬೇಕೆಂಬುದು ನಿಮಗೆ ಸಂಬಂಧಿಸಿದ ವಿಷಯ. ನಾನು ಒಂದೆರಡು ಪರಿಚಯ ಪತ್ರಗಳನ್ನು ಕೊಡಬಹುದು. ನನ್ನ ಪತ್ರಗಳ ಆಧಾರದ ಮೇಲಿಂದ ಬಹಳವಾದರೆ ಯಾವದಾದರೊಂದು ಕಂಪನಿಯಲ್ಲಿ ಕಾರಕೂನ ಅಥವಾ ಅಸಿಸ್ಟಂಟ ಮ್ಯಾನೇಜರನ ಕೆಲಸ ಸಿಕ್ಕಬಹುದು. ಅದಕ್ಕೂ ಹೆಚ್ಚಿನ ಕೆಲಸ ಸಿಕ್ಕಲಾರದು. ಇನ್ನು ನೀವು ಈ ನಿಮ್ಮ ಟೈಟಲ್ ಹೊತ್ತುಕೊಂಡು

ಹೋದರೆ ಅದೂ ಸಿಕ್ಕಲಾರದು. ರಾಜ ಮಹಾರಾಜರ ಪ್ರಭಾವ ಮುಂಬಯಿ ಯಲ್ಲಿ ಬಹಳ. ಅತ್ತೀಗೇರಿ ರಾಜಾಸಾಹೇಬ್ ಹೋಗಿ ಇಂಥ ಕೆಲಸ ಕೇಳಿದರೆ ಅದೊಂದು ಹಾಸ್ಯಾಸ್ಪದ ಮಾತಾದೀತು, ಕೇಳಿದವರು ನಕ್ಕುಬಿಡುವರು. ನಿಮ್ಮಂಥ ಟೈಟಲ್ ಹೋಲ್ಡರ್‌ರನ್ನು ಒಂದೆರಡು ಪಾರ್ಟಿಗಳಿಗೆ ಕರೆಯ ಬಹುದು, ನಿಮ್ಮ ಸಹವಾಸದಿಂದ ಆನಂದಪಡಬಹುದು, ಆದರೆ ಕೆಲಸ ಮಾತ್ರ ಶೂನ್ಯ. ನೀವು ಅವರ ಕಾಲಿಗೆ ಬಿದ್ದು ಕೇಳಿದರೂ 'ಅತ್ತೀಗೇರಿ ರಾಜನಂಥ ತಮಾಷೆ ಮನುಷ್ಯನೇ ಇಲ್ಲ. ಕೆಲಸ ಬೇಡಲು ಬರುವವರ ನಟನೆಯನ್ನು ಎಷ್ಟು ಚೆನ್ನಾಗಿ ಮಾಡುವರು!' ಎನ್ನುತ್ತ ನಾಲ್ಕೆಂಟು ಹುಡುಗಿಯರೂ ನಿಮ್ಮನ್ನು ಸುತ್ತುಗಟ್ಟಬಹುದು. ಆದರಿಂದ ನಿಮಗಾವ ಪ್ರಯೋಜನ ?"

"ಮುಂಬಯಿಯಲ್ಲಿ ಹೀಗೂ ಉಂಟೇ ಶಾಮರಾವ್ ?"

"ಹೌದು. ಮುಂಬಯಿಯಲ್ಲಿ ನನ್ನ ಪರಿಚಯದ ವ್ಯಾಪಾರಸ್ಥರೊಬ್ಬರಿ ದ್ದಾರೆ. ಶೇಠ ಹಿರಾಚಂದ ಅಂತ ಅವರ ಹೆಸರು. ಅವರಿಗೆ ಶರಣುಹೋದರೆ ಕಾರ್ಯ ಸಾಧಿಸಬಹುದು. ಆದರೆ ನಿಮ್ಮ ಹೆಸರನ್ನು ಮಾತ್ರ ತುಸು ಬದಲಿಸ ಬೇಕು. ರಾಜಕುಮಾರ........ಅಥವಾ ರಾಜಾರಾಮ........"

"ಬೇಡ. ಅವು ನನಗೆ ಅಪರಿಚಿತವಾದ ಹೆಸರುಗಳು. ಬೇರೆ ಏನಾದರೂ ಇರಲಿ. ಅಣ್ಣಾಸಾಹೇಬ ಅಂದರೆ ನಡೆಯಲಾರದೇ ? ನನ್ನ ತಂದೆಯವರು ನನ್ನನ್ನು ಹಾಗೇ ಕರೆಯುತ್ತಿದ್ದರು. ಅಣ್ಣಾಸಾಹೇಬ ಅತ್ತೀಗೇರಿ ಎಂಬ ಹೆಸ ರಿನಿಂದ ಯಾರು ಕೂಗಿದರೂ ನಾನು ' ಓ ' ಕೊಡಬಲ್ಲೆ. ಬೇರೆ ಹೆಸರನ್ನು ಇಟ್ಟುಕೊಂಡರೆ ಆ ಹೆಸರಿನಿಂದ ಯಾರಾದರೂ ಕೂಗಿದರೆ ನಾನು ಲಕ್ಷ ಕೊಡದೆ ಇರಬಹುದು."

"ಹಾಗೆಯೇ ಆಗಲಿ. ಅಣ್ಣಾಸಾಹೇಬ ಅತ್ತೀಗೇರಿ ಎಂತಲೇ ಇರಲಿ. ನೀವು ಮುಂಬಯಿಗೆ ಎಂದು ಹೊರಡುತ್ತೀರಿ ?"

"ನಾಳಿನ ದಿನವೇ."

"ಭೇಷ್ ! ಅಂತೂ ಎಲ್ಲವನ್ನೂ ನಿರ್ಧರಿಸಿಕೊಂಡೇ ಇಲ್ಲಿಗೆ ಬಂದಂತಿದೆ. ಅಲ್ಲಿ ಇರುವ ತನಕ ನನ್ನ ಕೋಣೆಯಲ್ಲೇ ಉಳಿಯಬಹುದಲ್ಲ ? ಕೋಣೆ ತೆರ ವಾಗಿಯೇ ಇದೆ. ನನ್ನ ಫರ್ನಿಚರು, ಪುಸ್ತಕಗಳೆಲ್ಲ ಹಾಳಾಗಿ ಹೋಗು ತ್ತಿರಬಹುದು....."

"ಬಹಳ ಉಪಕಾರವಾಯಿತು, ಶಾಮರಾವ್."

"ಏನು ಮಹಾ ಉಪಕಾರ! ಅದರಲ್ಲಿ ನನ್ನ ಸ್ವಾರ್ಥವೂ ಇದೆ. ನನ್ನ ಒಡವೆಗಳನ್ನು ಯಾರಾದರೂ ಕದ್ದೊಯ್ಯುವ ಸಂಭವವೂ ಇದೆ. ನೀವಿರುವ ದಾದರೆ ನನಗೆ ಆ ಚಿಂತೆ ತಪ್ಪುತ್ತದೆ. ಇಕಾ, ನನ್ನ ಕೋಣೆಯ ಅಡ್ರೆಸ್ ಮತ್ತು ಬೀಗದ ಕೈ" ಎನ್ನುತ್ತ ಅವೆರಡನ್ನೂ ಶಾಮರಾಯ ರಾಜಾಸಾಹೇಬನ ಕೈಗಿತ್ತ.

ಶಾಮರಾಯನನ್ನು ಬೀಳ್ಕೊಂಡು ಕಾಗದ ಮಸಿ ಸಂಘದಿಂದ ಹೊರಬಿದ್ದ ರಾಜಾಸಾಹೇಬನ ಉತ್ಸಾಹ ನೂರ್ಮಡಿಯಾಗಿತ್ತು. ನೇರವಾಗಿ ಲಾಡ್ಸ್ ಕ್ಲಬ್ಬಿಗೆ ಬಂದು ರಜೆಗಾಗಿ ಅರ್ಜಿಯೊಂದನ್ನು ಬರೆದು ಆಫೀಸಿನಲ್ಲಿ ಪ್ರವೇಶಿಸಿದ ಒಂದೆರಡು ನಿಮಿಷಗಳಲ್ಲೇ ತಿರುಗಿ ಹೊರಹೊರಟ. ಅರ್ಜಿಯನ್ನು ಕಮಿಟಿಯ ಮುಂದಿಡುವ ವ್ಯವಸ್ಥೆ ಮಾಡಲೆಂದು ಆಫೀಸಿನಲ್ಲಿ ಕಾಲಿರಿಸುತ್ತಿರುವಾಗಲೇ ಸಿಪಾಯಿ ಒಂದು ಸುದ್ದಿ ಹೇಳಿದ್ದ, ರಾಜಾಸಾಹೇಬನಿಗೆ ಟೆಲಿಫೋನ ಕರೆಯೊಂದು ಬಂದಿತ್ತು! ನಗರದ ಗಣ್ಯ ಕಾನೂನು ವಿಶಾರದ ದಲಾಲ— ದಲಾಲ ಆ್ಯಂಡ ಕಂಪನಿಯ ಕಚೇರಿಗೆ ತಕ್ಷಣ ಬರಬೇಕೆಂದು ಅವನಿಗೆ ಸೂಚಿಸಲಾಗಿದ್ದಿತು. ಅಂತೆಯೇ ಅವನು ಆಫೀಸಿನಲ್ಲಿ ಬಹಳ ವೇಳೆ ಕಳೆಯದೆ ಮೂರೇ ನಿಮಿಷಗಳಲ್ಲಿ ಹೊರಬಿದ್ದುದು. ಕಾನೂನು ವಿಶಾರದರು ಕರೆಯಿಸಬೇಕಾದರೆ ಏನಾದರೂ ಮಹತ್ವದ ಕಾರಣವಿರಬೇಡವೇ? ತನ್ನ ಜಮೀನುಗಳಲ್ಲಿ ಯಾವವಾದರೂ ಅವನ ಕೈಸೇರುವ ಕಾಲ ಬಂದಿದೆಯೋ ಏನೋ, ಎಂದೆಲ್ಲ ಯೋಚನೆಗಳಲ್ಲಿ ಮಗ್ನನಾದ.

"ದಲಾಲ—ದಲಾಲ ಆ್ಯಂಡ ಕಂಪನಿಯೂ ರಾಜಾಸಾಹೇಬನಿಗೆ ಅಪರಿಚಿತವಾದುದಲ್ಲ. ಅವನ ತಂದೆ ಜೀವಿಸಿದ್ದಾಗ ಅವರ ವ್ಯವಹಾರವನ್ನೆಲ್ಲ ಅದೇ ಕಂಪನಿಯವರು ನೋಡಿಕೊಳ್ಳುತ್ತಿದ್ದರು. ನಾಲ್ಕು ತಲೆಮಾರುಗಳಿಂದ ನಡೆದು ಬಂದ ಈ ಕಂಪನಿಯು ನಾಲ್ಕು ಸಲ ದಲಾಲ ಎಂಬ ಹೆಸರನ್ನು ಉಪಯೋಗಿಸಿದ್ದಿತು. ಈ ಆಫೀಸಿನ ವ್ಯವಹಾರ ಸಾಗಿಸುತ್ತಿದ್ದ ದಲಾಲನ ಸ್ನೇಹವೂ ರಾಜಾಸಾಹೇಬನಿಗಿತ್ತು. ಅವರ ಮುಖ್ಯ ಕಚೇರಿ ಮುಂಬಯಿಯಲ್ಲಿದ್ದು ಗೊಬ್ಬೂರ ಕಚೇರಿಯ ದಲಾಲನ ತಂದೆಯವರೇ ಎಲ್ಲ ಕಚೇರಿಗಳಿಗೂ ಹಿರಿಯರಾಗಿದ್ದರು. ರಾಜಾಸಾಹೇಬ್ ವೇಗದಿಂದ ಆ ಕಂಪನಿಯತ್ತ ಧಾವಿಸಿದ.

೩

ಗೊಬ್ಬೂರಿನ ಪಶ್ಚಿಮದ ಅಂಚಿನಲ್ಲಿದ್ದ ಸುಶೀಲಾರಾಣಿಯ ಮನೆಯತ್ತ ಕುದುರೆ ಗಾಡಿ ಓಡುತ್ತಲಿದ್ದಿತು. ಕುದುರೆಯ ಕಾಲಿನ ಟಪ್ ಟಪ್ ಶಬ್ದಕ್ಕೆ ಹೊಂದಿಕೊಂಡು ಆವಳ ಹೃದಯವೂ ಬಡಿದುಕೊಳ್ಳುತ್ತಿತ್ತು. ಅವಳ ಮೂಗಿನ ಹೊರಳೆಗಳೂ ಉಬ್ಬುಬ್ಬಿ ಬೀಳುತ್ತಿದ್ದುದನ್ನು ನೋಡಿದವರೆ ಅವಳಿಗೆ ಅತಿಯಾದ ಸಿಟ್ಟು ಬಂದಿರಬೇಕೆಂದು ಹೇಳಬಹುದಿತ್ತು. ರಾಜಾಸಾಹೇಬನ ಮಾತುಗಳು ಮೇಲಿಂದ ಮೇಲೆ ನೆನಪಾಗಿ ಆವಳ ಮುಖದಲ್ಲಿ ವಿಕಾರ ಕಾಣಿಸಿಕೊಳ್ಳುತ್ತಿತ್ತು. ಆವನಿಗೆ ತಾನು ಹೇಳಿದುದಾದರೂ ಏನನ್ನು? ಎಲ್ಲರೂ ಹಣ ಗಳಿಸುವ ರೀತಿ ನೀತಿಗಳನ್ನೇ ತುಸು ಬಿಡಿಸಿ ಹೇಳಿದ್ದಳು. ಆದರೆ ಆವನು ಉತ್ತರಿಸಿದ ರೀತಿ ಯೇನು? ತಾನೊರ್ವ ಮಾತ್ರ ಬುದ್ಧಿವಂತ, ಪರೋಪಕಾರಿ ಮತ್ತು ಸರಳ ನೆಂದು ಭಾವಿಸಿಕೊಂಡಿದ್ದಾನೆ. ಅವಳೇನು ಕಳವು ಮಾಡಲು ಹೇಳಿದ್ದಳೇ? ಆವನು ಮಾಡಿದ ಉಪದೇಶದ ಅರ್ಥವಾದರೂ ಏನು?

ಇವೇ ಮೊದಲಾದ ವಿಚಾರಗಳಲ್ಲಿ ಮಗ್ನಳಾಗಿರುವಾಗಲೇ ಅವಳ ಮನೆ ಬಂದಿತ್ತು. ಆ ಮನೆಯನ್ನಂತೂ ಅವಳು ಎಂದಿನಿಂದಲೂ ತಿರಸ್ಕರಿಸುತ್ತಿದ್ದಳು. ಅದಕ್ಕೆ ಮನೆಯೆಂದಾದರೂ ಹೇಗೆ ಕರೆಯುವದು? ಗೊಬ್ಬೂರಿನ ಉಪನಗರ ದಲ್ಲಿನ ಮನೆಗಳನ್ನು ಅವಳು ಕಂಡಿರಲಿಲ್ಲವೇ? ಭವ್ಯವಾದ ಆ ಮನೆಗಳೊ! ಸುತ್ತಲಿನ ವಿಶಾಲವಾದ ಹೂದೋಟಗಳೊ! ಅವಳ ಈ ಮನೆಯೊ! ಅಡುಗೆ ಮನೆ—ಬಚ್ಚಲು ಮನೆ—ಊಟದ ಮನೆಗಳೆಲ್ಲ ಒಂದರಲ್ಲೇ. ಛೀ, ಎಂಥ ಹೊಲಸು ಮನೆ! ಇದ್ದ ಒಂದು ಕೋಣೆಯಲ್ಲಿ ತುಸು ಹಾಯಾಗಿ ಬಿದ್ದಿರ ಬೇಕೆಂದರೆ, ಅವಳ ತಮ್ಮ ಸುಭಾಸ—ಎಂಥ ಕೆಟ್ಟ ಹುಡುಗ—ನೋಡಿದರೆ ಇನ್ನೂ ಹತ್ತು ವರ್ಷ ಆದರೆ,—ಅವನ ಗದ್ದಲಕ್ಕೆ ಮನೆಯ ಚಪ್ಪರವೇ ಹಾರಿ ಬೀಳುವದು. ಇಂಥ ಕಡೆ ಅವಳಿಗೆ ನೆಮ್ಮದಿ ಸಿಕ್ಕಬಹುದೆ?

ಅವಳು ಟಾಂಗಾದಿಂದ ಇಳಿಯುತ್ತಿದ್ದಂತೆ ಸುಭಾಸನ ಧ್ವನಿ ಕೇಳಿಸಿತು. ಟಾಂಗಾದ ಸಪ್ಪಳ ಕೇಳಿ ಓಡುತ್ತಲೇ ಬಂದು ಆತನೆಂದ:

"ಅಕ್ಕಾ, ನಿನಗೊಂದು ಪತ್ರ ಬಂದಿದೆ. ಇದೇ ಈಗ ಟಪಾಲಿಗೆ ಬಂತು. ಅದರ ಮೇಲೆ ಹೊಸ ಮಾದರಿಯ ತಿಕೀಟು ಇದೆ. ಅದನ್ನು ನನಗೆ ಕೊಡು

ವಿಯಾ? ನನ್ನ ಸಂಗ್ರಹದಲ್ಲಿ ಅಂಥಾದ್ದು ಇಲ್ಲ. ಏ ಅಕ್ಕಾ, ಹೇಳೇ........"

ವೀಣೆಯನ್ನು ಮೀಟಿ ತಂತಿಯನ್ನು ಸರಿಪಡಿಸುವ ಸಂಗೀತಗಾರನಂತೆ ಸುಭಾಸನ ಕಿವಿ ಹಿಂಡುತ್ತ ಸುಶೀಲಾರಾಣಿ,

"ಏ ಕತ್ತೆ, ಹಾಗೇಕೆ ಕಿರುಚಿಕೊಳ್ಳುತ್ತಿ? ತುಸು ಶಾಂತನಾಗು. ತಿಕೀಟನ್ನು ನೀನೇ ತಕ್ಕೊಳ್ಳುವಿಯಂತೆ, ನಾನೇನು ಮಾಡಲಿ ಅದನ್ನು? ಎಲ್ಲಿದೆ ಆ ಪತ್ರ?" ಎಂದಳು.

ಅವನ ಕೈಯಿಂದ ಪಾಕೀಟನ್ನು ಕಸಿದುಕೊಂಡು ಅದರೊಳಗಿನ ಪತ್ರ ವನ್ನು ತೆಗೆದು ಕವರನ್ನು ಅವನ ಕೈಗಿತ್ತಳು. ಹರ್ಷೋದ್ಗಾರಗಳೊಂದಿಗೆ ಸುಭಾಸ ಓಡಿ ಹೋಗಿ ಅಡುಗೆ ಮನೆಯಲ್ಲಿ ಮಾಯವಾದ. ಅವಳು ತನ್ನ ಕೋಣೆಯಲ್ಲಿ ಪ್ರವೇಶಿಸುತ್ತಿರುವಾಗಲೇ ಅಡುಗೆ ಮನೆಯ ಬಾಗಿಲಿನ ಕಡೆ ಯಿಂದ—

"ಯಾರು, ಸುಶೀಲಾ?" ಎಂಬ ಧ್ವನಿ ಕೇಳಬಂದಿತು.

"ಹೌದವ್ವಾ ನಾನೇ. ಹಾಸಿಗೆ ಕಟ್ಟಿಕೊಂಡು ಹೋಗಲು ಬಂದೀನಿ. ಇಂದಿನ ರಾತ್ರಿಯ ನಾಟಕಕ್ಕೆ ನಾನು ಬೆಳಗಾವಿಯಲ್ಲಿರಬೇಕು."

"ಹಾಗಾದರೆ ಯಾವ ಟ್ರೇನ್ ಹಿಡಿಯುವಿ?"

"ನಾಲ್ಕೂವರೆ ಗಂಟೆಯ ಗಾಡಿಗೆ ಹೊರಡಬೇಕು."

"ವೇಳೆಯೆಲ್ಲಿದೆಯೇ ಸುಶೀಲಾ, ಗಡಿಬಿಡಿಯಿಂದ ಸ್ಟೇಶನ್ನಿಗೆ ಓಡ ಬೇಕು."

"ಹೌದವ್ವಾ ಬೇಗ ಹೊರಡಬೇಕು."

"ಚಲ್ ಚಲ್‌ರೆ ನವಜವಾನ್" "ನಾಚತ ಹೈ ಮೇರಾ ಮನಕಾ ಮೋರ" ಎಂಬ ಸಿನೇಮಾ ಪದಗಳ ಧ್ವನಿ ಅಡುಗೆಯ ಮನೆಯಿಂದ ಕೇಳಬರು ತ್ತಿತ್ತು. ಆನಂದಾತಿಶಯದಲ್ಲಿದ್ದ ಸುಭಾಸನ ಆ ಸಂಗೀತ ಕೇಳಲು ಕತ್ತೆಗಳ ಸ್ಥೈರ್ಯ ಬೇಕು! ಆಗ ತಾನೆ ಬಂದಿದ್ದ ಆ ಪತ್ರವನ್ನೋದಲು ಆ ದಿವ್ಯ ಸಂಗೀತದ ಮಧ್ಯೆ ಸಾಧ್ಯವಿರಲಿಲ್ಲ. ಅಂತೆಯೇ ಸುಶೀಲೆ ಅದರ ಮೇಲೆ ತುಸು ದೃಷ್ಟಿ ಬೀರಿ ಅದನ್ನು ತನ್ನ ಬ್ಲೌಜಿನಲ್ಲಿ ಸೇರಿಸಿಕೊಂಡಳು. ಅವಳ ಗೆಳತಿ ಕಾಮನೂರಿನ ಸರದಾರಿಣಿ ಲೀಲಾರಾಣಿಯ ಪತ್ರವದು. ಇದೇ ಗೆಳತಿಯ ಬಗೆಗೇ ಅವಳು ರಾಜಾಸಾಹೇಬನೊಡನೆ ಹೇಳಿದ್ದಳು. ಸುಶೀಲಾರಾಣಿ

ನಾಟ್ಯರಂಗಕ್ಕೆ ಕಾಲಿಕ್ಕಿದ ನಂತರ ಯಾರೊಡನೆಯೂ ಗೆಳೆತನ ಬೆಳೆಸಿಕೊಂಡಿರ ಲಿಲ್ಲ. ಅವಳ ಮನೆತನದ ಗೌರವವೂ ಅದಕ್ಕೆ ಕಾರಣವಾಗಿರಬೇಕು. ಅದೇಕೋ, ಲೀಲಾರಾಣಿಯ ಸ್ನೇಹವನ್ನು ಮಾತ್ರ ತಪ್ಪಿಸಿಕೊಳ್ಳಲು ಸಾಧ್ಯ ವಾಗಿರಲಿಲ್ಲ. ಕಾಮನೂರಿನ ಸರದಾರರೊಡನೆ ಲೀಲಾವತಿಯು ಲಗ್ನವಾದ ನಂತರ ಸೌಖ್ಯದಿಂದಿರುವಳೋ ಇಲ್ಲವೋ ಎಂಬುದು ಸುಶೀಲಾರಾಣಿಗೆ ತಿಳಿದಿರ ಲಿಲ್ಲವಾದರೂ ಅವಳ ಬಗೆಗಿದ್ದ ಸ್ನೇಹಕ್ಕೇನು ಕೊರತೆ ಬಂದಿರಲಿಲ್ಲ.

ಪತ್ರವೂ ದೀರ್ಘವಾಗಿದ್ದಿತು. ಮನೆಯಲ್ಲಿನ ಗದ್ದಲದಲ್ಲಿ ಓದುವದೂ ಸಾಧ್ಯವಾಗಲಿಲ್ಲ. ಸುಶೀಲಳು ಅತ್ತೀಗೇರಿ ರಾಜಾಸಾಹೇಬನನ್ನು ಲಗ್ನವಾ ಗಲು ಒಪ್ಪಿದಾಗಿನಿಂದಲೂ 'ರಾಜ'ರ ಮನೆಯ ಹೆಂಗಸರ ಹೆಸರಿನ ಮುಂದೆ ಬರುವ 'ರಾಣಿ' ಎಂಬ ಬಿರುದು ಅವಳ ಹೆಸರಿಗೆ ಸೇರಿ 'ಸುಶೀಲಾರಾಣಿ' ಯಾದಂತೆ ಕಾಮನೂರಿನ ಸರದಾರರನ್ನು ಲಗ್ನವಾದ ಲೀಲಾವತಿಯ ಹೆಸರೂ 'ಲೀಲಾರಾಣಿ' ಎಂದಾಗಿತ್ತು. ಲೀಲಾರಾಣಿ ಮುಂಬಯಿಗೆ ಹೋಗಿ ಒಂದು ವರ್ಷದ ಮೇಲಾಗಿತ್ತು. ಅಷ್ಟು ದೀರ್ಘ ಕಾಲದ ನಂತರ ಬಂದಿದ್ದ ಈ ಪತ್ರ ವನ್ನು ಗಡಿಬಿಡಿಯಿಂದ ಓದುವದು ಸರಿಯಾಗಲಾರದು, ಅನುಕೂಲ ಸಮಯ ದಲ್ಲಿ ಓದಬೇಕು. ಲೀಲಾರಾಣಿ ಎಷ್ಟು ಒಳ್ಳೆಯವಳು! ತಾನು ಅಷ್ಟು ದೊಡ್ಡ ವ್ಯಕ್ತಿಯಾಗಿದ್ದರೂ ತನ್ನ ಗೆಳತಿಯನ್ನು ಮರೆತಿರಲಿಲ್ಲ. ಬಂಗಾರದಂಥ ಹೃದಯ ಅವಳದು. ಪತ್ರ ಬರೆಯುವದರಲ್ಲೂ ಎಷ್ಟು ಆಸ್ಥೆಯವಳಿಗೆ!

ಗಂಟು ಗದಡಿಗಳೊಂದಿಗೆ ಸ್ಟೇಶನ್ ಸೇರಿ, ಟಿಕೆಟ್ ಕೊಂಡು ಗಾಡಿ ಯಲ್ಲಿ ಕುಳಿತಾಗಲೇ ಅವಳಿಗೆ ಆ ಪತ್ರದ ನೆನಪಾದುದು. ಒಂದು ಮೂಲೆ ಯಲ್ಲಿ ಕುಳಿತು ಪತ್ರವನ್ನು ತೆರೆದು ನೋಡಿದಳು.

"ಪ್ರಿಯ ಗೆಳತಿ ಸುಶೀಲಾ,

ಮುಂಬಯಿಗೆ ಬಂದ ನಾನು ನಿನಗೆ ಬರೆಯುತ್ತಿರುವದು ಇದೇ ಮೊದಲ ಪತ್ರವಲ್ಲವೇ? ನನ್ನಿಂದ ಎಂಥ ಪ್ರಮಾದವಾಗಿದೆಯಲ್ಲ? ನಿನ್ನನ್ನಗಲಿ ಬಂದಾಗಿನಿಂದ ನನ್ನ ಜೀವನದಲ್ಲಿ ಆದ ಬದಲಾವಣೆಗಳೆಷ್ಟು?

ಮೊದಲನೆಯದಾಗಿ, ನಾನು ಸಾಧಿಸಿರುವ ಪ್ರಗತಿಯ ಕುರಿತು ಬರೆ ಯುವೆ. ಅಬ್ಬ, ಅದನ್ನು ಹೇಗೆ ವರ್ಣಿಸಲಿ! ನನಗೆ ಸಿಗುತ್ತಿರುವ ಸಂಬಳ ವನ್ನು ಕೇಳಿ ನೀನು ಮೂರ್ಛೆ ಹೋಗಬಹುದು, ಅದನ್ನು ಬರೆಯುವದಿಲ್ಲ.

ಈಗ ನಾನು ನರ್ತನವನ್ನೂ ಮಾಡಬಲ್ಲೆ. ಮೊದಮೊದಲು ಚಿಕ್ಕ ಹೋಟಲುಗಳಲ್ಲಿ ಪ್ರಾರಂಭಿಸಿದೆ. ಬರಬರುತ್ತಾ ದೊಡ್ಡ ಹೋಟಲು, ರೆಸ್ಟಾರೆಂಟಗಳಲ್ಲಿ ನೃತ್ಯಕ್ಕೆ ನಿಂತೆ. ಆಗಿನ ಜನರ ಗದ್ದಲವನ್ನು ತಡೆಯಲು ನನ್ನ ಕಾರ್ಯದರ್ಶಿ ಪೋಲೀಸರ ನೆರವನ್ನು ಪಡೆಯಬೇಕಾಯಿತು. ಈಗ ನಾನು ನರ್ತನ ಮಾಡುತ್ತಿರುವದು ಸುಂದರ್ ರೆಸ್ಟೋರೆಂಟ್‌ನಲ್ಲಿ. ಅಲ್ಲಿ ಗಿರಾಕಿಗಳಿಗೆ ಸ್ಥಳ ಸಿಕ್ಕುವದೂ ಕಠಿಣವಾಗಿದೆ. ಆಳುಗಳಿಗೆ ಲಂಚ ತೆತ್ತು ಸ್ಥಳ ದೊರಕಿಸಿ ಕೊಳ್ಳಬೇಕಾಗುತ್ತಿದೆ. ಹಾಲಿವುಡ್ಡಿನ ನರ್ತಕಿಯರ ವೇಷಭೂಷಣ ಕಂಡಿರುವಿಯಷ್ಟೆ? ಅದೇ ವೇಷ ಭೂಷಣ ನನ್ನದೂ! ಲಂಡ ಚಲ್ಲಣ ತೊಟ್ಟು ಕುಣಿಯಹತ್ತಿದರೆ ಸಾಕು! ನನ್ನ ಸುಂದರವಾದ ಕಾಲುಗಳನ್ನು ಕಂಡೇ ಕೇಕೆ ಹಾಕುವವರಿಗೆ ಕೊರತೆಯಿಲ್ಲ. ಅಂದಮೇಲೆ ನನಗೆ ಸಿಕ್ಕುವ ಹಣವನ್ನು ಬ್ಯಾಂಕಿಗೆ ಸಾಗಿಸಲು ಮೂರು ಜನ ಕೂಲಿಯವರು ಬೇಕೆಂದು ಹೇಳಿದರೆ ನಿನಗೆ ಆಶ್ಚರ್ಯವಾಗಲಿಕ್ಕಿಲ್ಲ.

ಇದೆಲ್ಲದಕ್ಕೂ ಕಾರಣವೇನು ಗೊತ್ತೇ? ಆ ನನ್ನ ಬಿರುದು. ಕಾಮನೂರಿನ ಸರದಾರಿಣಿ ಲೀಲಾರಾಣಿ! ಸರದಾರರಿಗೆ ಮಾತ್ರ ಅವರಿಂದ ಬೇಸರ. ನಾನೇನೋ ಸರದಾರರ ಮಗಳಲ್ಲವಂತೆ! ಬಿರುದು ಉಪಯೋಗಿಸಬಾರದಂತೆ, ನನಗಾಗುವ ಲಾಭ ಅವರಿಗೇನು ಗೊತ್ತು? ಒಂದು ಹಳ್ಳಿಯಲ್ಲಿ ಹುಟ್ಟಿ, ಯಾರದೋ ಪುಣ್ಯದಿಂದ ನಗರಕ್ಕೆ ಬಂದು ಅಲ್ಲಿಯೇ ಸರದಾರರ ಪ್ರೀತಿ ಗಳಿಸಿಕೊಂಡು ಅವರನ್ನು ಲಗ್ನವಾಗಿ ಈ ಬಿರುದು ದೊರಕಿಸಿದ್ದುದು ನಮ್ಮ ಜನಕ್ಕೆ ತಿಳಿಯುವದಾದರೂ ಹೇಗೆ? ನಾನೂ ಓರ್ವ ಸರದಾರರ ಮಗಳೆಂದೇ ಅವರ ಕಲ್ಪನೆ. ಹೀಗಿರುವಾಗ ನಾನು ಆ ಬಿರುದನ್ನು ದೂರವಿಡಬಹುದೇ? ಕಾಮನೂರ ಸರದಾರಿಣಿ ತನ್ನ ಕಾಲುಗಳನ್ನು ತೋರಿಸುತ್ತ ನೃತ್ಯ ಮಾಡುವದೇನು ಸಾಮಾನ್ಯವಾದ ಮಾತೇ? ಹಿರಿಯರು ಹಾಳು ಮಾಡಿದ ಆಸ್ತಿಯನ್ನು ತಿರುಗಿ ಪಡೆಯುವ ಸದುದ್ದೇಶದಿಂದ ನಾನು ನೃತ್ಯ ಮಾಡುತ್ತಿರುವೆನೆಂದೇ ಇಲ್ಲಿಯ ಜನ ತಿಳಿದಿದ್ದಾರೆ. ಸರಿ, ಎಲ್ಲರೂ ನನ್ನ ನೃತ್ಯ ನೋಡಲು ಧಾವಿಸುತ್ತಾರೆ.

ನಾನು ಗಳಿಸಿರುವ ಕೀರ್ತಿಯ ಬಗೆಗೆ ಹೇಳಿದುದಾಯಿತು. ನಾನೀಗ ಪತ್ರ ಬರೆಯುವದರ ಉದ್ದೇಶವೇ ಬೇರೆಯಾಗಿದೆ. ಅದೆಂದರೆ: ನೀನು ಇಲ್ಲಿಗೆ ಬರಬೇಕಾದುದು. ಮುಂಬಯಿಯ ಹೊರಭಾಗದಲ್ಲಿ ಪುಣೆಯ ದಾರಿಗೆ ಹೊಂದಿ

ಒಂದು ಮನೆಯನ್ನು ಬಾಡಿಗೆಯಿಂದ ಹಿಡಿದು ವಿಶ್ರಾಂತಿ ಪಡೆಯಲೆಂದು ಅಲ್ಲಿ ಇರಹತ್ತಿದ್ದೇನೆ. ಮಳೆಗಾಲ ತೀರುವ ತನಕ ನೀನು ನನ್ನ ಕೂಡ ಇದ್ದುಬಿಡು. ನಿನಗೂ ಅಷ್ಟರಲ್ಲಿ ಒಂದು ಕೆಲಸ ಕೊಡಿಸುವೆ. ನನ್ನ ಮಾತು ನಡೆಯುವ ಭರವಸೆಯೂ ನನಗಿದೆ. ನಿನಗೆ ನನ್ನ ಸಹಾಯದ ಅವಶ್ಯಕತೆಯಿದೆಯೆಂದೂ ನನಗನ್ನಿಸುವುದಿಲ್ಲ, ಅದು ಬೇರೆ. ಇಲ್ಲಿನ ಹೋಟೆಲ್ ಮಾಲಿಕರು ನಿನ್ನನ್ನು ನೋಡಿದರೆ ಸಾಕು, ನಿನಗೆ ಬಿಡುಗಡೆಯೇ ಸಿಕ್ಕಲಾರದು. ನಿನ್ನದೊಂದು ಫೋಟೋ ನನ್ನ ಹತ್ತಿರವಿರಲಿಲ್ಲವೇ, ಅದನ್ನು ಒಬ್ಬ ಮ್ಯಾನೇಜರನಿಗೆ ತೋರಿಸಿದೆ, ಅವನು ಸ್ವರ್ಗಕ್ಕೇ ಹಾರಿದ; ಅಂದರೆ ಅವನಿಗೆ ಅಷ್ಟು ಹರ್ಷವಾಯಿತು. ಗೊಬ್ಬೂರಿನಲ್ಲಿ ಸಿಕ್ಕಬಹುದಾದದ್ದರ ನಾಲ್ಕು ಪಟ್ಟು ಸಂಬಳ ನಿನಗೆ ಇಲ್ಲಿ ಖಂಡಿತವಾಗಿಯೂ ಸಿಕ್ಕುವದು.

ಪ್ರಿಯ ಸುಶೀ ನಿಲ್ಲಬೇಡ, ಖಂಚಿತ ಹೊರಟು ಬಿಡು. ನನಗೂ ಬೇಸರ ಬರುತ್ತಿದೆ. ಸರದಾರರೂ ತುಸು ಬದಲಾದಂತಿದೆ. ಅದರರ್ಥವೇನೆಂದು ನೀನು ಕೇಳಬಹುದು: ನನ್ನೊಡನೆ ತೀರ ಪರಕೀಯರಂತೆ ವರ್ತಿಸಹತ್ತಿದ್ದಾರೆ. ಅದನ್ನೆಲ್ಲ ಬರೆಯಬೇಕೆಂದರೆ ಹೇಗೆ ಪ್ರಾರಂಭಿಸಬೇಕೆಂಬುದೇ ತಿಳಿಯುತ್ತಿಲ್ಲ. ಆದರೂ ಹೇಳಲೇಬೇಕಲ್ಲವೆ? ಅದರ ವಿವರ: ನೃತ್ಯದಿಂದ ನಾನು ತುಸು ಹೆಸರು ಗಳಿಸಿದಮೇಲೆ ನನ್ನ ಕಾರ್ಯದರ್ಶಿಗೆ ಒಂದು ಉಪಾಯ ಹೊಳೆಯಿತು. ನನ್ನ ಕಾರ್ಯದರ್ಶಿ ಶಹಾ ಅಂದರೆ ಅದ್ಭುತ ವ್ಯಕ್ತಿ, ಜಗತ್ತಿನಲ್ಲಿನ ಬುದ್ಧಿಯೆಲ್ಲ ಅವನ ತಲೆಯಲ್ಲಿ ಕೇಂದ್ರೀಕೃತವಾಗಿದೆ. ನನ್ನ ಪ್ರಚಾರಾರ್ಥವಾಗಿ ಅವನು ಮೊದಲು ಪ್ರಾರಂಭಿಸಿದುದು ಸಂದರ್ಶನಗಳನ್ನು. ಹೊಸದಾಗಿ ನಟಿಯರಾಗಬಯಸುವವರಿಗೆ ನನ್ನ ಉಪದೇಶ, ನನ್ನ ಸೌಂದರ್ಯದ ಗುಟ್ಟು ಇವೆಲ್ಲವನ್ನೂ ಕೇಳಿ ತನ್ನ ಕೈಯಿಂದ ಕೆಲ ಶಬ್ದಗಳನ್ನು ಕೂಡಿಸಿ ಪತ್ರಿಕೆಗಳಲ್ಲಿ ಹಾಕಹತ್ತಿದ. ಅದರೊಡನೆ ಒಂದು ಮಂಗವನ್ನೂ ಒಂದು ಹಾವನ್ನೂ ನಾನು ಕೊಳ್ಳುವಂತೆ ಮಾಡಿದ. ಹೀಗೆ ಪ್ರಾಣಿಗಳನ್ನು ಸಾಕುವದರಿಂದ ಪ್ರಚಾರ ಬೆಳೆಯುವದೆಂದು ಶಹಾನ ಮತ. ಮೇಲಾಗಿ ಪ್ರಾಣಿಗಳ ಸಂಬಂಧ ಬರುವ ಕಥೆಗಳನ್ನು ಬರೆಯುವದರಲ್ಲಿ ಅವನಿಗೆ ಹೆಚ್ಚಿನ ಆಸ್ಥೆಯಂತೆ. ಶಹಾನ ಮಾತುಗಳಿಂದಾಗಿ ಅವೆರಡನ್ನೂ ಕೊಂಡು ಮನೆಗೆ ತಂದೆ. ಅಂದಿನಿಂದಲೂ ಸರದಾರರಿಗೆ ಅವೆರಡರ ಬಗೆಗೂ ತಿರಸ್ಕಾರ. ಆದರೊಂದಿಗೆ ಅವರ ವಿಚಿತ್ರ

ರೀತಿಗಳನ್ನೂ ತುಸು ಹೇಳುವೆ. ಮುಂಬಯಿ ಸೇರಿದ ಕೆಲ ದಿನಗಳ ನಂತರ ಅವರಿಗೆ ಚಿತ್ರಕಲೆಯ ಹುಚ್ಚು ಹಿಡಿದಿದೆ. ಇದೇ ಮೊದಲನೆಯ ಅಥವಾ ಕೊನೆಯ ಹುಚ್ಚಲ್ಲ. ನನ್ನ ಮತ್ತು ಅವರ ಪರಿಚಯವಾದ ಮೊದಲದರಲ್ಲಿ ಅವರಿಗೆ 'ರೇಸ್' ಕುದುರೆಗಳ ಹುಚ್ಚು ಇದ್ದಿತ್ತು. ಅದಾದ ನಂತರ ವಿಶ್ವದಲ್ಲಿ ಸಿದ್ಧವಾಗುವ ಹೊಸ ಹೊಸ ಯಂತ್ರಗಳ ಚಿತ್ರಗಳನ್ನು ಕಲೆ ಹಾಕುವ ಹುಚ್ಚು. ಅದರ ನಂತರ ಪಿಯಾನೋ ಬಾರಿಸಲು ಕಲಿಯುವ ಹುಚ್ಚು. ಈಗ ಚಿತ್ರ ಬರೆಯುವ ಹುಚ್ಚು !

ಅವರು ಚಿತ್ರ ಬರೆಯುತ್ತಿರುವರೆಂದು ನನಗೆ ಬೇಸರವಿಲ್ಲ. ಕೆಲಸವಿಲ್ಲದೆ ಏನಾದರೊಂದು ಮಾಡುತ್ತ ವೇಳೆ ಕಳೆಯುವದರ ಬದಲು ಬೇರಾವ ಕೆಟ್ಟ ಕೆಲಸಗಳಿಗೂ ಆಸ್ಪದವಿಲ್ಲದಂತೆ ಅದರಲ್ಲೇ ಮಗ್ನರಾಗಿರುತ್ತಿರುವದು ಅನುಕೂಲವೇ ಆಗಿದೆ. ಚಿತ್ರ ಬರೆಯಲೆಂದು ನಾವಿರುವ ಮನೆಯ ಆವರಣದ ಒಂದು ತುದಿಯಲ್ಲಿ ಒಂದು ಸ್ಟುಡಿಯೋ ಮಾಡಿಕೊಂಡು ದಿನವಿಡೀ ಅಲ್ಲಿ ವೇಳೆ ಕಳೆಯುತ್ತಾರೆ. ಅಷ್ಟು ಮಾಡುತ್ತಿದ್ದರೆ ಯಾವ ತೊಂದರೆಯೂ ಇಲ್ಲ. ಆದರೇನು ? ತಮ್ಮಲ್ಲಿನ ಕಲಾಶಕ್ತಿಯ ಬಗೆಗೆ ಇಲ್ಲದ ಹೆಮ್ಮೆ ! ತಮ್ಮಿಂದ ಉಚ್ಚ ದರ್ಜೆಯ ಕಲಾಕೃತಿಗಳು ನಿರ್ಮಾಣವಾಗಬಹುದೆಂದು ಅವರ ಮತ. ಅದಕ್ಕೂ ನನ್ನ ಅಡ್ಡಿಯಿಲ್ಲ. ಎಲ್ಲರೂ ಹೌದೆನ್ನಬಹುದಾದ ಕೃತಿಗಳು ಅವರಿಂದ ನಿರ್ಮಾಣವಾಗದಿರಲು ಮನೆಯಲ್ಲಿನ ತೊಂದರೆಗಳೇ ಕಾರಣಗಳಂತೆ ! ಈ ಮಾತನ್ನು ನಾನು ತಡೆಯಲಾರೆ.

ಇಂದು ಇಂಥ ಕೆಲವು ಘಟನೆಗಳು ನಡೆದುವು. ಮಧ್ಯಾಹ್ನದ ಊಟದ ಸಮಯ. ನನ್ನ ಹಾವು 'ಶಶಿ', ಎಂಥ ಸುಂದರ ಮತ್ತು ಮುದ್ದು ಪ್ರಾಣಿಯದು ! ನಾವು ಊಟಕ್ಕೆ ಕುಳಿತ ಟೇಬಲ್ ಕಾಲುಗಳಗುಂಟ ಮೇಲಕ್ಕೇರುವದರಲ್ಲಿ ಅದಕ್ಕೆ ಹೆಚ್ಚಿನ ಆನಂದ. ಹಾಗೆ ಏರಿ ಬಂದು ಟೇಬಲ್ ಮೇಲೆ ಮುಖವೆತ್ತಿ ತಾಟುಗಳತ್ತ ನೋಡುವುವನ್ನು ಕಂಡರೆ ನನಗಂತೂ ಬಲು ಹಿಗ್ಗು. ಕುದಿಸಿದ ತತ್ತಿಗಳೆಂದರೆ ಅದರ ಬಾಯಲ್ಲಿ ನೀರು ಬರುತ್ತದೆ. ಪಾಪ ! ಅವು ಎಲ್ಲಿಯಾದರೂ ಕಾಣುವವೇನೋ ಎಂದು ಅದು ತಟ್ಟೆಗಳತ್ತ ನೋಡಬಾರದೇ ? ರೂಢಿಯಂತೆ ಶಶಿ ಈ ದಿನವೂ ತನ್ನ ಮುದ್ದು ಮುಖವನ್ನು ಟೇಬಲ್ ಮೇಲೆ ಹಾಯಿಸಿದುದೇ ತಡ, ಕೈಯಲ್ಲಿದ್ದ ಚಮಚದಿಂದ ಅದರ ಮುಖಕ್ಕೆ ಸರದಾರರು

ಹೊಡೆದುಬಿಡಬೇಕೇ? ನನ್ನ ಕಡೆಗೆ ನೋಡುತ್ತ, "ಲೀಲಾರಾಣಿ, ಇದಕ್ಕೆ ಕೊನೆಯಿಲ್ಲವೆ? ನನ್ನಂಥ ಸೂಕ್ಷ್ಮ ಮತ್ತು ಭಾವನಾಶೀಲ ಹೃದಯವುಳ್ಳವ ನಿಗೆ ಈ ಮನೆಯಲ್ಲಿ ಸ್ಥಾನವಿಲ್ಲ. ಮಂಗ ಮತ್ತು ಹಾವುಗಳನ್ನು ನೋಡುವುದು ನನ್ನಿಂದಾಗದು. " ನಾನು ಬೇಕೋ........ಅಥವಾ........" ಎನ್ನುತ್ತಿರುವಾ ಗಲೇ ನನ್ನ ಮಂಗ 'ಹನುಮ', ಅದು ಕೋಣೆಯಲ್ಲಿರಬಹುದೆಂದು ನಾನು ಭಾವಿಸಿರಲಿಲ್ಲ, ಒಮ್ಮೆಲೇ ನೆಗೆದು ಬಂದು ಸರದಾರರ ಭುಜದ ಮೇಲೇರಿ ಕೂತಿತು. ಹನುಮನಿಗೆ ಸರದಾರರ ಮೇಲೇ ಹೆಚ್ಚಿನ ಪ್ರೀತಿ!

ನಾನು ಬರೆಯುತ್ತಿರುವುದನ್ನು ನೀನು ನಂಬಲಿಕ್ಕಿಲ್ಲ. ಆ ಚಮಚ ಕೈ-ಯಲ್ಲಿ ಹಿಡಿಮುಕೊಂಡೇ ಸರದಾರರು ಮನೆ ಬಿಟ್ಟು ಹೋದರು. ಅಂದು ಸಾಯಂಕಾಲ ಫೋನಿನಲ್ಲಿ ಮಾತನಾಡಿದರು "ಲೀಲಾರಾಣಿ, ಗೃಹಸ್ಥನಿಗೆ ಮನೆಯೇ ವಾಸಸ್ಥಳ, ನಿಜ. ಆದರೆ ಹನುಮ ಮತ್ತು ಶತಿಯರನ್ನು ಹೊರ ಹಾಕಿದ ವಿನಾ ಮನೆಯ ಹೊಸ್ತಿಲ ಒಳಕ್ಕೆ ಕಾಲಿಡಲಾರೆ" ಎಂದು ಅನ್ನಬೇಕೇ? ನಾನು ಏನು ಹೇಳಿದರೂ ಕೇಳಲಿಲ್ಲ. ಕೇವಲ ಮಂಗ ಮತ್ತು ಹಾವು ಸಾಕಿ ರುವದು ಅವರ ಪುಣ್ಯ. ಬೇರೆ ನಟಿಯೋರ್ವಳು ಒಂದು ಹುಲಿಯ ಮರಿ ಸಾಕಿದ್ದುದನ್ನೂ ನಾನು ನೆನಪು ಮಾಡಿಕೊಟ್ಟೆ. ಅವರು ತಮ್ಮ ಹಟ ಬಿಡಲು ಸಿದ್ಧರಾಗದೆ ಫೋನ್ ರಿಸೀವ್ಹರ್ ಇಟ್ಟುಬಿಟ್ಟರು. ಈವರೆಗೆ ಅವರ ಸುದ್ದಿಯೇ ಇಲ್ಲ.

ನನ್ನ ಹೃದಯವನ್ನು ಹಿಂಡಿದಂತಾಗಿದೆಯಾದರೂ ಅವರಿಗೆ ನಾನು ಸೊಪ್ಪು ಹಾಕಲಾರೆ ಆದರೆ ನನಗೆ ಪ್ರತಿಕೂಲ ಕಾಲ ಬಂದಂತಿದೆ. ಪ್ರಿಯೆ ಸುಶೀ, ನೀನಾದರೂ ಬಂದು ನನ್ನ ದುಃಖವನ್ನು ತುಸು ಕಡಿಮೆ ಮಾಡ ಬಾರದೇ. ಇಂದಿನಿಂದ ಎರಡು ದಿನಕ್ಕೆ ನಿನಗೆ ಈ ಪತ್ರ ತಲುಪುವದು. ಅಂದೇ ನೀನು ಹೊರಡುವದಾದರೆ ಒಂದು ವಿಷಯ ತಿಳಿಸುವೆ. ನನ್ನ ಗೆಳೆಯರೊಬ್ಬರು ಅಂದು ಬೆಳಗಾವಿಯಿಂದ ಹೊರಡುವವರಿದ್ದಾರೆ. ಅವರು ಮೇಲ್ ಟ್ರೇನ್ ಹಿಡಿಯುವರು, ಸೆಕಂಡ ಕ್ಲಾಸಿನಲ್ಲಿ. ಗೊಬ್ಬೂರಿನಿಂದ ನೀನೂ ಅದೇ ಟ್ರೇನ್ ಹಿಡಿದರೆ ನಿಮ್ಮಿಬ್ಬರ ಭೇಟಿಯಾಗಬಹುದು. ನೀನೂ ಸೆಕಂಡ್ ಕ್ಲಾಸ್‌ನಲ್ಲೇ ಹೊರಡು. ಅವರ ಹೆಸರು ವಿಲಾಸರಾಯ! ಮೋಟರುಕಾರು ಮಾರಾಟದ ಏಜಂಟರಾಗಿದ್ದಾರೆ. 'ವಿಲಾಸ ಮೋಟರ್ ಎಜನ್ಸಿ' ಎಂಬ ಹೆಸರು ನಿನಗೆ

ಕೇಳಿ ಗೊತ್ತಿರಬಹುದಲ್ಲ ?

ಸುಶೀಲಾ, ನನ್ನ ಮಾತು ಕೇಳಿ ಹೊರಟು ಬಿಡು. ನೀನು ಬರದಿದ್ದರೆ ನಾನು ಸರದಾರರಿಗೆ ಶರಣು ಹೋಗಬಹುದು. ಒಮ್ಮೆ ಶರಣು ಹೋದರೆ ತೀರಿತು, ಕೊನೆಯವರೆಗೂ ನಾನು ಅವರ ಹಿಡಿತದಲ್ಲಿ ಸಿಕ್ಕಂತೆಯೇ. ಒಂದು ಕಲ್ಲನ್ನು ಅವರ ತಲೆಯ ಮೇಲೆ ಹಾಕಿ ಬಿಡುವಷ್ಟು ಸಿಟ್ಟೇನೋ ಬರುತ್ತಿದೆ. ಆದರೆ ಅವರನ್ನು ಪೂರ್ಣ ಮನಸ್ಸಿನಿಂದ ನಾನು ಪ್ರೀತಿಸುತ್ತಿರುವೆನೆಂದು ನಿನಗೇನು ಗೊತ್ತಿಲ್ಲವೇ ?

ನಿನ್ನ ಪ್ರೀತಿಯ ಗೆಳತಿ

ಲೀಲಾರಾಣಿ, ಶಾಮನೂರ ಸರದಾರಿಣಿ."

ಪತ್ರವನ್ನು ಓದಿ ಮುಗಿಸಿಯಾದ ಮೇಲೆ ಸುಶೀಲಳ ಶಕ್ತಿಯೇ ಕುಗ್ಗಿದಂತಾಯಿತು. ಅವಯವಗಳೆಲ್ಲ ಜೋತು ಬಿದ್ದಂತೆ ಭಾಸವಾಯಿತು. ತನ್ನ ಅಸಹಾಯಕ ಸ್ಥಿತಿಗಾಗಿ ಅವಳ ಕಣ್ಣುಗಳೂ ತೇವುಗೊಂಡವು. ಮುಂಬಯಿಗೆ ತಾನು ಹೋಗಬೇಕು ಎಂಬ ವಿಚಾರದಿಂದ ಅವಳಲ್ಲಿ ಹೊಸ ಚೇತನೆಯೊಂದು ಸಂಚರಿಸಿತು. ಎಂಥ ರೋಮಾಂಚಕಾರಿಯಾದ ಪ್ರಸಂಗ ! ಸುಶೀಲಾ.... ಮುಂಬಯಿ ! ಆದರೇನು ? ಅಲ್ಲಿಗೆ ಹೋಗಲು ಅವಳ ಹತ್ತಿರ ಹಣವೆಲ್ಲಿಯದು ? ಮತ್ತೊಮ್ಮೆ ಅವಳ ಮನಸ್ಸು ಖಿನ್ನವಾಯಿತು.

"ಲೀಲಾವತಿಗೆ ಈ ವಿಚಾರ ಹೊಳೆಯಬಾರದಿತ್ತೇ ?" ಎಂದೂ ಚಿಂತಿಸಿದಳು. ಮತ್ತೊಮ್ಮೆ ಪತ್ರವನ್ನು ತೆರೆದಳು. ಕೊನೆಯ ಪುಟದ ಬುಡದಲ್ಲಿ 'ಪು-ತಿ' ಎಂದಿದ್ದಿತು. ತಿರುವಿ ನೋಡಿದಳು.

"ನಿನ್ನ ಆರ್ಥಿಕ ಸ್ಥಿತಿಯ ವಿಚಾರ ನನಗೆ ಗೊತ್ತಿಲ್ಲ. ಮೊದಲಿನಂತೆಯೇ ಕೊರತೆಯಲ್ಲಿದ್ದರೆ ತೊಂದರೆಯಾಗಬಹುದು. ಅದಕ್ಕಾಗಿ ಗೊಬ್ಬೂರಿನಿಂದ ಮುಂಬಯಿವರೆಗೆ ಎರಡನೆಯ ವರ್ಗದ ಒಂದು ತಿಕೀಟು ಕೊಳ್ಳಲು ಬೇಕಾಗುವ ಹಣವನ್ನು ನಿಮ್ಮೂರ ಸ್ಟೇಶನ್ ಸಮೀಪಕ್ಕೇ ಇರುವ ದಲಾಲ ಆ್ಯಂಡ ಕಂಪನಿಯಲ್ಲಿ ನೀನು ಇಸಿದುಕೊಳ್ಳಬಹುದು. ಅವರಿಗೂ ಬರೆದಿದ್ದೇನೆ." ಎಂದಿದ್ದಿತು.

ಮೇಲ್‌ಗಾಡಿ ಬಿಡಲು ಇನ್ನೂ ಇಪ್ಪತ್ತೈದು ನಿಮಿಷಗಳಿದ್ದುವು. ಆದಷ್ಟು

ತೀವ್ರ ತನ್ನ ಮನೆಯನ್ನು ಬಿಡುವ ವಿಚಾರದಲ್ಲಿ ಅವಳು ಗಾಡಿ ಬಿಡುವ ಸಮ ಯಕ್ಕೆ ಬಹು ಮುಂಚಿತವಾಗಿಯೇ ಬಂದಿರುವದು ಹೊಳೆಯಿತು. ಅವಳು ಗಾಡಿಯಿಂದ ಇಳಿದವಳೇ ದಲಾಲ ಆ್ಯಂಡ ಕಂಪನಿಯ ಕಚೇರಿಯನ್ನು ಪ್ರವೇ ಶಿಸಿದಳು. ಸುಂದರಾಂಗಿಯೋರ್ವಳು ಗಡಿಬಿಡಿಯಿಂದ ತಮ್ಮ ಆಫೀಸ ಪ್ರವೇಶಿ ಸಿದುದನ್ನು ಕಂಡ ಚಿಕ್ಕ ದಲಾಲನ ಸ್ಥಿತಿಯೇನಾಗಿರಬಹುದು! ಕತ್ತಲು ತುಂಬಿದ ಮನೆಯಲ್ಲಿ ಒಮ್ಮೆಲೇ ವಿದ್ಯುದ್ದೀಪ ಬೆಳಗಿಸಿದೊಡನೆ ಆಗುವಾಗಿನ ಅನುಭವ ದಲಾಲನಿಗಾಯಿತು. ಕಾಮನೂರ ಸರದಾರಣಿಯ ಪತ್ರದಲ್ಲಿದ್ದಂತೆ ಸುಶೀಲಳ ಪತ್ರದಲ್ಲಿದ್ದುದನ್ನು ಕಂಡು ಅವಳಿಗೆ ತಕ್ಷಣವೇ ಹಣ ಕೊಡಲಾ ಯಿತು. ಹಣ ಸಿಕ್ಕೊಡನೆಯೇ ನೇರವಾಗಿ ಟ್ಯಾಕ್ಸಿಯೊಂದರಲ್ಲಿ ರಾಮರಾಯನ ಕಂಪನಿಯ ಕಚೇರಿಗೆ ಹೋಗಿ, ತನ್ನ ಬದಲು ಬೇರೊಬ್ಬ ಹುಡುಗಿಯನ್ನು ದೊರಕಿಸಿಕೊಳ್ಳಲು ತಿಳಿಸಿ ಸ್ಟೇಶನ್ನಿಗೆ ಬಂದಳು. ಬೆಳಗಾವಿಯ ತಿಕೀಟಿನ ಹಣ ವಾಪಸು ಪಡೆದು ಎರಡನೆಯ ತರಗತಿಯ ತಿಕೀಟು ಕೊಂಡು ಮುಂಬಯಿಗೆಂದು ಗಾಡಿಯಲ್ಲಿ ಕಾಲಿರಿಸಿದಾಗ ಅದು ಹೊರಡಲು ಇನ್ನೂ ಐದು ನಿಮಿಷ ಗಳಿದ್ದವು.

ತಾನು ಮುಂಬಯಿಗೆ ಹೋಗುತ್ತಿದ್ದುದನ್ನು ತನ್ನ ತಾಯಿಗೆ ತಿಳಿಸಲೆಂದು ಗಡಿಬಿಡಿಯಿಂದಲೇ ಪತ್ರವನ್ನು ಬರೆದು ಟಪ್ಪಾಲು ಪೆಟ್ಟಿಗೆಗೆ ಹಾಕಿದಳು. ಪತ್ರ ವನ್ನೋದಿ ತಾಯಿ ಬಿಡಬಹುದಾದ ನಿಟ್ಟುಸಿರು, ಸುಭಾಸನ ಅಲುಗಳನ್ನು ಒಂದು ಕ್ಷಣ ಕಲ್ಪಿಸಿಕೊಂಡಳು.

ಮರುಕ್ಷಣದಲ್ಲೇ ಅವಳ ಮುಖದಲ್ಲಿ ತೃಪ್ತಿಯ ನಗು ಮೂಡಿ ನಿಂತಿತು.

## ೪

ಸ್ಟೇಶನ್ನಿನಿಂದ ಕೇವಲ ಒಂದೇ ಫರ್ಲಾಂಗಿನ ಅಂತರದಲ್ಲಿ "ದಲಾಲ— ದಲಾಲ—ದಲಾಲ—ದಲಾಲ ಆ್ಯಂಡ ಕಂಪನಿ"ಯ ಬ್ರ್ಯಾಂಚ ಆಫೀಸಿನ ಹಲಗೆಯನ್ನು ಹಣೆಗೆ ಹಚ್ಚಿಕೊಂಡು ಆ ಕಚೇರಿ ನಿಂತಿತ್ತು. ಈ ಬ್ರ್ಯಾಂಚ್ ಆಫೀಸಿನ ಮೇಲ್ವಿಚಾರಣೆ ಮಾಡುತ್ತಿದ್ದ ಮಾಣಿಕಲಾಲ ದಲಾಲನನ್ನು ಹಿಡಿದರೆ

ನಾಲ್ಕು ತಲೆಮಾರಿನಿಂದ ನಡೆದು ಬಂದ ಸಂಸ್ಥೆಯದು. ಮಾಣಿಕಲಾಲನ ಮುತ್ತಾತ ಬಲು ಧೂರ್ತ ಮನುಷ್ಯ. ಮುಂಬಯಿಯಲ್ಲೇ ತನ್ನ ಆಫೀಸು ತೆರೆದು ಕೂತಿರದೆ ಕರ್ನಾಟಕದಲ್ಲೂ ತಮ್ಮ ವ್ಯವಹಾರ ಬೆಳೆಸಲು ಅನುಕೂಲ ವಾಗುವದನ್ನು ಯೋಚಿಸಿಯೇ ಗೊಬ್ಬೂರಿನಲ್ಲೂ ಈ ಶಾಖೆಯನ್ನು ತೆರೆದಿದ್ದ. ಅವನ ಗ್ರಹಿಕೆಯೂ ತಪ್ಪಾಗಿರಲಿಲ್ಲ. ಈ ಭಾಗದ ರಾಜರು, ಮಹಾರಾಜರು, ಜಾಗೀರದಾರರು, ಶ್ರೀಮಂತರು ಎಲ್ಲರೂ ತಮ್ಮ ತಮ್ಮ ಮನೆತನದ ಹಣಕಾಸು, ಜಮೀನು, ಮಿಲ್ ಮೊದಲಾದವುಗಳ ವ್ಯವಹಾರವನ್ನು ದಲಾಲ ಕಂಪನಿಗೇ ಕೊಡಹತ್ತಿದರು. ಹಣವುಳ್ಳವರ, ಉಚ್ಚ ಮನೆತನದವರ, ದೊಡ್ಡವರೆಲ್ಲರ ಆರ್ಥಿಕ ಭದ್ರತೆ ಅಭದ್ರತೆಗಳೆಲ್ಲ ದಲಾಲ ಆ್ಯಂಡ್ ಕಂಪನಿಗೆ ಗೊತ್ತಿದ್ದಿತೆನ್ನ ಬಹುದು. ಅದರಂತೆಯೇ ಮಾಣಿಕಲಾಲ ದಲಾಲನ ಪರಿಚಯವೂ ರಾಜಾ ಸಾಹೇಬನಿಗಿದ್ದುದು. ಅವರಿಬ್ಬರಲ್ಲಿ ಗೆಳೆತನವೇ ಬೆಳೆದು ಬಂದಿತೆನ್ನಬಹುದು.

ರಾಜಾಸಾಹೇಬ್ ದಲಾಲ ಕಂಪನಿಯ ಕಚೇರಿಯಲ್ಲಿ ಕಾಲಿರಿಸಿದಾಗ ಮಾಣಿಕಲಾಲನು ಕಾಗದದ ತುಂಡುಗಳ ಮುದ್ದೆಗಳನ್ನೇ ಚೆಂಡುಗಳನ್ನಾಗಿ ಭಾವಿಸಿ ಕೊಡೆಯ ಹಿಡಿಯಿಂದ ಕ್ರಿಕೆಟ್ ಆಟ ಆಡುತ್ತಿದ್ದ. ಮಾಣಿಕಲಾಲನ ತಂದೆಯವರೂ ಇತ್ತೀಚೆಗೆ ಗೊಬ್ಬೂರಿನಲ್ಲೇ ಇರುತ್ತಿದ್ದರು. ಅವರು ಕಚೇರಿ ಯಲ್ಲಿರುವ ಸಮಯದಲ್ಲಿ ಮಾಣಿಕಲಾಲನು ಭಾರವಾದ ಕಾನೂನಿನ ಪುಸ್ತಕ ಗಳಲ್ಲಿ ದೃಷ್ಟಿ ಸೇರಿಸಿ ಪುಟ ತಿರುವಿ ಹಾಕುತ್ತಿದ್ದ. ಅವರು ಹೊರಗೆ ಹೋದೊ ಡನೆ ಕಾಗದದ ತುಂಡುಗಳಿಂದ ಮಾಡಿದ ಚೆಂಡು, ಕೊಡೆಯ ಬ್ಯಾಟ್ ಪ್ರಾರಂಭವಾಗುತ್ತಿತ್ತು.

ವಕೀಲರಲ್ಲಿರಬೇಕಾದ ವಿಶಿಷ್ಟ ಗುಣಗಳಾವುವೂ ಮಾಣಿಕಲಾಲನಲ್ಲಿರ ಲಿಲ್ಲ. ಅವನು ಕಾಲೇಜಿನಲ್ಲಿದ್ದಾಗ ಒಳ್ಳೆಯ ಆಟಗಾರನಾಗಿ ಮೆರೆದಿದ್ದ. ಮನ ಸ್ಸಿಲ್ಲದೆ ವಕೀಲಿ ಪಾಸು ಮಾಡಿ ಗೊಬ್ಬೂರ ಆಫೀಸಿಗೆ ಸೇರಿದ್ದರೂ ಅವನಿಗಿನ್ನೂ ಆಟದ ಹುಚ್ಚು ಹೋಗಿರಲಿಲ್ಲ. ಕೊಡೆ ಮತ್ತು ಕಾಗದದ ಚೆಂಡು ಕಂಡೊಡನೆ ತಾನು ಮುಂಬಯಿಯ ಕ್ರಿಕೆಟ್ ಆಟದ ಬಯಲೊಂದರಲ್ಲಿ ಬೌಂಡರಿ ಹೊಡೆಯು ತ್ತಿದ್ದಂತೆ ಅವನಿಗೆ ಅನುಭವವಾಗುತ್ತಿತ್ತು. ಕೊಡೆಯ ಹಿಡಿಕೆಯು ಅನೇಕಸಲ ಬದಲಾದುದೇ ಅದಕ್ಕೆ ಸಾಕ್ಷಿ. ಕಾನೂನಿನ ವಿಚಾರವಾಗಿ ಅವನಿಗೆ ಆಸ್ಥೆಯೇ ಇರಲಿಲ್ಲ. ರಾಜಾಸಾಹೇಬ್ ಆಫೀಸಿನೊಳಕ್ಕೆ ಕಾಲಿರಿಸಿದೊಡನೆ ಮಾಣಿಕಲಾಲ

ನೇರವಾಗಿ ಅಂದಿನ ವಿಷಯವನ್ನೇ ಪ್ರಸ್ತಾಪಿಸಿದ್ದುದನ್ನು ಹಿರಿಯ ದಲಾಲ ಕಂಡಿದ್ದರೆ ಅತ್ತುಬಿಡಬಹುದಾಗಿತ್ತು. ಅವರಿಗಿಂತ ಪೂರ್ವಜರು ಗೋರಿಯೊಳಗಿನಿಂದಲೇ ಅದನ್ನು ಕಂಡು ಅತ್ತಿದ್ದರೇನೋ !"

"ಹಲೋ ರಾಜಾಸಾಹೇಬ, ಹೇಗಿರುವಿರಿ ? ಕ್ಷೇಮವಷ್ಟೆ ?" ಎನ್ನುತ್ತ ಕೊಡೆಯ ಹಿಂಬದಿಯ ತುದಿಯಿಂದ ಆವನ ಹೊಟ್ಟೆಗೆ ತಿವಿದು, "ನನ್ನ ಫೋನ್ ಸುದ್ದಿ ತಿಳಿಯಿತೇ ? ಎಂಥ ಶೋಧಸಪ್ಪಾ ಈ ಟೆಲಿಫೋನ್, ಆಶ್ಚರ್ಯಕಾರಕಶೋಧ" ಎಂದ ಮಾಣಿಕಲಾಲ.

"ಈಗ ತಾನೇ ಕ್ಲಬ್ಬಿನಿಂದ ಬಂದೆ, ಮಾಣಿಕಲಾಲ."

"ಕುಳಿತುಕೊಳ್ಳಿ ರಾಜಾಸಾಹೇಬ್, ಇಕೋ ಈ ಖುರ್ಚಿ........"

"ವಿಶೇಷವೇನು ?"

ರಾಜಾಸಾಹೇಬನನ್ನು ಒಂದು ಕುರ್ಚಿಯಲ್ಲಿ ನೂಕಿ, ಮಾಣಿಕಲಾಲ ಮೇಜಿನ ಮೇಲೆ ಕುಳಿತುಕೊಂಡ.

"ನನ್ನ ತಂದೆಯವರು ಈಗ ಇದ್ದಿದ್ದರೆ ನಾನು ಹೇಳಲಿರುವ ಸುದ್ದಿಯನ್ನು ತಿಳಿಸುವ ಪೂರ್ವದಲ್ಲಿ ಒಂದು ಗಂಟೆ ಭಾಷಣ ಮಾಡಿ, ಆ ಹಕ್ಕು, ಈ ಹಕ್ಕು ಎಂದು ಏನೇನೋ ಹೇಳುತ್ತಿದ್ದರು. ಅವರು ಇಲ್ಲವೆಂದೇ ನಾವಿಬ್ಬರೂ ಗೆಳೆಯರಂತೆ ಮಾತನಾಡುತ್ತಿರುವದು. ಮುಂಬಯಿಯ ಸುಪ್ರಸಿದ್ಧ ವರ್ತಕ ಸುಂದರರಾಯರ ಪರಿಚಯ ನಿಮಗಿದೆಯೇ ?"

"ಸುಂದರರಾವ್ ?"

"ಹೌದೌದು, ಸುಂದರರಾವ್ ಸರಕಾರ್! ಅವರೇ—ಮುಂಬಯಿಯ ಶ್ರೇಷ್ಠ ವರ್ತಕರು, ಗೊಬ್ಬೂರಿನಲ್ಲೂ ವ್ಯವಹಾರ ನಡಸುತ್ತಿದ್ದ ಅರಳೆಯ ವ್ಯಾಪಾರಿ. ಈಗ ಪರಲೋಕದಲ್ಲಿರುವ ಸುಂದರರಾವ ಸರಕಾರ್—"

"ಅಯ್ಯೋ ಪಾಪ, ಸುಂದರರಾವ್ ಸತ್ತುಹೋದರೇ ?"

"ಹೌದು ಸತ್ತುಹೋದರು. ಸಾಯುವಾಗ ನಿಮ್ಮ ಹೆಸರಿಗೆ ಹತ್ತು ಲಕ್ಷ ರೂಪಾಯಿ ಬಿಟ್ಟುಹೋಗಿದ್ದಾರೆ."

ರಾಜಾಸಾಹೇಬ್ ತನ್ನ ಗಡಿಯಾರದತ್ತ ನೋಡಿಕೊಂಡು, " ಸಾಕು ಮಾಣಿಕಲಾಲ, ಚೇಷ್ಟೆಗಾಗಿ ಸಮಯವಿಲ್ಲ. ನನ್ನನ್ನು ಕರೆಯಿಸಿದ ಕಾರಣ

ವೇನು ಹೇಳಬಾರದೇ ? ನಾನು ಈಗಲೇ ತಿರುಗಿ ಕ್ಲಬ್ಬಿಗೆ ಹೋಗಬೇಕು. ಸಮಯಕ್ಕನುಸಾರವಾಗಿ ಅಲ್ಲಿರದಿದ್ದರೆ ಅಲ್ಲಿನ ಕೆಲಸವೂ ಕೈಬಿಡಬಹುದು. ನನ್ನ ಅರ್ಜಿಯ ಪರಿಣಾಮ ಏನಾಗುವದೋ ನೋಡಬೇಕಾಗಿದೆ." ಎಂದ.

ರಾಜಾಸಾಹೇಬನ ಮಾತುಗಳನ್ನು ಕೇಳಿ ಮಾಣಿಕಲಾಲನಿಗೆ ಅಳ ಬೇಕೋ ನಗಬೇಕೋ ತಿಳಿಯದಂತಾಯಿತು. ಅವನ ಎರಡೂ ಕೈಗಳು ತಲೆ ಯನ್ನಾವರಿಸಿಕೊಂಡವು. ಅನಂತರ ಆತ ಅವುಗಳನ್ನು ಮೇಲಕ್ಕೆತ್ತಿದ. ಪಕ್ಕ ದಲ್ಲಿದ್ದ ಕಾಗದಗಳದೊಂದು ಗಂಟನ್ನು ಆ ಕಂಪನಿಯ ಸ್ಥಾಪಕರ ಫೋಟೋ ದತ್ತ ಬಿಸುಟೆ, ಅದರಿಂದ ಫೋಟೋವಿಗಾದ ನಷ್ಟವನ್ನು ನೋಡಲು ಎದ್ದ. ಒಂದು ಕತ್ತರಿಯಿಂದ, ಫೋಟೋ ಕಟ್ಟಿ ಗೋಡೆಗೆ ತೂಗ ಹಾಕಿದ್ದ ದಾರ ಕತ್ತ ರಿಸಿದ. ಮೇಜಿನ ಮೇಲಿನ 'ಬೆಲ್' ಬಾರಿಸಿದೊಡನೆ ಆಫೀಸ ಬಾಯ್ ಪ್ರವೇಶಿಸಿದ. ಅಕಾಲಿಕವಾಗಿ ಮುಪ್ಪು ಬಂದವರಂತೆ ಕಾಣುತ್ತಿದ್ದನಾತ. ಅವನು ಆಫೀಸ ಬಾಯ್ ಆಗಿರಲೂ ಇಲ್ಲ. ಮುಂದೆ ಇದೇ ಕಂಪನಿಯ ವ್ಯವಹಾರ ದಲ್ಲಿ ಪಾಲುಗಾರನಾಗಲು ತರಬೇತಿ ಹೊಂದುತ್ತಲಿದ್ದ ವಕೀಲನಾತ.

"ಮಿಸ್ಟರ್ ಶಂಭೂರಾವ್ " ಎಂದ ಮಾಣಿಕಲಾಲ.

"ಎಸ್ ಸರ್...."

"ಈ ಕಂಪನಿಯ ಸಂಸ್ಥಾಪಕರ ಮೂರ್ತಿಶಿ ನೋಡು."

"ಎಸ್ ಸರ್...."

"ಅದು ಕೆಳಗೆ ಬಂದುದು ಹೇಗೆಂದು ಅಚ್ಚರಿಪಡುತ್ತಿರುವಿಯೇನು ?"

"ಎಸ್ ಸರ್...."

"ನಾನು ಹೇಳುತ್ತೇನೆ ಅದರ ಕಾರಣವನ್ನು ! ನಾವಿಬ್ಬರೂ ಕಾನೂ ನಿನ ಅಭ್ಯಾಸದಲ್ಲಿ ಮಗ್ನರಾಗಿದ್ದಾಗ ಆ ಫೋಟೋ ಕೆಳಕ್ಕೆ ಬಿತ್ತು. ನಮಗೆ ಅದನ್ನು ಕಂಡು ಅಚ್ಚರಿಯೂ ಭಯವೂ ಆಯಿತು. ತಿಳಿಯಿತೇ ಅದರ ಕಾರಣ? ಈಗ ನಾನು ನಿನಗೆ ಎರಡು ರೂಪಾಯಿ ಕೊಡುವೆ. ಮೇಲಿನ ವಿವರವನ್ನು ಹೇಳಲು ಅದರಿಂದ ನಿನ್ನಲ್ಲಿ ಧೈರ್ಯ ಬರುವದು. ಎಂಥ ಭಯಂಕರ ಘಟನೆ! ಈಗ ನಾನು ಹೇಳಿದ್ದು ನೆನಪಿನಲ್ಲುಳಿಯುವದೇ ? ತಂದೆಯವರು ತಿರುಗಿ ಬಂದೊಡನೆ ಅವರಿಗೆ ಹೀಗೆಯೇ ಹೇಳಬೇಕು. ಅವರು ಬರುವದರೊಳಗಾಗಿ ನಾನು ಊಟಕ್ಕೆ ಹೋಗಿರುವೆ. ಅದಕ್ಕೆಂದೇ ಅವರ ಮುಂದೆ ನೀನು ಹೇಳ

ಬೇಕಾದುದನ್ನು ತಿಳಿಸಿಪ್ಪೇನೆ."

"ಎಸ್ ಸರ್" ಎನ್ನುತ್ತ ಶಂಭೂರಾವ ಹೊರಟುಹೋದ.

"ರಾಜಾಸಾಹೇಬ್, ಶಂಭೂರಾವ್ ಒಳ್ಳೆಯ ಮನುಷ್ಯ. ಎಲ್‌ಎಲ್. ಬಿ. ಪಾಸಾಗಿ ಇಲ್ಲಿಗೆ ಬಂದು ವರ್ಷವಾಗುತ್ತಾ ಬಂತು. 'ಎಸ್ ಸರ್' ಬಿಟ್ಟು ಬೇರೇನೂ ಕಲಿತುಕೊಂಡಿಲ್ಲ. ವಕೀಲಿ ವ್ಯವಸಾಯದಲ್ಲಿ ಹೆಸರು ಗಳಿಸುವ ಲಕ್ಷಣಗಳೂ ಅವನಲ್ಲಿವೆ. ಅದಿರಲಿ, ಈಗ ನಾವಿಬ್ಬರೇ ಇರುವೆವು. ನಿಮ್ಮ ವಿಚಾರ ಮಾತಾಡುವಾ. ನಾನೇನಾದರೂ ನಿಮಗೆ ಒಳ್ಳೆಯದಾದುದನ್ನು ಹೇಳಿದರೆ ನೀವು ಮೂರ್ಖರಂತೆ ಮಾತಾಡುವಿರಿ. ಕವಡೆಯ ಬಲೆಯ ಆ ನಿಮ್ಮ ಕ್ಲಬ್ಬಿನ ಕೆಲಸ ಹೋದರೂ ಅಷ್ಟೆ, ಇದ್ದರೂ ಅಷ್ಟೆ. ನಿಮಗೆ ಶುದ್ಧ ಕನ್ನಡ ಭಾಷೆ ತಿಳಿಯುವದಿಲ್ಲವೇನು? ನೀವು ಮನಸ್ಸು ಮಾಡಿದರೆ ಆ ಕ್ಲಬ್ಬನ್ನೇ ಕೊಂಡು ಒಂದು ಸಿನೀಮಾ ಥಿಯೆಟರ್ ಮಾಡಬಹುದು. ನೀವೀಗ ಲಕ್ಷಾಧೀಶ್ವರರು ರಾಜಾಸಾಹೇಬ್........"

ರಾಜಾಸಾಹೇಬನ ಮುಖದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಹೊರಗೆ ನೋಡಲು ಹಾಗೆ ಕಂಡುಬರುತ್ತಿದ್ದರೂ ಒಳಗೊಳಗೆ ಅವನ ಮನಸ್ಸಿನಲ್ಲಿ ಕೋಲಾಹಲವೇ ಎದ್ದಂತಾಗಿತ್ತು. ಮಾತು ಹೊರಡದಾಗಿದ್ದುವು. ಆತ ಮಾಣಿಕಲಾಲನನ್ನು ಮೂಕನಂತ ನೋಡುತ್ತಿದ್ದ. ಮಾಣಿಕಲಾಲನೇ ಮಾತು ಪ್ರಾರಂಭಿಸಿದ.

"ಸುಂದರರಾವ್ ಸರಕಾರರು ನಿಮ್ಮ ಹೆಸರಿಗೆ ತಮ್ಮ ಆಸ್ತಿ ಬಿಟ್ಟು ಹೋದ ವಿಲ್ ಆ ಪೆಟ್ಟಿಗೆಯಲ್ಲಿದೆ. ಅದನ್ನು ನಿಮಗೀಗ ತೋರಿಸಲಾರೆ. ಯಾಕೆಂದರೆ ಈಗ ನನ್ನ ಹತ್ತಿರ ಪೆಟ್ಟಿಗೆಯ ಬೀಗದ ಕೈ ಇಲ್ಲ. ಎರಡನೆಯದಾಗಿ ನಮ್ಮ ತಂದೆಯವರಿಗೆ ಅದು ಗೊತ್ತಾದರೆ ಅವರು ಸಿಟ್ಟಿಗೇಳಬಹುದು. ಕೊನೆಯದಾಗಿ ಅದು ನಿಮಗೆ ಅರ್ಥವೂ ಆಗಲಾರದು. ಏಕೆಂದರೆ ಅದರಲ್ಲಿ ಬರೀ ಕಾನೂನಿನ ಶಬ್ದಗಳೇ ತುಂಬಿವೆ. ಅದನ್ನು ಅರ್ಥ ಮಾಡಿಕೊಳ್ಳಬೇಕಾದರೆ ನನ್ನಂತೆ ಕಾಯದೆಯ ಜ್ಞಾನವಿರುವ ತಿಳಿಯುವರೇ ಬೇಕು. ಸರಕಾರರವರ ವಿಲ್‌ನಲ್ಲಿರುವ ತಾತ್ಪರ್ಯವಿಷ್ಟೆ: ನೀವು ನಿಸ್ವಾರ್ಥ ಬುದ್ಧಿಯಿಂದ ಉಪಕಾರ ಅರ್ಥಾತ್ ಸಹಾಯ ಸಲ್ಲಿಸಿದ್ದಕ್ಕಾಗಿ ಅವರ ಹಣವನ್ನೆಲ್ಲ ನಿಮಗೆ ಕೊಡಮಾಡಿದ್ದಾರೆ. ನನಗೆ ಹೆಚ್ಚಿನ ಉಸಾಬರಿ ಬೇಕಿಲ್ಲ. ಆದರೆ ನೀವು ಅವರಿಗೆ ಸಲ್ಲಿಸಿದ

ನಿಃಸ್ವಾರ್ಥ ಸಹಾಯವಾವುದು, ಹೇಳಿದರೆ ಸಾಕು. ಏಕೆಂದರೆ ವಯಸ್ಸಾದ ಹಿರಿಯರಿಗೆಲ್ಲ ನಾನೂ ಅದೇ ರೀತಿಯ ಸಹಾಯ ಸಲ್ಲಿಸುತ್ತ ಹೋಗುವ ನಿಶ್ಚಯ ಮಾಡಿದ್ದೇನೆ. ನನಗೂ ಓರ್ವ ಸರಕಾರ್ ಸಿಕ್ಕುವ ತನಕ ನಾನು ಬಿಡುವಂತೆಯೇ ಇಲ್ಲ."

ರಾಜಾಸಾಹೇಬನಿಗೆ ಮಾತಾಡುವ ಧೈರ್ಯ ಬಂದಿತು.

"ನೀವು ಹೇಳುತ್ತಿರುವದೆಲ್ಲ ನಿಜವೇ, ಮಾಣಿಕಲಾಲ ?"

"ದೇವರಾಣೆಗೂ ನಿಜ."

"ಚೇಷ್ಟೆಯಲ್ಲ ತಾನೆ ?"

"ಛೆ, ಚೇಷ್ಟೆಯ ಮಾತೆಲ್ಲಿಯದು. ನನ್ನನ್ನು ಏನೆಂದು ತಿಳಿದಿರುವಿರಿ, ಹಾಗಾದರೆ ? ನಾನು ವ್ಯವಹಾರ ಬಲ್ಲ ವಕೀಲ. ದಲಾಲ—ದಲಾಲ—ದಲಾಲ—ದಲಾಲ—ಆ್ಯಂಡ್ ಕಂಪನಿಯ ಪಾಲುಗಾರರು ಚೇಷ್ಟೆಯ ಮಾತನ್ನೇ ಆಡಲಾರರು."

"ಹಾ ದೇವಾ, ದಯಾಘನಾ........"

"ಆ ಮುದಿಗೂಬೆಯ ವಿಲ್ ನೋಡಿದರೆ ಅವನು ಕಳೆದ ವರ್ಷ ಈ ನಗರಕ್ಕೆ ಬಂದಿದ್ದಾಗ ನೀವು ಅವನಿಗೆ ಉಪಕಾರ ಮಾಡಿದಂತೆ ಕಾಣುತ್ತದೆ. ನಿಜವಾಗಿಯೂ ಬುದ್ಧಿವಂತರು ನೀವು. ಅವರು ಬರೆದಿಟ್ಟ ವಿಲ್ ಮತ್ತೊಮ್ಮೆ ಬದಲಿಸಲು ಕೂಡ ಅವನಿಗೆ ಅವಕಾಶ ಕೊಡಲಿಲ್ಲ. ಹಾಗಾಗುವ ಮುಂಚೆಯೇ ಆತ ಸತ್ತುಹೋದ. ನನ್ನ ನೆನಪಿನಲ್ಲಿದ್ದಂತೆ ಕಳೆದ ಎರಡು ವರ್ಷಗಳಲ್ಲಿ ಅವನು ಮೂರು ಸಾರೆ ವಿಲ್ ಬದಲಿಸಿದ್ದಾನೆ. ನಾನು ಕಣ್ಣಾರೆ ಕಂಡಿದ್ದೇನೆ, ವಿಲ್ ಬದಲಾಯಿಸುವದರಲ್ಲಿ ಅವನದು ಎತ್ತಿದ ಕೈ. ತಾರುಣ್ಯದಲ್ಲೇ ಆ ಚಟ ಅವನಿಗೆ ಗಂಟು ಬಿದ್ದಿರಬೇಕು. ಪಾಪ! ಅದನ್ನು ಹೊಡೆದೋಡಿಸಲು ಅವನಿಂದ ಕೊನೆಯವರೆಗೂ ಸಾಧ್ಯವಾಗಿರಲಿಲ್ಲ. ಅವನ ಬಗ್ಗೆ ನಿಮಗೇನಾದರೂ ಹೆಚ್ಚಿನ ವಿವರ ಗೊತ್ತಿವೆಯೇ ?"

"ಇಲ್ಲ."

"ಅವನು ಏನು ಬೇಕಾದರೂ ಮಾಡಬಹುದು. ವಿಲ್ ಬರೆದಿಡುವಾಗ ತನ್ನ ಬುದ್ಧಿ ಸರಿಯಾಗಿದೆಯೆಂದು ಹೇಳುತ್ತಿದ್ದ. ಅದನ್ನು ಬದಲಿಸುವಾಗ ಆ ವಿಲ್ ಬರೆದಿದ್ದಾಗ ತನ್ನ ಬುದ್ಧಿ ಸರಿಯಾಗಿರಲಿಲ್ಲವೆಂದು ಅನ್ನುತ್ತಿದ್ದ. ಇಂಥವ

ನಿಂದ ಏನು ತಾನೇ ಅಸಾಧ್ಯ ? ನೀವು ಅವನಿಗೆ ಮಾಡಿದ ಉಪಕಾರ ವಾವುದು ? ನೀರಿನಲ್ಲಿ ಮುಳುಗುತ್ತಿದ್ದಾಗ ಪಾರು ಮಾಡಿದಿರಾ ?"

"ಇಲ್ಲ. ಕ್ರಿಕೆಟ್ ಆಟದಲ್ಲಿ ಸಿಕ್ಸರ್ ಹೇಗೆ ಹೊಡೆಯಬೇಕೆಂಬುದನ್ನು ತಿಳಿಸಿ ಹೇಳಿದ್ದೆ."

"ಸರಿ, ಸರಿ, ಅವನಿಗೆ ಕ್ರಿಕೆಟ್ ಆಟದ ಹುಚ್ಚು ಇದ್ದುದು ನಿಜ. ನಮ್ಮ ತಂದೆಯವರ ಸಂಗದ ಆಡಿದ್ದನಂತೆ. ಕ್ರಿಕೆಟ್ ಆಟದ ಮೇಲಿನ ಪ್ರೇಮವೇ ಅವನನ್ನು ಇಷ್ಟು ದಿವಸ ಸಾಯಗೊಟ್ಟಿರಲಿಲ್ಲ. ಸಿಕ್ಸರ್ ಹೊಡೆಯುವದನ್ನು ಕಲಿತುಕೊಂಡೇ ಸಾಯುವದಾಗಿಯೂ ಆತ ನಿರ್ಧರಿಸಿರಬೇಕು. ಅವರ ಲಾಭ ನಿಮಗಾಯಿತು, ಅವನ ಹಣವೆಲ್ಲ ಸಿಕ್ಕಿತು. ಇಷ್ಟೊಂದು ಹಣ ಸಿಕ್ಕಿದ ನೀವು ಇನ್ನು ಮೇಲೆ ಕ್ಲಬ್ಬಿನಲ್ಲಿ ಸಂಬಳಕ್ಕಾಗಿ ಕಲಿಸುವವರೋ ಅಥವಾ ಆನರರಿ ಶಿಕ್ಷಕರಾಗುವವರೋ ?"

"ಇದೆಲ್ಲವೂ ವಿಚಿತ್ರವಾಗಿ ಕಾಣುತ್ತಿದೆ ಮಾಣಿಕಲಾಲ. ನಾನು ಅವನಿಗೆ ಒಂದೆರಡು ಸೂಚನೆ ಮಾತ್ರ ಕೊಟ್ಟೆ. ಅಲ್ಲಿ ಆಗ ಬೇರಾರೂ ಇರಲಿಲ್ಲವೆಂದೇ ಅವನೊಡನೆ ನನ್ನ ಸಂಪರ್ಕ ಬಂದಿತು. ಅವನು ಕೈಯಲ್ಲಿ ಬ್ಯಾಟ ಹಿಡಿದು ಬಯಲಿನಾಚೆ ದೃಷ್ಟಿ ತೂರಿ ಗಾಳಿಯಲ್ಲಿ ಬ್ಯಾಟನ್ನು ಬೀಸುತ್ತಿದ್ದ. ಆಗ ನಾನು ಅವನಿಗೆ ಅನುಕೂಲವಾಗುವಂತೆ ಚೆಂಡನ್ನೆಸದೆ. ಅವನು ಹೊಡೆದ. ಚೆಂಡು ನಮ್ಮ ಪವಿಲಿಯನ್‌ದ ಆಚೆಗೆ ಹಾರಿ ಹೋಯಿತು. ಅವನು ಸಿಕ್ಸರ್ ಸಾಧಿಸಿದ. ತನ್ನ ಜೀವಮಾನದಲ್ಲೇ ಅವನು ಅಂಥ ಹೊಡೆತ ಹೊಡೆದಿರಲಿಲ್ಲವಂತೆ. ತಾರುಣ್ಯದಲ್ಲಿ ಸಾಧಿಸಲಾರದ್ದನ್ನು ಇಳಿವಯಸ್ಸಿನಲ್ಲಿ ಸಾಧಿಸಿದೆನಲ್ಲಾ ಎಂದು ಅವನಿಗೆ ಆನಂದವೂ ಆಯಿತು. ಅಷ್ಟಕ್ಕೇನೇ ತನ್ನ ಆಸ್ತಿಯನ್ನೆಲ್ಲ ನನ್ನ ಹೆಸರಿಗೆ ಬಿಟ್ಟುಕೊಡುವದೆಂದರೆ ವಿಚಿತ್ರವೇ ಅಲ್ಲವೇ ?"

"ನೀವು ಯಾವುದನ್ನೂ ಸರಿಯಾಗಿ ಹೇಳುತ್ತಿಲ್ಲ. ಅದರಲ್ಲಿರುವ ಮಹತ್ವದ ಗುಟ್ಟನ್ನೇ ಬಚ್ಚಿಡುತ್ತಿರುವಿರಿ. ಅವನಿಗೆ ಸಿಕ್ಸರ್ ಹೊಡೆಯುವ ಗುಟ್ಟನ್ನು ಹೇಳಿಕೊಟ್ಟುದೇನೂ ಮಹತ್ವದ್ದಲ್ಲ. ಅದರಿಂದ ಅವನ ಆಟದ ಜ್ಞಾನವೇನೋ ಬೆಳೆಯುತ್ತಿತ್ತು. ಆದರೆ ಅವನು ತಿಳಿದುಕೊಂಡುದೇ ಬೇರೆ: ನಿಮ್ಮ ಅಮೌಲ್ಯ ವೇಳೆಯನ್ನು ನೀವು ಅವನಿಗಾಗಿ ಹಾಳು ಮಾಡಿಕೊಳ್ಳಲಿಲ್ಲವೇ ? ಅದೇ ಮಹತ್ವದ್ದು."

"ಛೆ, ಛೆ, ಹಾಗೇನೂ ಇರಲಿಕ್ಕಿಲ್ಲ."

"ಹಾಗೇನೂ ಇಲ್ಲ ಅನ್ನುವದರಿಂದ ಯಾವ ಲಾಭವೂ ಇಲ್ಲ. ನಿಮ್ಮ ಸ್ವಭಾವವೇ ಒಳ್ಳೆಯದು. ಇಂದಿಲ್ಲ ನಾಳೆಯಾದರೂ ನಿಮಗೆ ಅದರ ಲಾಭ ವಾಗುವದೆಂದೇ ನನಗೆನ್ನಿಸಿತ್ತು. ತನ್ನ ಆಸ್ತಿಗೆ ನಿಮ್ಮನ್ನು ಉತ್ತರಾಧಿಕಾರಿಯ ನ್ನಾಗಿ ಮಾಡುವದೊಂದೇ ಸರಕಾರರಿಗೆ ಯೋಗ್ಯವಾಗಿ ಕಂಡಿರಬೇಕು. ಅವನೇ ನಾನಾಗಿದ್ದರೆ ನಾನೂ ಅದನ್ನೇ ಮಾಡುತ್ತಿದ್ದೆ."

"ನಾನು ಅಷ್ಟು ಮಹತ್ವದ ಸಹಾಯ ಸಲ್ಲಿಸಿದೆನೆಂದು ಆಗ ಅವನೇನೂ ಹೇಳಲಿಲ್ಲ."

"ಇರಲಿಕ್ಕಿಲ್ಲ. ಅದೊಂದು ವಿಚಿತ್ರ ಸ್ವಭಾವದ ಪ್ರಾಣಿ. ಈಗೆರಡು ತಿಂಗಳ ಹಿಂದೆ ನಮ್ಮ ಆಫೀಸಿನಲ್ಲೇ ಯಾವ ಕಾರಣವೂ ಇಲ್ಲದೆ ಗದ್ದಲವನ್ನೇ ಎಬ್ಬಿಸಿದ್ದ. ಯಾವುದೋ ಚಿಲ್ಲರೆ ವಿಷಯದಲ್ಲಿ ನಮ್ಮ ತಂದೆಯವರೊಡನೆ ಭಿನ್ನಾಭಿಪ್ರಾಯವಾದುದೇ ಅದಕ್ಕೆ ಕಾರಣ. ಅಂದಿನಿಂದ ಅವನು ಈ ಕಚೇರಿಗೆ ಬಂದಿಲ್ಲ."

"ಅವನಿಗೆ ಬುದ್ಧಿಭ್ರಮೆ ಆಗಿರಲಿಲ್ಲ ತಾನೆ?"

"ಕಾನೂನಿನ ಮಟ್ಟಿಗೆ ಆಗಿರಲಿಲ್ಲ. ಆದರೂ ಅವನ ಸ್ವಭಾವದ ಪರಿಚಯವಿದ್ದ ನಾವು ಅವನ ಬುದ್ಧಿಯ ವಿಷಯದಲ್ಲಿ ಮೂವರು ತಜ್ಞ ಡಾಕ್ಟರರ ಅಭಿಪ್ರಾಯ ಪಡೆದುಕೊಂಡಿದ್ದೇವೆ. ಅವನ ಕುತ್ತಿಗೆಯ ಮೇಲ್ಭಾಗದ ಮಾಂಸದ ಪ್ರತಿ ತುಂಡು ಮತ್ತು ರಕ್ತನಾಳಗಳಲ್ಲಿ ಯಾವ ದೋಷವೂ ಇಲ್ಲ ವೆಂದು ಅವರು ಬರೆದುಕೊಟ್ಟಿದ್ದಾರೆ. ಅವನ ಬಗ್ಗೆ ವ್ಯವಹಾರಿಕವಾಗಿ ಹೇಳುವ ದಾದರೆ ಅವನೊಬ್ಬ 'ಲಹರೀ' ಮನುಷ್ಯ ಅನ್ನಬಹುದು. ಹುಚ್ಚ ಮತ್ತು ಬುದ್ಧಿವಂತರ ನಡುವಿನ ಸ್ಥಿತಿ ಅವನದಿರಬೇಕು. ಅವನ ಸಂಬಂಧಿಕರೆನ್ನಿಸಿ ಕೊಳ್ಳುವವರು ಈ ಜಗತ್ತಿನಲ್ಲಿ ಇಬ್ಬರು ಮಾತ್ರ ಜೀವಿಸಿದ್ದಾರೆ. ಒಬ್ಬ ಸೋದರಳಿಯ, ಇನ್ನೊಬ್ಬಳು ಸೋದರ ಸೊಸೆ. ಈಗೆರಡು ವರುಷಗಳ ಹಿಂದೆ ಸರಕಾರನ ಹೆಂಡತಿ ಬೇರೊಬ್ಬನನ್ನು ಕಟ್ಟಿಕೊಂಡು ಹೋದಳು. ಅವನಿಗೆ ಸೋಡಚೀಟಿಯನ್ನೂ ಕೊಟ್ಟು ಮತ್ತೊಬ್ಬನೊಡನೆ ಲಗ್ನವನ್ನೂ ಆದಳೆಂದು ಕೇಳಿದ್ದೇನೆ. ಅವಳು ಹೋಗುವಾಗ ತನ್ನಲ್ಲಿದ್ದ ಕೆಲ ಹಣವನ್ನು ಅಳಿಯನಿಗೆ ಕೊಟ್ಟಳೆಂಬ ಸುದ್ದಿ ಸರಕಾರನಿಗೆ ತಿಳಿದ ನಂತರ ಆ ಹುಡುಗನ ಸಂಬಂಧ ಹರಿ

ದಂತಾಯಿತು. ಅದಕ್ಕೂ ಮುಂಚೆ ಬರೆದ ವಿಲ್‌ನಲ್ಲಿ ಅವರಿಬ್ಬರಿಗೂ ತುಸು ಕೊಡಮಾಡಿದ್ದ. ಅದನ್ನು ರದ್ದುಪಡಿಸಿ ಬೇರೊಂದು ವಿಲ್ ತಯಾರಿಸಿ ಅಳಿಯನಿಗೆ ಎರಡು ನೂರು ರೂಪಾಯಿ ಬಿಟ್ಟು ಇನ್ನುಳಿದದ್ದೆಲ್ಲಾ ಸೊಸೆಗೆ ಕೊಡಮಾಡಿದ್ದ. ಆದಾದ ಆರು ತಿಂಗಳ ನಂತರ ಅದನ್ನೂ ರದ್ದುಪಡಿಸಿ ಇಬ್ಬರಿಗೂ ಸರಿಯಾಗಿ ಸಿಗುವಂತೆ ಬರೆದಿರಿಸಿದ್ದ. ಅನಂತರ ಮತ್ತೆ ಆರು ತಿಂಗಳಾದ ಮೇಲೆ ಮೂರನೆಯ ವಿಲ್‌ನಲ್ಲಿ ಅಳಿಯನಿಗೆ ಎರಡು ನೂರು ರೂಪಾಯಿಬಿಟ್ಟು ದರೆ ಸೊಸೆಗೆ ಏನೂ ಇಲ್ಲವೆಂದು ಬರೆದಿಟ್ಟಿದ್ದ. ಅವನು ಹಾಗೆ ಮಾಡಿದ್ದುದರ ಕಾರಣ ನನಗೆ ಗೊತ್ತಿಲ್ಲ. ಆ ಸೊಸೆ ಅವನ ಮನ ನೋಯುವ ಯಾವ ಕೆಲಸ ಮಾಡಿದ್ದಳೋ ಯಾರಿಗೆ ಗೊತ್ತು? ಅವನ ವಿಲ್ಲುಗಳೇ ವಿಚಿತ್ರ. ನಿಮಗೆ ಹಣ ಬಿಟ್ಟು ಹೋದುದೂ ಲಹರೀ ಗಳಿಗೆಯಲ್ಲೇ ಇರಬೇಕು. ಅಥವಾ ಬೇರಾವುದಾದರೂ ರಾಜಕೀಯ ಕಾರಣಕ್ಕಾಗಲಿ, ಅಥವಾ ಕ್ರಿಕೆಟ್ ಆಟದ ಪ್ರಚಾರಕ್ಕಾಗಲಿ—ವಿನಿಯೋಗಿಸಲು ನಿಮಗೆ ಅಧಿಕಾರ ಕೊಟ್ಟಿರಬೇಕೇನೋ! ಇಂದು ಮುಂಜಾನೆ ಅವನ ಮರಣದ ವಾರ್ತೆ ಕೇಳಿದ ನಂತರ ಅವನ ಹಣ ನಿಮಗೆ ಸೇರಿತೆಂದು ಖಾತ್ರಿಯಾಯಿತು. ಆದಕ್ಕಾಗಿ ಕಾಂಗ್ರಾಚುಲೇಶನ್ಸ್.... !"

ಮಾಣಿಕಲಾಲನ ಮಾತುಗಳನ್ನು ಶಾಂತ ರೀತಿಯಿಂದ ಕೇಳುತ್ತ ಕುಳಿತಿದ್ದ ರಾಜಾಸಾಹೇಬ ಎದ್ದು ಕೋಣೆಯಲ್ಲಿ ಶತಪಥ ಹಾಕಲು ಪ್ರಾರಂಭಿಸಿದ. ಅವನ ಹೃದಯ ವೇಗವಾಗಿ ಬಡಿದುಕೊಳ್ಳುವದನ್ನೂ ಕಾಣಬಹುದಿತ್ತು. ಹತ್ತು ಲಕ್ಷ ರೂಪಾಯಿ ದೊರೆತವನಲ್ಲಿರಬೇಕಾದ ಸಂತೋಷ ಅವನಲ್ಲಿ ಕಂಡುಬರಲಿಲ್ಲ. ಪ್ರತಿಯಾಗಿ ಆತ ಉದ್ವಿಗ್ನನಾಗಿದ್ದ, ಅಶಾಂತನಾಗಿದ್ದ.

"ಎಂಥ ಭಯಂಕರ ಘಟನೆಯಿದು ಮಾಣಿಕಲಾಲ? ನನಗಂತೂ ಭಯವೆನ್ನಿಸುತ್ತದೆ."

" ಏನು? ಹತ್ತು ಲಕ್ಷ ರೂಪಾಯಿಗಳ ಒಡೆಯನಾಗುವದು ಭಯವೇ ? "

"ಹೌದು, ನಾನೊಬ್ಬ ತುಡುಗನಾದಂತಲ್ಲವೇ ?"

"ಅದೇಕೆ ?"

"ಅಲ್ಲಾ ಆ ಹುಡಗಿಯ ವಿಚಾರವೇನು? ಅವಳಿಗೆ ಎಂಥ ದುಃಸ್ಥಿತಿ! ಅವಳ ಹೆಸರೇನು ?"

"ಪ್ರಮೀಲಾ ಸರಕಾರ...."

"ಆ ಮುದುಕನಿಗೆ ನಾನು ಭೆಟ್ಟಿಯಾಗಿರಲಿಲ್ಲವಾದರೆ ಆ ಹತ್ತು ಲಕ್ಷ ರೂಪಾಯಿಗಳೆಲ್ಲ ಅವಳಿಗೇನೇ ಸಲ್ಲುತ್ತಿರಲಿಲ್ಲವೆ ? ಇದನ್ನೆಲ್ಲ ಅವಳಿಗೆ ತಿಳಿಸಿ ರುವಿರಾ ?"

"ಇಲ್ಲ. ಅವಳೀಗ ಮುಂಬಯಿಯಲ್ಲಿದ್ದಾಳೆ. ನೀವು ಬರುವದರಮುಂಚೆ ಅವಳಿಗೊಂದು ಪತ್ರ ಬರೆಯಹತ್ತಿದ್ದೆ. ವಿಲ್‌ನ ಸಂಗತಿ ಕೇಳಿ ಅವನ ಮನ ಸ್ಸಿಗೆ ಆಘಾತವಾಗದಂತೆ ನೋಡಿಕೊಳ್ಳಲೆಂದು ಅವಳ ಅಣ್ಣನಿಗೆ ಇನ್ನೂರು ರೂಪಾಯಿ ಸಿಕ್ಕುವ ವಿಚಾರವನ್ನು ಮಾತ್ರ ಬರೆದು ತಿಳಿಸುವ ವಿಚಾರವಿತ್ತು. ತಂದೆಯವರೇ ಬರೆಯಲೆಂದು ಬಿಟ್ಟರೆ ಅವರು ವಕೀಲಿ ಭಾಷೆಯಲ್ಲೇ ಬರೆಯು ವರು. ಅದಕ್ಕೆ 'ಆ ಮುದುಕನನ್ನು ನಂಬಬೇಡಿರಿ. ಅವನಿಂದ ನಿಮಗೆ ಹೆಚ್ಚಿನ ಲಾಭವಾಗಲಾರದು ' ಎಂದು ನಾನೇ ಸೂಕ್ಷ್ಮವಾಗಿ ತಿಳಿಸುವ ವಿಚಾರದಲ್ಲಿ ದ್ದೇನೆ. "

ರಾಜಾಸಾಹೇಬನ ಮುಖವನ್ನೊಮ್ಮೆ ನೋಡಿ, ಅವನು ಮಾತಾಡುವಂತೆ ಕಂಡು ಬರಲಿಲ್ಲವಾದುದರಿಂದ ಮಾಣಿಕಲಾಲ ತಾನೇ ಮಾತು ಮುಂದುವರಿ ಸಿದ.

"ನೀವೇಕೆ ಹೀಗೆ ಸಪ್ಪೆಯಾಗಿ ಕೂತಿರುವಿರಿ ರಾಜಾಸಾಹೇಬ್ ? ಅದ ರಲ್ಲಿ ವ್ಯಸನಪಡುವ ವಿಚಾರವಾದರೂ ಯಾವುದು ? ಪ್ರಮೀಲಾ ಸರಕಾರಳ ದುರ್ದೈವಕ್ಕೆ ನೀವೇಕೆ ಅಷ್ಟು ವ್ಯಸನಪಡುವದು ? ವಿಲ್ ಬದಲಿಸುವದು ಸುಂದರರಾಯನ ರೂಢಿ. ಅದನ್ನು ಅವನು ಬದಲಿಸುವ ಕಾಲ ಬಂದಿದ್ದಿತು. ನೀವೂ ಅದೇ ವೇಳೆಗೆ ಭೆಟ್ಟಿಯಾದಿರಿ. ನಿಮ್ಮ ಹೆಸರು ದಾಖಲಾಯಿತು. ನೀವು ಭೆಟ್ಟಿಯಾಗಿರದಿದ್ದರೆ ಯಾವುದಾದರೂ ಸಂಘಕ್ಕೋ ಅಥವಾ ಇನ್ನಾರ ಹೆಸರಿಗೋ ಬರೆದು ಇರಿಸುತ್ತಿದ್ದ. ನೀವೇಕೆ ನಿಮ್ಮನ್ನೇ ದೂಷಿಸಿಕೊಳ್ಳ ಬೇಕು ? "

"ನನ್ನ ತಪ್ಪೇನೂ ಇಲ್ಲವೆನ್ನಿ. ನನ್ನನ್ನೂ ನಾನು ದೂಷಿಸಿಕೊಳ್ಳು ತ್ತಲೂ ಇಲ್ಲ. ನನ್ನ ಸ್ಥಾನವಲ್ಲಿ ನೀವಿದ್ದರೆ ಏನು ಮಾಡುತ್ತಿದ್ದಿರಿ ?"

"ಮಕ್ಕಳಾಟದ ಮಾತಿದು."

"ಆ ವಿಚಾರವಾಗಿ ನೀವೇನೂ ಯೋಚಿಸುತ್ತಿರಲಿಲ್ಲವೇ ?"

"ಛೆ, ಎಂದಿಗೂ ಇಲ್ಲ. ಆ ಹಣ ವೆಚ್ಚ ಮಾಡುವ ದಾರಿ ಹುಡುಕು ತ್ತಿದ್ದೆ. ಅದೂ ಸಾಧ್ಯವಿದ್ದಷ್ಟು ತೀವ್ರ ಖರ್ಚಾಗುವ ದಾರಿಯನ್ನು. ನಿಮ್ಮ ಉತ್ಪನ್ನವನ್ನೆಲ್ಲ ಹೂಳಿಟ್ಟ ನಿಮ್ಮ ಹಿರಿಯರು ಕೂಡ ಆ ದಾರಿಯ ಮುಂದೆ ಕೃಪಣರಾಗಿ ಕಾಣುವಂತೆ ವೆಚ್ಚಮಾಡಿ ಬಿಡುತ್ತಿದ್ದೆ."

"ಇಲ್ಲ, ನೀವು ಹಾಗೆ ಮಾಡುತ್ತಿರಲಿಲ್ಲ. ಅದೇನೇ ಇರಲಿ. ನೀವು ಮುಂಬಯಿಗೆ ಹೋಗಿ ಏನಾದರೂ ಉಪಾಯ ಕೈಕೊಳ್ಳಲಾರಿರಾ ?"

"ಏನಂದಿರಿ ?"

"ನೀವು ನಾಳೆ ಮುಂಬಯಿಗೆ ಹೋಗಿ ಆ ಹುಡುಗಿಯನ್ನು ಕಂಡು ವಿವರ ಗಳನ್ನು ತಿಳಿಸಿ ಅವಳಿಗೆ ಅನುಕೂಲವಾಗುವಂಥ ಒಂದು ಮಾರ್ಗ ಹುಡುಕ ಲಾರಿರಾ ?"

ರಾಜಾಸಾಹೇಬನನ್ನೊಮ್ಮೆ ಅಕೃತ್ರಿಮ ತಿರಸ್ಕಾರದಿಂದ ನೋಡಿದ ಮಾಣಿಕಲಾಲ. ರಾಜಾಸಾಹೇಬನು ಸರಳ ಸ್ವಭಾವದವನೆಂಬುದು ಅವನಿಗೆ ಗೊತ್ತಿತ್ತು. ಆದರೆ ಅವನು ಹೀಗೆ ಹದಿನಾರಾಣೆ ಮೂರ್ಖನಿರಬಹುದೆಂದು ಆತ ಭಾವಿಸಿರಲಿಲ್ಲ.

"ನೀವನ್ನುವದಾದರೂ ಏನು ? ಯಾವುದಾದರೂ ಮಾರ್ಗ ಕಂಡು ಹಿಡಿಯಲಾರಿರಾ ಎಂದು ಕೇಳುವುದರ ಅರ್ಥವೇನು ? ಆ ಹಣವನ್ನೆಲ್ಲ ಅವ ಳಿಗೇ ಬಿಡುವ ವಿಚಾರವಿದೆಯೇನು ಮತ್ತೆ ?"

"ಹಾಗೆಂದು ಖಂಡಿತವಾಗಿ ಹೇಳಲಾರೆ. ಅವಳು ಬಡತನದಲ್ಲಿರುವ ಳೇನೋ ಯಾರಿಗೆ ಗೊತ್ತು ? ಹೇಗೂ ನಾನು ನಾಳೆಯ ದಿನ ಮುಂಬಯಿಗೆ ಹೋಗುವವನಿದ್ದೇನೆ. ಅವಳ ವಿಳಾಸವೇನು ? ಅವಳಿಗೂ ಅರ್ಧ ಪಾಲು ಕೊಟ್ಟರೆ ಸರಿ ಹೋಗಬಹುದೆಂದು ನನ್ನ ಅಭಿಪ್ರಾಯ."

"ನಾನೇನೂ ಹೇಳಲಾರೆ. ಆದರೆ ಹಾಗೆ ಮಾಡುವದು ಕೇವಲ ನಿಮ್ಮ ಮೂರ್ಖತನದ ಪರಮಾವಧಿ."

"ಅವಳ ಬಗ್ಗೆ ತಿಳಿದುಕೊಳ್ಳುವದರಲ್ಲಿಯಂತೂ ಯಾವ ತಪ್ಪೂ ಇಲ್ಲ ವಷ್ಟೆ ?"

"ನಿಮ್ಮ ವಿಚಾರವಿದ್ದಂತೆ ಮಾಡಬಹುದು. "ಮಹಾದೇವ ಸದನ,

ಚೌಪಾಟಿ ರೋಡ, ಮುಂಬಯಿ" ಇದು ಅವಳ ಮೊದಲಿನ ವಿಳಾಸ. ಈಗಿನದು ನನಗೆ ತಿಳಿಯದು. ಅಲ್ಲಿ ಕೇಳಿದರೆ ಗೊತ್ತಾಗಬಹುದು."

"ಥ್ಯಾಂಕ್ಸ್."

"ರಾಜಾಸಾಹೇಬ್, ನೀವು ಹೀಗೆ ವರ್ತಿಸಿದರೆ ಮೂರ್ಖರಾಗಬಹುದು."

"ಆಗಲಾರೆ, ಮಾಣಿಕಲಾಲ. ಮೊದಲೊಮ್ಮೆ ಅವಳನ್ನು ನೋಡುವೆ."

"ನೋಡುವಿರಾ ?"

"ಹೌದು. ನೋಡುವೆ."

ಮಾಣಿಕಲಾಲ ಬಾಗಿಲವರೆಗೆ ಬಂದು ರಾಜಾಸಾಹೇಬನನ್ನು ಬೀಳ್ಕೊಟ್ಟ. ದಲಾಲ—ದಲಾಲ—ದಲಾಲ—ದಲಾಲ ಆ್ಯಂಡ್ ಕಂಪನಿಯ ಆಫೀಸಿನಲ್ಲಿ ಮತ್ತೆ ಶಾಂತತೆ ನೆಲೆಯೂರಿತು.

ಎಷ್ಟೋ ವರುಷಗಳಿಂದ ವಾಸಿಸುತ್ತಿದ್ದ ನಗರವನ್ನು ಬಿಟ್ಟು ಬೇರೊಂದು ನಗರಕ್ಕೆ ವಾಸಿಸಲು ಹೋಗುವಾಗಿನ ಗಡಿಬಿಡಿಯನ್ನು ಅನುಭವಿಸಿದವರೇ ಹೇಳಬಲ್ಲರು. ಮರುದಿನ ಬೆಳಗಿನ ಎಕ್ಸಪ್ರೆಸ್ ಗಾಡಿಯಲ್ಲಿ ಕುಳಿತ ನಂತರವೇ ತನ್ನ ಮೇಲೆ ಬಂದೊದಗಿದ ಪ್ರಸಂಗದ ವಿಷಯವಾಗಿ ಸುಶೀಲಾರಾಣಿಗೆ ಬರೆಯಲು ರಾಜಾಸಾಹೇಬನಿಗೆ ಸಮಯ ಸಿಕ್ಕಿತು. ತಾನು ಹೀಗೆ ಮುಂಬಯಿಗೆ ಹೋಗುತ್ತಿರುವುದನ್ನು ಸುಶೀಲಾರಾಣಿ ಖಂಡಿಸಬಹುದೆಂದೇ ಅವನು ಅವಳನ್ನು ಭೆಟ್ಟಿಯಾಗಿರಲಿಲ್ಲ. ತನಗಾದ ಅನಿರೀಕ್ಷಿತ ಧನಲಾಭದ ಬಗೆಗೂ ಎಚ್ಚರಿಕೆಯಿಂದಲೇ ಬರೆದ. ಸಿಕ್ಕಲಿರುವ ಹಣದ ಅಂಕಿ ಸಂಖ್ಯೆಗಳನ್ನು ಪತ್ರದಲ್ಲಿ ಕಾಣಿಸಲಿಲ್ಲ. ತಾವು ಹಿಂದೆ ಅನೇಕ ಸಲ ಮಾತಾಡಿದ ಸರಕಾರನಿಂದ ತನಗೀಗ ಲಾಭವಾಗುತ್ತಿದೆಯೆಂಬುದನ್ನು ಮಾತ್ರ ತಿಳಿಸಿದ.

ಪತ್ರದ ಮೇಲೆ ವಿಳಾಸ ಬರೆಯುವಾಗಲೂ ಆತ ಎಚ್ಚರಿಕೆ ವಹಿಸಿದ್ದ. ಬೆಳಗಾವಿಯಲ್ಲಿ ಎರಡೇ ದಿನ ಅವಳ ಕಾರ್ಯಕ್ರಮವಿತ್ತು. ಅಲ್ಲಿಂದ ಅವರು ಧಾರವಾಡಕ್ಕೆ ಹೋಗುವವರಿದ್ದರು. ಅಂತೆಯೇ ಅಲ್ಲಿನ ಥಿಯೆಟರಿನ ವಿಳಾಸ ಬರೆದು ಕವರನ್ನು ಟಪ್ಪಾಲ ಡಬ್ಬಿಯಲ್ಲಿ ಹಾಕಿದ.

ಮುಂಬಯಿ ನಗರದಿಂದ ಏಳೆಂಟು ಮೈಲು ಅಂತರದ ಮೇಲೆ ಪುಣೆಯ ಕಡೆಗೆ ಹೋಗುವ ದಾರಿಯ ಪಕ್ಕದಲ್ಲಿನ ಒಂದು ಮನೆಯಲ್ಲಿ ಪ್ರಮೀಲಾ ಸರಕಾರ ಮತ್ತು ಅವಳ ಅಣ್ಣ ಕಮಲಾಕಾಂತ ವಾಸವಾಗಿದ್ದರು. ನಗರದ ವಿಶೇಷ ಚಟುವಟಿಕೆಗಳಿಂದ ತುಂಬಿದ ಭಾಗಗಳಂತೆ ಬಾಡಿಗೆಯೂ ಹೆಚ್ಚಾಗಿರಲಿಲ್ಲ. ಮನೆ ಚಿಕ್ಕದಾದರೂ ಸುತ್ತಲು ವಿಶಾಲವಾದ ಬೈಲು ಜಾಗವಿತ್ತು. ಅದರಲ್ಲಿ ಗಿಡಗಂಟೆಗಳು ಯಥೇಚ್ಛವಾಗಿ ಬೆಳೆದಿದ್ದುವು. ಪ್ರಮೀಲಾ, ತನ್ನ ಮತ್ತು ಕಮಲಾಕಾಂತನ ಉದರ ನಿರ್ವಾಹಕ್ಕಾಗಿ ಜೇನುಹುಳುಗಳನ್ನು ಸಾಕಿ, ಜೇನುತುಪ್ಪ ಮಾರುವ ಉದ್ಯೋಗವನ್ನು ನಡೆಯಿಸಿಕೊಂಡು ಬಂದಿದ್ದಳು. ಮುಂಬಯಿಯಲ್ಲಿ ಜೇನುತುಪ್ಪ ಕೊಳ್ಳುವವರಿಗೇನೂ ಕೊರತೆಯಿರಲಿಲ್ಲವಾದರೂ ಅವರ ಬಡತನ ಹಿಂಗಿರಲಿಲ್ಲ.

ತನ್ನ ಆಸ್ತಿಯಿಂದ ದೊರೆತ ಹಣ ತೀರುವವರೆಗೂ ಕಮಲಾಕಾಂತ ಪ್ರಮೀಲಾಳ ಹತ್ತಿರ ಬಂದಿರಲಿಲ್ಲ. ಅದು ತೀರಿಯಾದ ಮೇಲೆ ತಂಗಿಯ ಮೇಲಣ ಪ್ರೀತಿ ಒತ್ತರಿಸಿ ಬಂದು ಅವಳನ್ನು ಬಿಟ್ಟಿರಲಾರದೆ ಅವಳ ಮನೆಯಲ್ಲಿ ಕಾಲಿಕ್ಕಿದ್ದ. ಜೇನಿನ ಉದ್ಯೋಗದಿಂದ ಮುಂಬಯಿಯಲ್ಲಿ ಸಾಕಷ್ಟು ಹಣ ಗಳಿಸಬಹುದೆಂದು ಅನೇಕರು ಹೇಳಿದ್ದುದನ್ನು ಕೇಳಿ ಪ್ರಮೀಲಾ ಆ ಉದ್ಯೋಗದಲ್ಲಿ ತೊಡಗಿದ್ದಳು. ಇಂದಿನ ಸ್ವಾನುಭವದಿಂದ ಆ ಪಂಡಿತರ ಉಪದೇಶವನ್ನು ಖಂಡಿಸಲೂ ಸಮರ್ಥಳಾಗಿದ್ದಳು. ಆ ಉದ್ಯೋಗದ ಕುರಿತು ಹೇಳುವ ಸಾಹಿತ್ಯ ಸಂಗ್ರಹವೂ ಅವಳಲ್ಲಿತ್ತು. ಜೇನುಹುಳು ಸಾಕುವವರಲ್ಲಿ ಅದ್ಭುತವಾದ ಸಹನಶೀಲತೆ ಬೇಕೆಂದು ಅವಳು ಓದಿದ್ದಳು. ಅವಳಲ್ಲಿ ಬೇಕಾದಷ್ಟು ಸಹನಶೀಲತೆಯಿತ್ತು. ಆದರೆ ವ್ಯಾವಹಾರಿಕ ದೃಷ್ಟಿಯಲ್ಲಿ ಅದು ಪ್ರಯೋಜನಕಾರಿಯಾಗಿರಲಿಲ್ಲ.

ಇಂಥ ಸ್ಥಿತಿಯಲ್ಲಿ ಅವಳಿರುವಾಗ ಕಮಲಾಕಾಂತ ಬೇರೆ ಬಂದು ಮನೆ ಸೇರಿದ್ದ. ಹತ್ತಿರ ಹಣವಿದ್ದಾಗ ಕೇವಲ ದ್ರಾವಕ ಆಹಾರವನ್ನೇ ತೆಗೆದುಕೊಳ್ಳುವ ರೂಢಿಯನ್ನಾತ ತಂದುಕೊಂಡಿದ್ದ. ಅವನ ದೈಹಿಕ ಸ್ಥಿತಿಯೂ ಚೆನ್ನಾಗಿರಲಿಲ್ಲ. ಅಂತೆಯೇ ಅವಳ ಮನೆ ರೋಗಿಯ ಶುಶ್ರೂಷಾಗೃಹವೂ

ಆಗಬೇಕಾಗಿತ್ತು. ಮುಂಬಯಿಯಲ್ಲಿ ಸಿಗುತ್ತಿದ್ದ ಎಲ್ಲ ಮದ್ಯವನ್ನೂ ಅವನೇ ಜೀರ್ಣಿಸಿಕೊಂಡಿರಬೇಕು.

ನಿಸರ್ಗದ ರೀತಿಯೇ ಬಲು ವಿಚಿತ್ರವಾಗಿರುತ್ತದೆ. ಅಯೋಗ್ಯ ಅಣ್ಣ ತಮ್ಮಂದಿರಿಗೆ ಮಮತೆಯ ಅಕ್ಕ ತಂಗಿಯರೇ ಇರುತ್ತಾರೆ! ಬೆಳಗಾಗಿ ಏಳುವದು, ತಡಮಾಡಿ ಕೆಲಸಕ್ಕೆ ಹೋಗುವದು, ಅಲ್ಲಿಯೂ ಮಾಲಿಕರ ಕಣ್ಣು ತಪ್ಪಿಸಿ ಬೇಸರಿಕೆಯಿಂದ ಅರ್ಧಮರ್ಧ ಕೆಲಸ ಮಾಡಿ ಅರ್ಧ ಸಂಬಳ ದೊರಕಿಸುವದು. ಅನಂತರ ಅಲ್ಲಲ್ಲಿ ಸಾಲ ಮಾಡಿ ಅತ್ತಿತ್ತ ತಿರುಗುವದೇ ಆ ಬಂಧು ವರ್ಗದ ಕಾಯಕವಾಗಿರುತ್ತದೆ. ಕಮಲಾಕಾಂತನೂ ಇದೇ ವರ್ಗಕ್ಕೆ ಸೇರಿದವನಾಗಿದ್ದ.

ತನ್ನ ಅಣ್ಣನ ದೇಹಸ್ಥಿತಿ ಸುಧಾರಿಸಬೇಕು, ಅವನು ಒಳ್ಳೆಯವನಾಗಿ ಬಾಳುವುದನ್ನು ತಾನು ಕಾಣಬೇಕೆಂಬುದೇ ಪ್ರಮೀಲಾಳ ಧ್ಯೇಯವಾಗಿತ್ತು. ತಮ್ಮ ಮನೆಯ ಸುತ್ತಲಿನ ಬಯಲು ಹವೆಯಿಂದ ಅವನು ಸುಧಾರಿಸಿಕೊಳ್ಳಬಹುದು. ಅವನ ಮನಸ್ಸಿನ ಮೇಲೆ ದುಷ್ಪರಿಣಾಮ ಮಾಡುವ ಸಂದರ್ಭಗಳು ಬರಕೂಡದು ಎಂದೇ ಅವಳು ನಿರ್ಧರಿಸಿದ್ದಳು. ಆಳು ಇಡಲು ಅವಳಲ್ಲಿ ಹಣವಿರಲಿಲ್ಲವಾದುದರಿಂದ ಮನೆಗೆಲಸವನ್ನೆಲ್ಲ ತಾನೇ ನೋಡಿಕೊಳ್ಳುತ್ತಿದ್ದಳು. ಕಮಲಾಕಾಂತನೂ ಇತರ ಕೆಲಸಗಳಲ್ಲಿ ಸಾಧ್ಯವಾದಷ್ಟು ನೆರವಾಗುವಂತೆ ಕೆಲಸಕ್ಕೆ ಹಚ್ಚುವಳು.

ಸುಶೀಲಾರಾಣಿಯೂ ರಾಜಾಸಾಹೇಬನೂ ಬೇರೆ ಬೇರೆ ದಿನಗಳಲ್ಲಿ ಮುಂಬಯಿ ಸೇರಿ ಈಗಾಗಲೇ ಕೆಲ ದಿನಗಳಾಗಿದ್ದವು.

ಒಂದು ದಿನ ಪ್ರಮೀಲಾ ತನ್ನ ಕೋಣೆಯಲ್ಲಿ ಹಾಸುಗೆಯ ಮೇಲೆ ಕುಳಿತು ತಲೆಗೂದಲನ್ನು ಸರಿಪಡಿಸಿಕೊಳ್ಳುತ್ತಿದ್ದಳು. ಆಗಾಗ ಆಕಳಿಸುತ್ತಲೂ ಇದ್ದಳು. ಕಿಟಕಿಯಾಚೆಯಿಂದ ಹಕ್ಕಿಪಕ್ಕಿಗಳ ಕಿಲಕಿಲಾಟ ಕೇಳಬರುತ್ತಿತ್ತು. ಮುಂಜಾವಿನ ಸೂರ್ಯನ ಹೊಂಗಿರಣಗಳು ಕಿಟಕಿಯ ಗಾಜುಗಳೊಳಗಿಂದ ಕೋಣೆಯನ್ನು ಪ್ರವೇಶಿಸುತ್ತಿದ್ದವು. ತಾನಿನ್ನೂ ಏಳುವ ಸಮಯವಾಗಿಲ್ಲವೆಂದೇ ಅವಳ ಕಲ್ಪನೆಯಾದಂತಿತ್ತು. ಪ್ರತಿದಿನ ಬೆಳಗಿನಲ್ಲೇ ಎದ್ದು ಚಹ ಸಿದ್ಧಗೊಳಿಸಿ ಏಳೂವರೆ ಗಂಟೆಗೆ ಸರಿಯಾಗಿ ಅಣ್ಣ ತಂಗಿಯರು ಚಹಾ ಕುಡಿಯುತ್ತಿದ್ದರು. ಅದೇ ಸಮಯ ಅವಳ ಬೆಕ್ಕಿಗೂ ಹಾಲು ಸಿಗುತ್ತಿತ್ತು. ದಿನ

ದಂತೆ ವೇಳೆಗೆ ಸರಿಯಾಗಿ ಹಾಲು ಸಿಗಸ್ಟರಿಂದ ಆ ಬೆಕ್ಕು ಬಂದು ಅವಳ ಹಾಸಿಗೆಯ ಪಕ್ಕದಲ್ಲಿ ಕುಳಿತು ಕಿರಚಿಕೊಳ್ಳಹತ್ತಿದಾಗ ಮಾತ್ರ ಅಂದು ತಾನು ತಡ ಮಾಡಿ ಎದ್ದಿರುವ ಬಗ್ಗೆ ಖಾತ್ರಿಯಾಯಿತು. ಗಡಿಯಾರ ನೋಡಿದಳು. ಬೆಕ್ಕು ಹಾಲಿನ ವೇಳೆಯನ್ನು ಮರೆತಿರಲಿಲ್ಲ!

ಹಾಸುಗೆಯಿಂದ ಕೆಳಕ್ಕೆ ಹಾರಿದಳು. ಅಟ್ಟವನ್ನಿಳಿದು ಅಡುಗೆ ಮನೆಗೆ ಧಾವಿಸಿದಳು. ಬೆಕ್ಕಿಗೆ ಹಾಲನ್ನು ಕೊಟ್ಟು, ಮುಂಜಾವಿನ ಸೊಗಸಾದ ಗಾಳಿ ಸೇವಿಸುತ್ತ ಬಾಗಿಲ ಮುಂದೆ ಬಂದು ನಿಂತಳು.

ಪ್ರಮೀಲೆಯ ವಯಸ್ಸು ಇಪ್ಪತ್ತು ಇರಬಹುದು. ಆದರೆ ಕತ್ತಿನ ಎರಡೂ ಬದಿಗೆ ಮತ್ತು ಬೆನ್ನಿನ ಮೇಲೆ ಲಾಸ್ಯವಾಡುತ್ತಿದ್ದ ಆ ಕೂದಲಿನ ಮಧ್ಯದಲ್ಲಿದ್ದ ಅವಳ ಮುಖವನ್ನು ಕಂಡವರು, 'ಅವಳಿಗಿನ್ನೂ ಹದಿನಾರು ಇರಬಹುದು' ಎನ್ನಬಹುದಿತ್ತು. ಅವಳ ಕಣ್ಣುಗಳನ್ನೂ ಗದ್ದವನ್ನೂ ನೋಟವನ್ನೂ ಕಂಡವರು ಮಾತ್ರ ತನ್ನ ಕಾಲಮೇಲೆ ತಾನು ನಿಲ್ಲುವ ಯೋಗ್ಯತೆಯಿರುವ ತರುಣಿಯವಳೆಂದು ಗುರುತಿಸಲು ಸಾಧ್ಯವಿತ್ತು. ಗಂಭೀರ ಮುಖ, ಕಪ್ಪು ಕೂದಲು, ವಿಶಾಲವೂ ತೇಜಃಪುಂಜವೂ ಆದ ಕಣ್ಣುಗಳು. ಕಪ್ಪುಬಣ್ಣಕ್ಕೆ ಪೂರ್ಣ ವಿರುದ್ಧವಾದ ದೇಹವರ್ಣ. ಕಣ್ಣುಗಳಲ್ಲಿ ಚಂಚಲತೆಯಿರದೆ ಎಲ್ಲವನ್ನೂ ಸಹಜವಾಗಿ ಎದುರಿಸುವ ಚಾಪಲ್ಯವಿತ್ತು. ನಕ್ಕರೆ ಬಾಯಿಂದ ಮುತ್ತು ಉದುರಬಹುದೆಂಬ ಭಯದಿಂದ ಬಿಗಿ ಹಿಡಿದಂತಿದ್ದ ಗುಲಾಬಿ ತುಟಿಗಳು. ಗದ್ದವು ದೇಹದಂತೆಯೇ ನೀಳಾಗಿತ್ತು. ಒಟ್ಟಾರೆ ಸಮರ್ಥ ಹೆಣ್ಣೆಂದು ಸಾರಿ ಹೇಳುವ ರೂಪು ಗಾಂಭೀರ್ಯ ಅವಳದು.

ಬೆಕ್ಕು ಹಾಲು ಕುಡಿಯುತ್ತಿದ್ದುದನ್ನು ನೋಡುತ್ತ ಪ್ರಮೀಲಾ ನಿಂತಿದ್ದಳು. ಸುತ್ತಲು ತಂಪು ಗಾಳಿ, ಪ್ರಶಾಂತ ವಾತಾವರಣವಿತ್ತು. ಬೆಕ್ಕು ಹಾಲು ಕುಡಿದು ಮುಗಿಸಿ ತನ್ನ ಬಾಯನ್ನು ಶುಚಿಗೊಳಿಸಹತ್ತಿತು. ಎದುರಿಗಿನ ಗಿಡದ ಟೊಂಗೆಯ ಮೇಲೆ ಇಣಚಿಯೊಂದರ ಚರ್-ಚರ್ ಸಪ್ಪಳ, ಆಚೆ ಕಡೆಯಿಂದ ಜೇನುಹುಳುಗಳ ಗುಜುಗುಜು ಹಾಡೂ ಕೇಳಬರುತ್ತಿತ್ತು. ಇಂಥ ತಂಪಾದ ಹವೆಯು ಆಹ್ಲಾದಕರವಾದುದೆಂದು ಅವಳಿಗೆ ಗೊತ್ತಿತ್ತು. ಆದರೆ ಅದೇ ಹವೆಯುು ತನ್ನ ವ್ಯವಹಾರಕ್ಕೆ ಆತಂಕ ತರಬಹುದೆಂದೂ ಅವಳು ಅನುಭವದಿಂದ ಕಂಡುಕೊಂಡಿದ್ದಳು. ಅಂಥ ದಿನಗಳು ಅವಳಿಗೆ ಆಹ್ಲಾದಕರವೆನ್ನಿಸಿ

ದರೂ ಭಯವನ್ನು ತರುತ್ತಿದ್ದವು. ಇಂದಿನ ದಿನವೂ ಅಷ್ಟೆ. ಮನೆಕೆಲಸಗಳತ್ತ ಹೊರಳಿದಳು. ಮನೆಯಿಂದ ಸುಮಾರು ದೂರದಲ್ಲಿದ್ದ ನಲ್ಲಿಯಿಂದ ನೀರು ತರಬೇಕಾಗಿರಲಿಲ್ಲವೆ ? ಅಬ್ಬ ! ಆ ನಲ್ಲಿ ! ಸೂಜಿ ಗಡುತರ ನೀರು ಬರುತ್ತಿತ್ತು. ನಿಂತರೆ ತೀರೇ ಹೋಯಿತು, ನೀರು ತರಹೋದವರ ಕಾಲುಗಳೇ ಸೋಲಬೇಕು. ಅಂಥ ನೀರಿಲ್ಲದ ನಲ್ಲಿಯದು. ಮನೆಯೊಳಕ್ಕೆ ಬಂದು ಕಮಲಾಕಾಂತನ ಕೋಣೆಯ ಬಾಗಿಲ ಹತ್ತಿರ ನಿಂತು,

"ಅಣ್ಣಾ, ಏಳಲಿಲ್ಲವೇ ?" ಎಂದು ಕೂಗಿದಳು.

ಉತ್ತರ ಬರಲಿಲ್ಲ.

"ಅಣ್ಣಾ, ಕಮಲಾಕಾಂತ !" ತುಸು ಗಟ್ಟಿಯಾಗಿ ಬಾಗಿಲ ತಟ್ಟಿ ಒಳಗೆ ಇಣಿಕಿ ನೋಡಿದಳು. ಮಂಚದ ಮೇಲೆ ಹಾಸಿಗೆಯಲ್ಲಿ ಬಡಕಲು ದೇಹದ ಉದ್ದ ನಿಲುವಿನ ಮನುಷ್ಯಾಕೃತಿ ಕಂಡಿತು. ಬೆಳ್ಳಗಿನ ಮುಖ, ಚಿಕ್ಕ ಹಣೆಯನ್ನು ಹೊದಿಕೆಯ ಹೊರತೆಗೆದು ಆ ಮನುಷ್ಯಾಕೃತಿ,

"ಇಷ್ಟು ಬೇಗ ಬೆಳಗಾಯಿತೆ ?" ಎನ್ನುತ್ತ ಮೇಲೇಳುತ್ತಿದ್ದಾಗಲೇ, ತನ್ನ ಅಣ್ಣ ಜೀವದಿಂದಿದ್ದಾನೆಂದು ಅವಳಿಗೆ ನಂಬುಗೆಯಾಯಿತು.

ಎಂಥ ವಿಷಾದದ ಮಾತಿದು ! ಇದೇ ಕಮಲಾಕಾಂತನನ್ನು ನಿನ್ನೆ ಮೊನ್ನೆಯ ತನಕ ನಗರದ ಅನೇಕ ಹೋಟಲುಗಳ, ಥಿಯೆಟರುಗಳ ಮಾಲಿಕರೂ, ಆಳುಗಳೂ ಒಳ್ಳೇ ಗೌರವದಿಂದ ಬರಮಾಡಿಕೊಂಡಿರಲಿಲ್ಲವೇ ? ಅಬ್ಬ ! ಈಗೆಲ್ಲಿ ಅವನ ಆ ಉಲ್ಲನ್ ಸೂಟುಗಳು ? ನಗೆಗಡಲನ್ನೇ ಎಬ್ಬಿಸುತ್ತಿದ್ದ ಅವನ ಆ ಮಾತುಗಳು ? ಅವನ ಆ ತುಂಬು ದೇಹವೆಲ್ಲಿ ?

ಕಮಲಾಕಾಂತನನ್ನು ಯುಕ್ಲಿಡ್‌ನ ಭಾಷೆಯಲ್ಲಿ ವರ್ಣಿಸಬಹುದಾದರೆ ಅವನನ್ನು 'ಸರಳರೇಖೆ' ಎಂದು ಕರೆಯಬಹುದು. ಸರಳರೇಖೆಗೆ ಸ್ಥೂಲ ಪಾತ್ರಗಳೆಲ್ಲಿ ? ಚಿಕ್ಕಂದಿನಿಂದಲೂ ಅವನು ಒಂದು ಸಸಿಯಂತೆ ಬೆಳೆದು ಇಪ್ಪತ್ತೈದಕ್ಕೆ ಮುಟ್ಟಿದ್ದ. ಈಗ ಅವನನ್ನು ಇಬ್ಭಾಗಿಸಲು ಜೋರಾಗಿ ಬೀಸುವ ಗಾಳಿಯೂ ಸಾಕೆಂದು ಯಾರು ಬೇಕಾದವರು ಹೇಳಬಹುದಿತ್ತು. ಪ್ರಮೀಲೆ ಕೋಣೆಯೊಳಗೆ ಬಂದುದನ್ನು ಕಂಡು ಕಮಲಾಕಾಂತ ಕೇಳಿದ:

"ಎಷ್ಟು ಗಂಟೆಯಾಯಿತು, ಪ್ರಮೀಲಾ ?"

"ಎಂಟು ಹೊಡೆಯುವ ಸಮಯವಾಗಿದೆ. ಇಂದಿನ ಬೆಳಗು ಬಲು ಸೊಗಸಾಗಿದೆ. ಹಕ್ಕಿಗಳ ಕಿಲಕಿಲಾಟ, ಜೇನುಹುಳುಗಳ ಗುಂಜಾರವ, ಸೂರ್ಯನ ಹೊಂಗಿರಣಗಳು........"

ಅವಳ ಮಾತಿನಲ್ಲಿ ಹಿಂದೆಂದೂ ಕಂಡಿರದ ಕಾವ್ಯಲಹರಿಯನ್ನು ಕಂಡು ಕಮಲಾಕಾಂತನ ಮನಸ್ಸಿನಲ್ಲಿ ಸಂಶಯ ಬಾರದಿರಲಿಲ್ಲ.

"ಏನಾದರೂ ವಿಶೇಷವಾಗಿದೆಯೇನು, ಪ್ರಮೀಲಾ ?"

"ಏನೂ ಇಲ್ಲ. ನೀರು ತರಬೇಕೆಂದರೆ ನಲ್ಲಿಯಲ್ಲಿ ಒಂದು ಹನಿ ಕೂಡ ಬರುತ್ತಿಲ್ಲ" ಒಮ್ಮೆಲೇ ಚಿಂತಾಕ್ರಾಂತಳಾಗಿ ಅವಳು ಉತ್ತರಿಸಿದಳು;

"ಹಾಳಾಗಿ ಹೋಗಲಿ, ಆ ನಲ್ಲಿ."

"ಆದರೇನು ಮಾಡುವದು ?"

"ಈ ಮನೆಯ ಮಾಲಿಕನನ್ನು ಹಿಡಿದು ಬಾವಿಯ ಪಂಪನ್ನಾದರೂ ಸರಿ ಮಾಡಲು ಹೇಳಬಾರದೇ ?"

"ಈ ಸಾರೆ ಅವನ ಭೆಟ್ಟಿಯಾದರೆ ಸಾಕು, ಅವನ ಕಪಾಳಕ್ಕೆ ಹೊಡೆದೇ ಹೇಳುವೆ. ಆದರೆ ಅಣ್ಣಾ, ನೀನು ಎದ್ದು ಪಕ್ಕದ ಮನೆಯವರನ್ನು ಕೇಳಿ ಒಂದೆರಡು ಕೊಡ ನೀರು ತರಬಾರದೇ ?"

"ಪಕ್ಕದ ಮನೆಯೆಂದರೇನು ? ಅರ್ಧ ಮೈಲಾದರೂ ದೂರವಿದೆಯಲ್ಲ?"

"ಛೇ, ಅಷ್ಟಿಲ್ಲ. ಬಹಳವಾದರೆ ಮೂರು ಫರ್ಲಾಂಗು ಇರಬಹುದು."

"ಅಷ್ಟು ದೂರ ಕೊಡ ಹೊರುವದೆಂದರೆ ಒಂದು ಟನ್ ಭಾರ ಹೊತ್ತಂತೆಯೇ ಸರಿ. ಮೇಲಾಗಿ ಮೊನ್ನೆ ನಾನು ಅಲ್ಲಿಗೆ ಹೋಗಿದ್ದಾಗ ಆ ಮನೆಯವರ ನಾಯಿ ಬೇರೆ ಕಚ್ಚಿತ್ತಲ್ಲ ?"

"ನೀನು ಹಾಗೆ ಓಡಬಾರದಿತ್ತು. ಎದೆ ಸೆಟೆಸಿಕೊಂಡು ಧೈರ್ಯದಿಂದ ಹೆಜ್ಜೆಗಳನ್ನಿಕ್ಕುತ್ತ ಹೋಗಿದ್ದೆಯಾದರೆ ನಿನಗೆ ಮನೆಯೊಡೆಯರ ಪರಿಚಯವಿದೆಯೆಂದು ತಿಳಿದು ಆ ನಾಯಿ ಕಚ್ಚುತ್ತಿರಲಿಲ್ಲ."

ತಾನು ಹಾಗೆ ಓಡಿದುದು ತಪ್ಪೆಂದು ಅನ್ನಿಸಿರಬೇಕು, ಆತ ತನ್ನನ್ನು ತಾನೇ ಹಳಿದುಕೊಂಡ. ಮಾತಿಗೂ ಚೇತನೆ ಸಿಕ್ಕಂತಾಗಿ,

"ನೀನಂತೂ ಇನ್ನೂ ಬೆಳಗಾಗದ ಮುಂಚೆ ನನ್ನನ್ನು ಹಾಸಿಗೆ ಬಿಡಲು ಹಚ್ಚಿ, ಅಷ್ಟು ದೂರ ಹೋಗಿ ನೀರು ತರಲು ಹೇಳುವಿ. ಮಿಲಿಟ್ರಿ ಬ್ಯಾಂಡಿನವ

ನಂತೆ ಎದೆ ಸೆಟೆಸಿಕೊಂಡು ಹೋಗಲು ಬೇರೆ ಉಪದೇಶಿಸುವಿ." ಎಂದ.

"ಅಣ್ಣಾ, ನೀನು ಗಂಡಸು. ನಾನು ಕೋಮಲ ಶರೀರದ ಹೆಣ್ಣು ನನ್ನಿಂದ ನೀರು ತರಲು ಸಾಧ್ಯವಾದೀತೇ ?"

"ಇದಕ್ಕಾಗಿ ಒಬ್ಬ ಆಳನ್ನಿಡಬೇಕು."

"ಅವನ ಸಂಬಳ ಕೊಡಲು ನಮ್ಮಲ್ಲಿ ಶಕ್ತಿಯಿಲ್ಲ. ಮನೆಯ ವೆಚ್ಚ ನೋಡಿಕೊಂಡು ಹೋಗುವದೇ ಸಾಕು ಸಾಕಾಗಿ ಹೋಗಿದೆ. ನಮಗೆ ಇರಲು........"

"ನೆರಳಾದರೂ ಇದೆಯೆಂದು ದೇವರನ್ನು ಸ್ಮರಿಸಬೇಕು, ಅಲ್ಲವೆ ?"

"ನಾನು ಅಂಥದೇನೂ ಹೇಳಲಿಲ್ಲ. ನೀನೇ ಎಲ್ಲವನ್ನೂ ಕಲ್ಪಿಸಿ ಕೊಳ್ಳುವಿ. ನಿನ್ನಿಂದ ನನಗೆ ಬೇಸರವೆಂದು ಭಾವಿಸಬೇಡ. ನೀನು ಇಲ್ಲಿಗೆ ಬಂದಿದ್ದೇ ದೊಡ್ಡ ಉಪಕಾರ. ನೀರು ತರುವಮತ್ತು ಕಟ್ಟಿಗೆಯೊಡೆಯುವ ಕೆಲಸ ದೊರೆತದ್ದಕ್ಕಾಗಿ ನೀನು........"

ಕಮಲಾಕಾಂತನಲ್ಲಿ ಅಂಜಿಕೆ ಹುಟ್ಟಿ ಮುಖ ಕಪ್ಪಿಟ್ಟಿತು.

"ಕಟ್ಟಿಗೆ ಬೇರೆ ಒಡೆಯಬೇಕೇ ?" ಎಂದು ಕೇಳಿದ.

"ಸದ್ಯಕ್ಕಿಲ್ಲ. ಸ್ವಚ್ಛ ಹವೆಯಲ್ಲಿ ತುಸು ಕೆಲಸ ಮಾಡಲಿ ಎಂದು ಹೇಳಿದೆ. ಆರೋಗ್ಯ ಸಂಪಾದಿಸಲು ಶ್ರೀಮಂತರು ಇದೇ ಕೆಲಸಕ್ಕಾಗಿ ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡುತ್ತಾರೆ. ಅದನ್ನೆಲ್ಲ ಇಲ್ಲಿ ನೀನು ಪುಕ್ಕಟೆಯಾಗಿ ಪಡೆದು ಶರೀರ ಸೌಖ್ಯ ಸಂಪಾದಿಸಿಕೊಳ್ಳಬಹುದು."

"ನನ್ನ ಶರೀರಕ್ಕೆ ಅದೆಲ್ಲ ಒಗ್ಗಲಾರದು."

"ಅದೇಕೆ ? ಈಗ ನಿನ್ನ ಪ್ರಕೃತಿ ಸುಧಾರಿಸಿದೆ. ರಕ್ತ ಬಂದಂತಿದೆ."

"ಸುಳ್ಳು."

ಪ್ರಮಿಲೆ ಆವನತ್ತ ಸಿಟ್ಟಿನಿಂದ ನೋಡಿದಳು.

"ನನ್ನ ನರಗಳಲ್ಲಿ ರಕ್ತ ಹೆಚ್ಚಿಲ್ಲ. ರಕ್ತವಿದ್ದಿದ್ದರೆ ನರಗಳು ಬಲಿಷ್ಠವಾಗಿರುತ್ತಿದ್ದವು. ಹಾಗಿದ್ದರೆ ನನಗೆ ಕನಸುಗಳೇ ಬೀಳುತ್ತಿರಲಿಲ್ಲ. ಕನಸಿನಲ್ಲಿ ಬರೀ ಮಂಗಗಳೇ ಕಾಣಿಸುತ್ತಿವೆ." ಕಮಲಾಕಾಂತ ಅಳುವ ಸ್ವರದಲ್ಲಿ ಹೇಳಿದ.

"ನನಗೂ ವಿಚಿತ್ರವಾದ ಕನಸುಗಳು ದಿನವೂ ಬೀಳುತ್ತಿವೆ."

"ಬ್ರಾಡ್‌ವೇ ರೋಡಿನಲ್ಲಿ ಹಗಲಿನಲ್ಲೇ ಮಂಗವೊಂದು ಬೆನ್ನು ಹತ್ತಿದ

ಕನಸು ಬಿದ್ದಿದೆಯೇನು ನಿನಗೆ ?"

"ಅವನ್ನೆಲ್ಲ ಯೋಚಿಸಬೇಡ. ಈ ಸ್ವಚ್ಛ ಹವೆಯಲ್ಲಿ ಇನ್ನೂ ಕೆಲವು ದಿವಸ ಇದ್ದರೆ ನೀನು ಸರಿಯಾಗುವಿ."

"ಅಕ್ಕಾ, ಅಲ್ಲಿ ನೋಡು, ಮನೆಯ ಚಪ್ಪರಕ್ಕೆ ಜೇಡು ಮನೆ ಕಟ್ಟಿದೆ. ಅದು ಕೂಡ ಹೇಗೇಗೋ ಕಾಣುತ್ತದೆ."

"ಮನೆಯ ಮಾಲಿಕ ಬರಲಿ ಅವನ್ನೂ ತೆಗೆಯಿಸುವೆ."

"ಇಲ್ಲಿ ಬಿದ್ದಿರಲು ಸಾಕಾಗಿಹೋಗಿದೆ. ಮಾವ ಸತ್ತು ಹದಿನೈದು ದಿನಗಳಾದರೂ ಇನ್ನೂ ವಕೀಲರ ಕಾಗದ ಬರಲಿಲ್ಲವಲ್ಲ ? ಇಂದು ಏನಾದರೂ ಬರಲೇಬೇಕು. "

"ಅವನು ಹಣವನ್ನು ನಮಗೆ ಬಿಟ್ಟು ಹೋಗಿರಬೇಕೆನ್ನುವಿಯೇನು ?"

"ನಾನು ಹಾಗೆಂದೆನೇ ? ಅವನು ಬೇರೆ ಯಾರಿಗೆ ಕೊಡಬೇಕು ? ಅವನ ಸಂಬಂಧಿಕರೆಂದರೆ ನಾವೇ ಇಬ್ಬರು. ಅವನ ಅಡ್ಡಹೆಸರನ್ನು ನಾನೂ ಉಪಯೋಗಿಸುತ್ತಿಲ್ಲವೇ ? ಅವರಿಗೆ ಆಗಾಗ ಪತ್ರಗಳನ್ನೂ ಬರೆಯುತ್ತಲೇ ಇದ್ದೆ. ವಕೀಲರೆಂದರೆ ದೊಡ್ಡ ಮೂರ್ಖರು. ತಂತಿಯನ್ನಾದರೂ ಕಳಿಸಬಾರದಿತ್ತೇ ? ಆದಿರಲಿ, ನಾನು ನೀರು ತರುವೆ. ನೀನು ಟಪ್ಪಾಲಿಗಾಗಿ ಕಾಯುತ್ತಿರು."

ಪ್ರಮೀಲಾ ಅಡುಗೆ ಮನೆಯತ್ತ ತೆರಳಿದಳು. ಅವಳ ಮನಸ್ಸಿನಲ್ಲಿ ಒಳ್ಳೆಯ ಲಾಭತರಬಲ್ಲ ವ್ಯಾಪಾರದ ಯೋಜನೆಯೊಂದಿದ್ದಿತು, ಅದಕ್ಕೆ ಬೇಕಾಗುವ ಬಂಡವಾಳ ಅವಳಲ್ಲಿರಲಿಲ್ಲ. ಅದು ಸಿಕ್ಕಬೇಕಾದರೆ ಅವಳ ಮಾವ ಸತ್ತು ಅವನ ಹಣ ಇವಳ ಕೈಸೇರಬೇಕು. ಅದು ಸಾಧ್ಯವಾಗುವ ಸಮಯ ಬಂದಂತಿತ್ತು. ಆದರೆ, ಇಂದಿನ ಸಾದಾ ಜೀವನದಿಂದ ಕಮಲಾಕಾಂತನ ಪ್ರಕೃತಿ ಸುಧಾರಿಸುತ್ತಿರುವಾಗ ಅಷ್ಟೊಂದು ಹಣ ಬಂದರೆ ಅವನು ತಿರುಗಿ ತನ್ನ ದೇಹಸ್ಥಿತಿ ಕೆಡಿಸಿಕೊಳ್ಳಲು ಅನುಕೂಲವಾದಂತೆಯೇ ಸರಿ. ಅವನಲ್ಲಿ ಹಣವಿರುವಾಗ ಅವನ ರೀತಿಯೇ ಬೇರೆಯಾಗುತ್ತಿದ್ದುದನ್ನು ಅವಳೇನು ಕಂಡಿರಲಿಲ್ಲವೆ ? ಹೀಗಾಗಿ ಅವಳನ್ನು ಉಭಯ ಸಂಕಟ ಕಾಡುತ್ತಿತ್ತು.

ಕಿಟಕಿಯಾಚೆ ದೃಷ್ಟಿ ಬೀರಿದಾಗ ಕಮಲಾಕಾಂತ ಕೊಡ ಹೊತ್ತು ಹೋಗುವದನ್ನು ಕಂಡಳು. ಅವನು ಕೊಡವನ್ನು ಒಮ್ಮೆಲೇ ನೆಲಕ್ಕಿಟ್ಟು

ಗಾಳಿಯಲ್ಲಿ ಕೈ ಬೀಸಿದುದನ್ನೂ ನೋಡಿದಳು. ಹಾಗೆ ಕೈ ಬೀಸಿದ ಕಾರಣ ಅವಳಿಗೆ ಗೊತ್ತಿದ್ದುದೇ. ಅವಳೇ ಸಾಕಿದ ಜೇನುಹುಳುಗಳ ಕಾಟವಲ್ಲವೇ? ಕಮಲಾಕಾಂತನ ನರ್ತನವನ್ನು ನೋಡುವುದರಲ್ಲಿ ಮಗ್ನಳಾಗಿದ್ದವಳಿಗೆ ಪಕ್ಕದ ಮನೆಯವನು ಕಮಲಾಕಾಂತನತ್ತ ಕೈಮಾಡಿ ಕರೆದುದು ಕಂಡಿತು. ಕಮಲಾ ಕಾಂತ ಅವನಿಂದ ಕೆಲ ಪತ್ರಗಳನ್ನು ಇಸಿದುಕೊಂಡು, ಅವುಗಳಲ್ಲಿನದೊಂದು ಆರಿಸಿ ಅದನ್ನೋದಿ ಮನೆಯತ್ತ ಧಾವಿಸಿ ಬಂದ.

ಪತ್ರವನ್ನು ಓದಿ ಕಮಲಾಕಾಂತ ಓಡಿ ಬರುವದನ್ನು ಕಂಡೊಡನೆಯೇ ಅದು ವಕೀಲರಿಂದ ಬಂದ ಪತ್ರವೇ ಇರಬಹುದೆಂದು ಊಹಿಸಲು ಪ್ರಮೀಲೆಗೆ ತಡವಾಗಲಿಲ್ಲ. ಬೇರಾವ ಪತ್ರವೂ ಅವನಲ್ಲಿ ಅಂಥ ಚೇತನೆ ತರಲು ಸಮರ್ಥ ವಾಗಲಾರದು! ಆ ಪತ್ರದಲ್ಲಿ ಲಾಭದಾಯಕ ಸುದ್ದಿಯೇ ಇರಲಿ, ಅಥವಾ ಅದರ ವಿರುದ್ಧವಾದುದೇ ಇರಲಿ ಅವನಿಗೆ ಸ್ಫೂರ್ತಿ ಮಾತ್ರ ಬರಲೇಬೇಕಲ್ಲವೇ! ಅವನ ಸಮೀಪಕ್ಕೆ ಹೋಗಿ ನೋಡಿದಾಗ ಅವನ ಮುಖದಲ್ಲಿ ಸಂತೋಷ ವಂತೂ ಕಂಡುಬರಲಿಲ್ಲ. ಕಣ್ಣುಗಳು ಬೆಂಕಿಯನ್ನು ಕಾರುತ್ತಿದ್ದವು. ಸಂತಾ ಪಾತಿರೇಕದಿಂದ ಅವನು ತೊದಲಿಸುತ್ತಿದ್ದ.

"ಅಣ್ಣಾ, ಏನು ವಿಶೇಷ?" ಅಂತಃಕರಣದಿಂದ ಉಕ್ಕಿಬಂದ ಮಮ ತೆಯ ನುಡಿಗಳಿಂದ ಕೇಳಿದಳು.

"ಅಯ್ಯೋ ಪ್ರಮೀಲಾ, ಮಾವ ನನಗೆ ಕೇವಲ ಇನ್ನೂರು ರೂಪಾಯಿ ಬಿಟ್ಟುಹೋಗಿದ್ದಾನೆ. ಇನ್ನುಳಿದುದೆಲ್ಲ ಅದಾವನೋ ರಾಜಾಸಾಹೇಬ್ ಅತ್ತಿ ಗೇರಿ ಅಂತೆ, ಅವನಿಗೆ........"

ಮೌನವಾಗಿಯೇ ಪತ್ರವನ್ನು ತೆಗೆದುಕೊಂಡು ಪ್ರಮೀಲೆ ಓದಿದಳು. ಕೆಲವೇ ನಿಮಿಷಗಳ ಹಿಂದೆ ಕಮಲಾಕಾಂತನಿಗೆ ಹೆಚ್ಚು ಹಣ ಸಿಕ್ಕರೆ ಅವನ ದೇಹಸ್ಥಿತಿ ಹದಗೆಡುವಂತೆ ವರ್ತಿಸುವನೆಂದು ಅವಳು ಅಂದುಕೊಂಡಿರಲಿಲ್ಲವೆ? ಈಗ ಆ ಹಣ ಸಿಗದಿದ್ದುದರಿಂದ ತನ್ನ ಅಣ್ಣನ ದೈವಕ್ಕಾಗಿ ನೊಂದಳು. ತನಗೂ ಏನೂ ಸಿಕ್ಕಿರಲಿಲ್ಲವೆಂಬ ಯೋಚನೆಯೂ ಅವಳಿಗೆ ಬರಲಿಲ್ಲ. ಕಮಲಾಕಾಂತನ ಸ್ಥಿತಿಗಾಗಿ ವ್ಯಸನವೆನಿಸಿತ್ತು.

ಸತ್ತುಹೋದ ಸರಕಾರರ ಬಗ್ಗೆ ಸಿಟ್ಟಿಗೆದ್ದರೂ ಲಾಭವಿರಲಿಲ್ಲ. ಅವನು ಮೊದಲೂ ಅವರ ಕೈಗೆ ನಿಲುಕದ ವ್ಯಕ್ತಿಯಾಗಿದ್ದ, ಈಗಂತೂ ಸತ್ತು

ಹೋಗಿದ್ದ. ಅವಳ ಎಲ್ಲ ಸಿಟ್ಟು ಅತ್ತೀಗೇರಿ ರಾಜಾಸಾಹೇಬ್ ಎಂಬ ವ್ಯಕ್ತಿಯ ಮೇಲೆ ಕೇಂದ್ರೀಕೃತವಾಯಿತು. ಅವನೋರ್ವ ಕಪಟಿ, ದರೋಡೆಗಾರ, ಸುಲಿಗೆಗಾರನೆಂದೇ ತರ್ಕಿಸಿಕೊಂಡಳು. ಅವನ ಆಕೃತಿಯೊಂದು ಅವಳ ಕಲ್ಪನೆಯ ಮುಂದೆ ನಿಂತಿತು. ತೆಳ್ಳನೆಯ ಎತ್ತರವಾದ ನಿಲುವು, ಕೆಂಪಾದ ಕಣ್ಣುಗಳು, ಹುರಿಗೊಳಿಸಿದ ರಾಕ್ಷಸೀ ಮೀಸೆ, ನೋಡಿದೊಡನೆ ತಿರಸ್ಕಾರ ಬರುವ ರೂಪ ಅವನದಾಗಿರಬೇಕೆಂದು ಅವಳು ಭಾವಿಸಿದಳು. ಅವಳು ತನ್ನ ಜೀವಮಾನದಲ್ಲೇ ಯಾರನ್ನೂ ದ್ವೇಷಿಸಿರಲಿಲ್ಲ. ಆದರೂ ಅವಳಲ್ಲಿ ಅಡಗಿದ್ದ ದ್ವೇಷವೆಲ್ಲ ರಾಜಾಸಾಹೇಬನಲ್ಲಿ ತಳವೂರಿತು. ಅವಳನ್ನೇ ಕಾಣಲು ಅವಳ ಮನೆ ಹುಡುಕುತ್ತ ಅವನೂ ಮುಂಬಯಿಯಲ್ಲಿ ತಿರುಗುತ್ತಿದ್ದನಲ್ಲವೆ ?

ಕಮಲಾಕಾಂತ ನೀರು ತಂದ. ಅವನ ದೈವದಲ್ಲೇ ಹಾಗಿದ್ದಿತು ! ಬೇರೆ ದಾರಿಯೆಲ್ಲಿಯದು ? ನೀರು ತರುವುದರಿಂದ ಅವನಿಗೆ ವ್ಯಾಯಾಮವಾದಂತೆ ಕಾಣಿಸಲಿಲ್ಲ. ಅಬ್ಬ ! ಅವನ ಮನಸ್ಸನ್ನು ಆ ಭಯಂಕರ ವಾರ್ತೆ ಎಷ್ಟೊಂದು ಗಾಯಗೊಳಿಸಿದ್ದಿತಲ್ಲ ! "ರಾಜಾಸಾಹೇಬ್, ಯಾರಿವನು ರಾಜಾಸಾಹೇಬ್ ! ನನ್ನ ಮಾವನನ್ನು ಯಾವ ರೀತಿಯಿಂದ ವಶಪಡಿಸಿಕೊಂಡನೋ? ಕೇವಲ ನೀಚತನ ! ಪಾಪ, ನನ್ನ ಮಾವ !" ಹೀಗೆ ಏನೇನೋ ಬಡಬಡಿಸುತ್ತಿದ್ದ.

ಪ್ರಮೀಲೆ ಭಾರವಾದ ಹೃದಯದಿಂದಲೇ ಅಡುಗೆ ಮಾಡಿ ಕಮಲಾಕಾಂತನಿಗಾಗಿ ಕಾಯುತ್ತಿದ್ದಳು. ಅವಳು ಭಾವಜೀವಿ, ಬೇರೊಬ್ಬರ ಸಂಕಟವನ್ನು ನೋಡುವದು ಅವಳಿಗಾಗದ ಮಾತು ಕಮಲಾಕಾಂತನಂತೂ ಅವಳ ಅಣ್ಣ. ಅವನಿಗೆ ಅಂಥ ದುಃಖವಾಗಿರುವಾಗ ಅವಳ ಹೃದಯ ಹೇಗಾಗಿರಬೇಕು ?

ಹೊರಗೆ ಜಡವಾದ ಹೆಜ್ಜೆಗಳ ಸಪ್ಪಳ ಕೇಳಬಂದಿತು. ಕಮಲಾಕಾಂತ ನೀರಿನ ಕೊಡ ಹೊತ್ತು ಬರುತ್ತಿದ್ದ. ಅವನ ಮುಖ ನೋಡಿ ಅವನನ್ನು ಮಾತನಾಡಿಸುವ ಧೈರ್ಯವೇ ಅವಳಲ್ಲಿ ಬರಲಿಲ್ಲ. ಅವನು ತನ್ನ ಬಡಕಲು ದೇಹವನ್ನು ಮುದ್ದೆ ಮಾಡಿಕೊಂಡು ಕುರ್ಚಿಯೊಂದರಲ್ಲಿ ಬಿದ್ದ.

"ಈಗೆಷ್ಟು ವೇಳೆ ಪ್ರಮೀಲಾ ?"

ಅವಳು ಗಡಿಯಾರ ನೋಡಿ,

"ಒಂಬತ್ತೂವರೆ ಆಗಿದೆ " ಎಂದಳು.

ಕಮಲಾಕಾಂತನು ತ್ರಿಕಾಲಜ್ಞಾನಿಯಂತೆ,

"ಆ ನೀಚನು ಬಂಗಾರದ ತಟ್ಟೆಯಲ್ಲಿ ಉಪಹಾರ ತಿಂದು ಮಾವನ ಹಣ ದಿಂದ ಕೊಂಡ ಕಾರಿನಲ್ಲಿ ಕುಳಿತು ನಮಗೆ ಸಲ್ಲಬೇಕಾಗಿದ್ದ ಹಣದ ಕೆಲ ಭಾಗ ವನ್ನು ಪಡೆಯಲು ಬ್ಯಾಂಕಿಗೆ ತೆರಳಿರಬಹುದು." ಎಂದ.

ಆಸ್ಥೆಯಿಲ್ಲದೆಯೇ ಪ್ರಮೀಲಾ ಬೆಳಗಿನ ಉಪಹಾರ ಮುಗಿಸಿಯಾದ ಮೇಲೆ ಮಧ್ಯಾಹ್ನದ ಅಡುಗೆಯನ್ನೂ ಮಾಡಿ, ಜೇನುಹುಳುಗಳ ಯೋಗಕ್ಷೇಮ ನೋಡಿದಳು. ಕಮಲಾಕಾಂತನನ್ನು ಯಾವ ಕೆಲಸಕ್ಕೂ ಕರೆಯಲಿಲ್ಲ. ಮಧ್ಯಾಹ್ನ ಅವರಿಬ್ಬರೂ ಊಟಕ್ಕೆ ಕುಳಿತಾಗ ಕಮಲಾಕಾಂತನೇ,

"ಹಾಳು ಮನುಷ್ಯ ಈಗೇನು ಮಾಡುತ್ತಿರಬಹುದು ? ಕಡಿಮೆ ಬೆಲೆಯ ಶಾಂಪೇನ್ ತಂದುದಕ್ಕಾಗಿ ಆಳನ್ನು ಬಯ್ಯುತ್ತಿರಬಹುದೋ ?" ಎಂದು ಮೌನ ವ್ರತ ತಾಳಿದವನು ಕೊನೆಯವರೆಗೆ ಮುರಿಯಲಿಲ್ಲ.

ಪ್ರಮೀಲೆಗೂ ವಿಪರೀತ ಬೇಸರವಾಗಿತ್ತು. ಮಧ್ಯಾಹ್ನ ಮೂರು ಗಂಟೆಯ ಸುಮಾರಿಗೆ ತುಸು ವಿಶ್ರಾಂತಿ ಪಡೆಯಲೆಂದು ತನ್ನ ಮಲಗುವ ಕೋಣೆಯನ್ನು ಪ್ರವೇಶಿಸಿದಳು. ಸಂಜೆಯ ಗೃಹಕೃತ್ಯಕ್ಕಾಗಿ ಅಣಿಯಾಗ ಬೇಕಲ್ಲವೆ ?

ಅವಳು ನಿದ್ರೆಯಿಂದ ಎಚ್ಚತ್ತು ಹೊರಗೆ ಬಂದಾಗ ಸಂಜೆಯಾಗುತ್ತ ಬಂದಿತ್ತು. ಸೂರ್ಯನು ಇನ್ನೇನು ಇಷ್ಟರಲ್ಲಿಯೇ ಮುಳುಗುವವನಂತೆ ಕಾಣು ತ್ತಿದ್ದ. ಅಣ್ಣನನ್ನು ಕಾಣಲೆಂದು ಹೊರಗೆ ಬಂದಳು. ಅವನು ಎಲ್ಲಿಯೂ ಕಾಣಲಿಲ್ಲ. ಎಂಟು ಗಂಟೆಯಾಯಿತು, ಹತ್ತು–ಹನ್ನೊಂದು ಗಂಟೆ ಬಾರಿ ಸಿತು. ಅವನು ಗೊಬ್ಬೂರಿಗೆ ಹೋದನೆಂದೇ ಅವಳಿಗೆ ಖಾತ್ರಿಯಾಯಿತು.

## ೬

ಅತ್ತೀಗೇರಿ ರಾಜಾಸಾಹೇಬ್ ಮುಂಬಯಿ ನಗರಕ್ಕೆ ಬಂದು ನಾಲ್ಕು ದಿನವಾಗಿದೆ. ರಾಜಾಸಾಹೇಬ ಮುಂಬಯಿ ಸೇರಿದ ಮರುದಿನವೇ ಕಮಲಾ

ಕಾಂತ ತನ್ನ ಮನೆಯಿಂದ ಮಾಯವಾಗಿದ್ದ. ರಾತ್ರಿಯ ಹತ್ತು ಗಂಟೆಯ ಸಮಯ. ತನ್ನ ಗೆಳೆಯ ಶಾಮರಾಯನ ಕೋಣೆಯಲ್ಲಿ ಕುಳಿತುಕೊಂಡಿದ್ದ ರಾಜಾಸಾಹೇಬ ಬಿಡುವಿಲ್ಲದೆ ಸಿಗರೇಟಿನ ಹೊಗೆಯನ್ನು ಬಾಯಿಯಿಂದ ಹೊರ ಚೆಲ್ಲಿ ಕೋಣೆ ತುಂಬಿಸುತ್ತಿದ್ದ. ಅವನ ಎದುರಿಗಿನ ಮೇಜಿನ ಮೇಲೆ ಪಾಕೀಟೊಂದು ಬಿದ್ದಿತ್ತು.

ಮುಂಬಯಿಯು ಯಾವಾಗಲೂ ರಾಜಾಸಾಹೇಬನಿಗೆ ಹೊಸ ಚೇತನೆಯನ್ನು ತಂದು ಕೊಡುತ್ತಿದ್ದಿತಾದರೂ ಇಂದು ಅವನಿಗೆ ಬೇಸರವೆನಿಸಿತ್ತು. ಆ ನಗರದಲ್ಲಿ ನೋಡಬೇಕಾದುದೂ ಮಾಡಬೇಕಾದುದೂ ಬಹಳವಿತ್ತು. ಎಲ್ಲವನ್ನೂ ಏಕಕಾಲಕ್ಕೆ ಸಾಧಿಸಲು ಹೋಗಿ ಅವನು ದಣಿದಿದ್ದ. ಅಂದಿನ ರಾತ್ರಿಯನ್ನು ನಿದ್ರೆಯಲ್ಲಿ ಕಳೆದರೆ ನಾಳೆ ಅನೇಕ ಕೆಲಸಗಳನ್ನು ಪೂರ್ತಿಗೊಳಿಸಬಹುದೆಂದೇ ಅವನು ತೀವ್ರ ಮನೆ ಸೇರಿದ್ದುದು. ಇಷ್ಟರಲ್ಲಿಯೇ ನಿದ್ರೆ ಹೋಗಬೇಕಾಗಿದ್ದ ಅವನು ಆ ಪತ್ರದ ಯೋಚನೆಯಲ್ಲಿದ್ದನಾದ್ದರಿಂದ ಈಗಲೂ ಎಚ್ಚರವಾಗಿದ್ದ.

ರೈಲಿನಲ್ಲಿ ಇನ್ನಾವ ಕೆಲಸವೂ ಇದ್ದಿಲ್ಲವಾದ್ದರಿಂದ ಪ್ರಮೀಲಾ ಸರಕಾರಳ ಬಗೆಗೆ ಯೋಚಿಸಿ, ಓರ್ವ ವಕೀಲರನ್ನು ಹಿಡಿದು ಮೊದಲು ಅವಳಿಗೆ ಪತ್ರ ಬರೆಯಿಸುವದೆಂದೂ ಹತ್ತು ಲಕ್ಷ ರೂಪಾಯಿಗಳಲ್ಲಿ ಅರ್ಧವನ್ನು ಅವಳಿಗೆ ಕೊಡಮಾಡುವದೆಂದೂ ಆತ ನಿರ್ಧರಿಸಿದ್ದ. ಅದರ ಹೊರತು ಅವನಿಗೆ ಬೇರಾವ ರೀತಿಯೂ ಸರಿಕಂಡಿರಲಿಲ್ಲ. ಎಲ್ಲವನ್ನೂ ಕಸಿದುಕೊಂಡು ಆ ಅನಾಥರಿಗೆ ಅನ್ಯಾಯವೆಸಗುವದೂ ಬೇಡ, ಎಲ್ಲವನ್ನೂ ಕೊಡುವದೂ ಬೇಡ. ಅರ್ಧ ಅವಳಿಗೆ ಅರ್ಧ ತನಗಾದರೆ ಎಲ್ಲರೂ ಒಪ್ಪುವ ಮಾತೆಂದೇ ಅವನು ನಿರ್ಧರಿಸಿ ಅದರಂತೆ ಪ್ರಮೀಲೆಗೆ ವಕೀಲರಿಂದ ಪತ್ರವನ್ನು ಬರೆಯಿಸಿದ್ದ. ಅವಳಿಂದ ಉತ್ತರವೂ ಅಂದೇ ಬಂದಿತ್ತು. ಮೇಜಿನ ಮೇಲಿದ್ದ ಪತ್ರವೇ ಅವಳದು. ಅವನ ಕೊಡುಗೆಯನ್ನು ಅವಳು ತುಚ್ಛೀಕರಿಸಿದ್ದಳು. ಹೀಗಾಗಬಹುದೆಂದು ರಾಜಾಸಾಹೇಬ ಭಾವಿಸಿರಲಿಲ್ಲ. ಅವನ ಕಲ್ಪನೆ ಯೋಚನೆಗಳೆಲ್ಲ ಬಕ್ಕಬೋರಲಾಗಿದ್ದವು. ಇನ್ನು ಮುಂದಿನ ದಾರಿ ಯಾವುದು ? ಅವನ್ನಾತ ನಿರ್ಧರಿಸುತ್ತಿದ್ದುದರಿಂದಲೇ ಅಷ್ಟೊಂದು ಸಿಗರೇಟುಗಳು ಸುಟ್ಟು ಹೋಗುತ್ತಿದ್ದವು. ಇನ್ನೊಂದು ಸಿಗರೇಟನ್ನಾದರೂ ಹಚ್ಚಿ ಯೋಚಿಸೋಣವೆನ್ನುತ್ತಿರುವಾಗಲೇ ಯಾರೋ ಬಾಗಿಲು

ತಟ್ಟಿದ ಸದ್ದಾಯಿತು. ಬಾಗಿಲನ್ನು ತೆರೆದಾಗ ಎತ್ತರವಾದ ಬಡಕಲು ದೇಹದ ಯುವಕನೋರ್ವ ನಿಂತಿದ್ದುದನ್ನು ಕಂಡ. ರಾಜಾಸಾಹೇಬನಿಗೆ ಹೆದರಿಕೆಯೂ ಬಂದಿರಬೇಕು--ಅವನನ್ನು ನೋಡಿ. ಬಾಗಿಲು ತಟ್ಟಿದ ಸಪ್ಪಳವಾದಾಗ ರಾಜಾಸಾಹೇಬ ಭಾವಿಸಿದ್ದುದೇ ಬೇರೆ. ಕೆಳಗಿನ ಮನೆಯೊಂದರಲ್ಲಿ ಆಳಾಗಿದ್ದ ರಂಗ ಕರ್ನಾಟಕದವನು. ರಾಜಾಸಾಹೇಬನಿಂದ ಕರ್ನಾಟಕದ ಸುದ್ದಿ ತಿಳಿದುಕೊಳ್ಳಲೆಂದು ದಿನವೂ ರಾತ್ರಿ ಬರುತ್ತಿದ್ದ. ಪ್ರತಿನಿತ್ಯದಂತೆ ತನ್ನ ಊರಿನ ಕಡೆಯ ಸಮಾಚಾರ ಕೇಳಲು ರಂಗನೇ ಬಂದಿರಬೇಕೆಂದು ರಾಜಾಸಾಹೇಬ್ ತರ್ಕಿಸಿದ್ದ. ಆದರೆ ಅವನ ಬದಲು ಅಪರಿಚಿತನೋರ್ವನು ಎದುರಿಗೆ ನಿಂತುದಕ್ಕೆ ಅವನನ್ನೇ ಕುತೂಹಲದಿಂದ ನೋಡಹತ್ತಿದ.

"ಶಾಮರಾವ್ ಮನೆಯಲ್ಲಿಲ್ಲವೇ ?" ಬಂದವನು ಕೇಳಿದ.

"ಅವರು ಗೊಬ್ಬೂರಿನಲ್ಲಿದ್ದಾರೆ."

"ಎಲಾ, ಎಂದು ಹೋದರು ?"

"ಹೋಗಿ ನಾಲ್ಕಾರು ತಿಂಗಳಾಯಿತಲ್ಲ !"

"ನಾನು ಒಂದೆರಡು ನಿಮಿಷ ಒಳಗೆ ಬರಲೇ ?"

"ಓಹೋ, ಅದಕ್ಕೇನು ? ಬನ್ನಿರಲ್ಲ."

ಇಬ್ಬರೂ ಒಳಕ್ಕೆ ಬಂದರು. ಬಂದವನು ಕುರ್ಚಿಯೊಂದರಲ್ಲಿ ತನ್ನ ದೇಹವನ್ನು ಮುದುಡೆ ಮಾಡಿ ಕುಳಿತ. ದೊಡ್ಡಿಯಲ್ಲಿ ಸಿಕ್ಕಿಬಿದ್ದ ಕುರಿಯೊಂದು ಪಾರಾಗಿ ಹೋಗಲು ಮಾರ್ಗವೆಲ್ಲಿಯಾದರೂ ಇದೆಯೇನೋ ಎಂದು ಹುಡುಕುತ್ತಿರುವಂತೆ ಅವನು ತನ್ನ ಮೊಳಕಾಲ ಸಂದಿನೊಳಗಿಂದ ರಾಜಾಸಾಹೇಬನನ್ನು ಇಣಿಕಿ ನೋಡಹತ್ತಿದ.

"ನೀವು ಗೊಬ್ಬೂರಿನವರೇನು ?"

"ಹೌದು."

"ಇಲ್ಲಿ ಇರಹತ್ತಿ ಬಹಳ ದಿನಗಳಾದುವೇ ?"

"ಛೆ, ಮೊನ್ನೆಯೇ ಬಂದಿದ್ದೇನೆ."

ಆಗಂತುಕನು ತನ್ನ ಶರೀರವನ್ನು ಇನ್ನಿಷ್ಟು ಒಳಕ್ಕೆ ಎಳೆದುಕೊಂಡುದರಿಂದ ಅವನ ತಲೆಗಿಂತ ಮೊಳಕಾಲುಗಳೇ ಮೇಲೆ ಕಾಣಹತ್ತಿದವು. ಒಂದು ಸಿಗರೇಟ್ ಹೊತ್ತಿಸಿ,

"ಮುಂಬಯಿಯು ಎಂದು ಹಾಳಾಗಿ ಹೋಗುವದೋ ?" ವ್ಯಸನ ದಿಂದ ಹೊಗೆ ಬಿಡುತ್ತ ಆತನೆಂದ: "ಇಲ್ಲಿ ಪ್ರತಿನಿತ್ಯವೂ ಏನಾದರೂ ಬದಲಾ ಗುತ್ತಲೇ ಇರುತ್ತದೆ. ಜನಗಳಂತೂ ರೈಲು ಪ್ರವಾಸಿಗಳಿದ್ದಂತೆ. ಇದೊಂದು ರೈಲ್ವೆ ಸ್ಟೇಶನ್. ನೀವು ಕೆಲದಿವಸ ಬೇರೆ ಕಡೆಗೆ ಹೋಗಿ ನಿಮ್ಮ ಗೆಳೆಯರನ್ನು ಹುಡುಕಲು ಬಂದರೆ ಅವರೂ ಹೋಗಿರುತ್ತಾರೆ. ಕಲ್ಲಪ್ಪ ಪುಣೆಗೆ, ಮಲ್ಲಪ್ಪ ಬೆಳಗಾವಿಗೆ, ತಮ್ಮಪ್ಪ ಜೈಲಿಗೆ, ಇನ್ನುಳಿದವರು ಎಲ್ಲಿ ಹೋದರೆಂಬುದೂ ತಿಳಿಯಲಾರದು. ನಾನು ಮೂರು ದಿನಗಳಿಂದ ನನ್ನ ಗೆಳೆಯರ ಶೋಧದಲ್ಲಿದ್ದೇನೆ. ಈವರೆಗೆ ಒಬ್ಬನೂ ಸಿಕ್ಕಿಲ್ಲ. ಕೊನೆಗೆ ಶಾಮ ರಾವನನ್ನಾದರೂ ಕಂಡುಹೋಗಲು ಬಂದರೆ ಇಲ್ಲಿಯೂ ಅದೇ ಗತಿ. ಆರು ತಿಂಗಳಿನಲ್ಲಿ ಇಷ್ಟೆಲ್ಲ ಬದಲಾವಣೆ. ಮಳೆಗಾಲ ಬರುತ್ತಿದೆಯೆಂದು ಎಲ್ಲರೂ ಹೊರಟು ಹೋಗಿರುವರೋ ಏನೋ? ಒಬ್ಬ ಗೆಳೆಯನಾದರೂ ಸಿಕ್ಕಬಹು ದೆಂದು ಆಶಿಸಿದರೆ ಎಲ್ಲೆಲ್ಲಿಯೂ ನನಗೆ ನಿರಾಶೆಯೇ ಕಾದು ನಿಂತಂತಿದೆ. ಹೀಗೆಲ್ಲ ಗತಿಯಾಗುವದೆಂದು ನನಗೆ ತಿಳಿದಿದ್ದರೆ ನಾನು ಮನೆಯನ್ನೇ ಬಿಡುತ್ತಿರ ಲಿಲ್ಲ. ನಮ್ಮ ಮನೆ ಪುಣೆ ರೋಡಿಗೆ ಹೊಂದಿ ಇದೆ "

"ಪುಣೆ ರೋಡಿಗೆ ಹೊಂದಿಯೇ ?"

"ಹೌದು. ಪುಣೆಯ ಕಡೆಗೆ ಹೋಗುವ ದಾರಿಯ ಪಕ್ಕದಲ್ಲಿ."

ಸುಳ್ಳು, ಮೋಸದ ಕೃತ್ಯಗಳಿಗೆ ಒಪ್ಪಬಹುದಾದ ಒಂದು ರಕ್ತದ ಕಣವೂ ರಾಜಾಸಾಹೇಬನಲ್ಲಿರಲಿಲ್ಲ. ತನ್ನ ನಿಜ ಹೆಸರನ್ನು ಬಿಟ್ಟು ಬೇರೊಂದು ಹೆಸರಿ ನಿಂದ ಮುಂಬಯಿಯಲ್ಲಿ ತಿರುಗುವದೇ ಅವನಿಗೆ ಬೇಸರವೆನಿಸಿತ್ತು. ರಾಜಾ ಸಾಹೇಬ್ ಎಂಬ ಹೆಸರಿನಿಂದಲೇ ಅವನು ಮುಂಬಯಿಗೆ ಬಂದುದಾಗಿದ್ದರೆ 'ಪ್ರಮಿಲಾ ಸರಕಾರ' ಳ ಮನೆ ನಿಮಗೆ ಗೊತ್ತಿದೆಯೇ ? ಎಂದು ಕೇಳಬಹು ದಿತ್ತು. ಆದರೆ ಅಣ್ಣಾಸಾಹೇಬ ಅತ್ತೀಗೇರಿ ಮತ್ತು ಅತ್ತೀಗೇರಿಯ ರಾಜಾ ಸಾಹೇಬ್ ಈ ಎರಡು ಹೆಸರುಗಳಲ್ಲಿ ಅಂತರವಿತ್ತು. ಈಗಿನ ಅವನ ಹೆಸರಿಗೂ ಪ್ರಮಿಲಾ ಸರಕಾರಳಿಗೂ ಸಂಬಂಧವಾದರೂ ಏನಿತ್ತು? ಆ ಬಡಕಲು ದೇಹದ ವನೇ ಮಾತು ಮುಂದುವರಿಸುತ್ತ,

"ಇಂದು ಇಡಿಯ ದಿನವನ್ನೆಲ್ಲ ನನ್ನ ಸ್ನೇಹಿತರನ್ನು ಕಾಣುವ ಬಯಕೆ ಯಿಂದ ಸುತ್ತಿ ಸುತ್ತಿ ಸಾಕಾಯಿತು. ಈ ರೋಡಿನಲ್ಲಿ ಬಂದೊಡನೆ ಶಾಮ

ರಾವರ ನೆನಪಾಯಿತು, ಇಲ್ಲಿಗೆ ಧಾವಿಸಿ ಬಂದೆ. ಅವರಿಂದ ನನ್ನ ಗೆಳೆಯರ ಪತ್ತೆಯಾಗುವ ಆಶೆಯಿಟ್ಟುಕೊಂಡಿದ್ದೆ. ನೀವು ಅವರ ಸ್ನೇಹಿತರೇ ?" ಎಂದ.

"ಹೌದು. ನನಗೂ ಅವರಿಗೂ ಗೊಬ್ಬೂರಿನಲ್ಲೇ ಸ್ನೇಹವಾದುದು."

"ಸರಿ, ಸರಿ. ನೀವು ಇಲ್ಲಿಗೆ ಬಂದಿರೆಂದೇ ಅವರು ನಿಮಗೆ ಕೋಣೆಯನ್ನು ಕೊಟ್ಟಿರುವರು. ತಮ್ಮ ಹೆಸರು ?"

"ಅಣ್ಣಾಸಾಹೇಬ್."

"ಶಾಮರಾವ್‌ರ ನೆನಪಾಗಿ ಇಲ್ಲಿಗೆ ಬಂದೆ. ಒಂದು ವರ್ಷದ ಹಿಂದೆ ನಾವಿಬ್ಬರೂ ಸೇರಿ ಮಜಾ ಮಾಡುತ್ತಿದ್ದೆವು. ಈಗ ಅವರೂ ಇಲ್ಲ........"

"ಅವರಲ್ಲಿ ಮಹತ್ವದ ಕೆಲಸವಿತ್ತೆ ?"

"ಹೌದು. ನನ್ನ ದೃಷ್ಟಿಯಿಂದ ಮಹತ್ವದ ಕೆಲಸವಿತ್ತು. ಒಬ್ಬ ನಟಿ ನನ್ನ ಸ್ನೇಹಿತೆಯಾಗಿದ್ದಾಳೆ. ಅವಳೊಡನೆ ಒಂದು ಹೋಟಲಿಗೆ ನಾನು ಊಟಕ್ಕೆ ಹೋಗಬೇಕಾಗಿದೆ. ಆದರೆ ಅವಳದೊಂದು ಕರಾರಿದೆ: ಅವಳೊಡನೆ ಅವಳ ಸ್ನೇಹಿತೆಯೊಬ್ಬಳನ್ನು ಕರೆದು ತರುವದಾಗಿ ಹೇಳಿದ್ದಾಳೆ. ಅದೇನೋ ಸರಿ. ಆದರೆ, ಅವರು ಇಬ್ಬರು ನಾನು ಒಬ್ಬ ಸೇರಿ ಮೂವರು ಆಗುವೆವು. ಮೂರು ಜನರ ಗುಂಪು ಶುಭವಲ್ಲ. ಇರಲಿ, ನಿಮಗೇನಾದರೂ ರಾತ್ರಿ ಕೆಲಸವಿದೆಯೆ ?"

"ನಿದ್ದೆ ಮಾಡಬೇಕಾಗಿದೆ."

ಭಯಂಕರ ವಾರ್ತೆಯನ್ನು ಕೇಳಿದವನಂತೆ ಆಗಂತುಕನು ಬೆಚ್ಚಿಬಿದ್ದು, "ಮುಂಬಯಿ ನಗರದಲ್ಲಿ ಹತ್ತು ಗಂಟೆ ರಾತ್ರಿಗೆ ಮಲಗುವದೇ ? ನೀವೂ ನನ್ನೊಡನೆ ಬರಬಾರದೆ ? ತುಸು ತಿಂದು ಬಂದರಾಯಿತಲ್ಲ ?" ಎಂದ.

ಯಾರು ಏನೇ ಹೇಳಲಿ, ಅದಕ್ಕೆ ವಿರುದ್ಧವಾಗಿ ವರ್ತಿಸಿ ಅವರ ಮನ ನೋಯಿಸುವದು ರಾಜಾಸಾಹೇಬನಿಗೆ ಸರಿಯಾಗಿ ಕಾಣುತ್ತಿರಲಿಲ್ಲ. ಎಲ್ಲರೊಡನೆ ಹೊಂದಿಕೊಂಡು ಹೋಗುವ ಸ್ವಭಾವ ಅವನದು. ಹೊರಗೆ ಹೋಗುವದಾದರೆ ಬಟ್ಟೆ ಬೇರೆ ಬದಲಾಯಿಸಬೇಕಲ್ಲ ! ಅದು ಮಾತ್ರ ರಾಜಾಸಾಹೇಬನಿಗೆ ಬೇಡವಾಗಿತ್ತು. ಆದರೆ, ಆ ಎರಡೂ ಮೊಳಕಾಲುಗಳ ಮಧ್ಯದಲ್ಲಿಂದ ತೂರಿ ಬರುತ್ತಿದ್ದ ನೋಟದಲ್ಲಿ 'ಬರಲೇ ಬೇಕು' ಎಂಬ ದೀನ ಆಹ್ವಾನ ಕಾಣಿಸಿತು.

"ನಿಮ್ಮ ಆಮಂತ್ರಣಕ್ಕಾಗಿ ಥ್ಯಾಂಕ್ಸ್." ರಾಜಾಸಾಹೇಬ್ ತೊದಲಿದ.

"ಛೆ, ಥ್ಯಾಂಕ್ಸ್ ಯಾಕೆ? ನೀವು ನನ್ನ ಪ್ರಾಣವನ್ನೇ ಉಳಿಸಿದಿರಿ!"

ಹೊರಡದೆ ಬೇರೆ ದಾರಿಯೇ ಇಲ್ಲವೆಂದು ಕಾಣುತ್ತಲೂ ರಾಜಾಸಾಹೇಬ ತನ್ನ ಕುರ್ಚಿಯಿಂದ ಎದ್ದ.

"ಥ್ಯಾಂಕ್ಸ್, ಅಂತೂ ಹೊರಡುವಿರಲ್ಲವೇ? ಬೇಗ ಬಟ್ಟೆ ಬದಲಿಸಿರಿ. ಕ್ಷಮಿಸಿರಿ, ನಿಮ್ಮ ಹೆಸರೇ ಮರೆತು........"

"ಅಣ್ಣಾಸಾಹೇಬ."

"ನನ್ನ ಹೆಸರು ಕಮಲಾಕಾಂತ. ಕಮಲಾಕಾಂತ ಸರಕಾರ್."

"ಕಮಲಾಕಾಂತ ಸರಕಾರರೆ?" ಆಶ್ಚರ್ಯದಿಂದಲೇ ರಾಜಾಸಾಹೇಬ ಕೇಳಿದ. ಆತನ ಆಶ್ಚರ್ಯದ ಉದ್ಗಾರ ಕೇಳಿ ಕಮಲಾಕಾಂತನಿಗೂ ಅಚ್ಚರಿ ಯಾಯಿತು. ಆತ ತನ್ನನ್ನು ಹೊಗಳಿರಬೇಕೆಂದೇ ಭಾವಿಸಿಕೊಂಡು ಅವನು ತುಸು ನಾಚಿದ.

"ನೀವು ಶಾಮರಾವ್‌ರ ಗೆಳೆಯರೆಂದ ಮೇಲೆ ಅವರಿಂದ ನನ್ನ ಹೆಸರು ಕೇಳಿರಬಹುದು. ನಾನು ಮೊದಲು ಇಲ್ಲಿಯೇ ಸಮೀಪದಲ್ಲಿ ಇರುತ್ತಿದ್ದೆ. ಆಗ ಇಲ್ಲಿನವರಿಗೆಲ್ಲ ನಾನೆಂದರೆ ಪಂಚಪ್ರಾಣ, ಅಣ್ಣಾಸಾಹೇಬ್."

ಐದೇ ನಿಮಿಷಗಳ ಹಿಂದೆ ತನಗೆ ನಿದ್ರೆ ಬಂದಿತೆಂದು ತಿಳಿದಿದ್ದ ರಾಜಾ ಸಾಹೇಬನ ಕಣ್ಣುಗಳು ಈಗ ನಿಚ್ಚಳವಾಗಿದ್ದುವು. ತನ್ನ ದೈವಕ್ಕಾಗಿ ಹಿಗ್ಗಿದ. ಪ್ರಮೀಲಾ ಸರಕಾರಳ ಅಣ್ಣ ತಾನಾಗಿಯೇ ಆತನ ಕೋಣೆಗೆ ಬರುವದೆಂದರೆ ದೈವದ ಮಾತಲ್ಲವೇ? ಅವಳಿಂದ ಬಂದ ಪತ್ರವನ್ನು ಆತನು ಕೈಯಿಂದ ಮುಟ್ಟಿ ತಿರುಗಿ ಮೇಜಿನ ಮೇಲೆ ಇಟ್ಟಿದ್ದ. ಎಷ್ಟೊಂದು ಪ್ರಯತ್ನಿಸಿದರೂ ಅಂಥ ಘಟನೆ ಕೈಗೂಡುವ ಭರವಸೆಯಿರಲಿಲ್ಲ. ಕಮಲಾಕಾಂತನ ಈ ಅಲ್ಪ ಪರಿಚಯದ ಬಲದಿಂದ ಅವನ ಗೆಳೆತನ ಬೆಳಸಿಕೊಳ್ಳುವದು ಅಸಾಧ್ಯವೆಂದು ಅವನಿಗನ್ನಿಸಲಿಲ್ಲ. ಅವನ ಗೆಳೆತನ ಬೆಳಸಿಕೊಂಡು ಪ್ರಮೀಲೆಯೊಡನೆ ಉಪಾಯವಾಗಿ ಹಣದ ಮಾತು ಆಡಬಹುದು. ಹಣದ ಅರ್ಧ ಭಾಗವನ್ನು ಅವಳಿಗೆ ತಲುಪಿಸುವದನ್ನಂತೂ ಆತ ನಿರ್ಧರಿಸೇ ಬಿಟ್ಟಿದ್ದ. ಅದು ಪೂರ್ತಿ ಯಾಗದ ವಿನಾ ಅವನ ವಿವೇಕಕ್ಕೆ ಶಾಂತಿಯೆಲ್ಲಿಯದು? ತಾನು ಮಾಡುತ್ತಿ

ರುವುದು ಮೂರ್ಖತನವೆಂದು ಅನ್ನಿಸುತ್ತಿದ್ದಿತಾದರೂ ಮಾಡದೆ ಬಿಡುವ ಸ್ವಭಾವವೂ ಅವನದಾಗಿರಲಿಲ್ಲ.

ತನ್ನ ಬಾಳಿನಲ್ಲಿ ಕಮಲಾಕಾಂತ ಸರಕಾರ್ ಹೀಗೆ ಬಂದುದು ದೈವೀ ಪ್ರೇರಣೆಯಿಂದೇ ಆತ ಭಾವಿಸಿದ. ಪ್ರಮೀಲೆಯೊಡನೆ ಸದ್ಯಕ್ಕಂತೂ ಕೆಲಸ ಮುಗಿಯಲಿಲ್ಲವಲ್ಲ! ಇಂಥ ಶುಭ ಗಳಿಗೆಯು ತನಗಾಗಿ ಕಾದಿರುವಾಗ ಆತ ನಿದ್ರಿಸುವ ವಿಚಾರದಲ್ಲಿದ್ದನಲ್ಲ? ನಿದ್ರೆಹೋಗದಿದ್ದುದೇ ಒಳಿತಾಯಿತೆಂದುಕೊಂಡ. ಅವನ ಹೃದಯ ಹಗುರಾಯಿತು.

ಮುಂಬಯಿ ನಗರದಲ್ಲಿ ಯಾರನ್ನಾದರೂ ಊಟಕ್ಕೆ ಕರೆದರೆ ಹೋಟಲಿಗೆ ಹೋಗುವದೇ ರೂಢಿಯಾಗಿದೆಯೆನ್ನಬಹುದು. ಅದರಂತೆ ಅವರು 'ಸುಂದರ್ ಹೋಟಲಿ'ಗೆ ಹೋದರು. ಕಮಲಾಕಾಂತ ಮತ್ತು ರಾಜಾಸಾಹೇಬರೇ ಅಲ್ಲಿಗೆ ಮೊದಲು ತಲುಪಿದರು. ಕೆಲ ನಿಮಿಷಗಳ ನಂತರ ಕಮಲಾಕಾಂತನ ಸ್ನೇಹಿತೆ ಕುಮಾರಿ ಮತ್ತು ಅವಳ ಗೆಳತಿ ಲಲಿತಾ ಬಂದರು. ಅವರು ಬಂದೊಡನೆ ಅದೇಕೋ ರಾಜಾಸಾಹೇಬನಿಗೆ ಸಂಕೋಚವೆನಿಸಹತ್ತಿತು; ಅಸ್ವಸ್ಥನಾಗಿ ತನ್ನನ್ನು ತಾನೇ ಮರೆತವನಂತೆ ಅವನ ಸ್ಥಿತಿಯಾಯಿತು.

ಕುಮಾರಿ ಒಳ್ಳೆಯ ಆಟಗಾರ್ತಿಯೆಂದು ಕಮಲಾಕಾಂತನಿಂದ ತಿಳಿಯಿತು. ಆದರೆ ಅವಳ ದೇಹದ ಆಕೃತಿಯನ್ನು ನೋಡಿ ಅವಳು ಯಾವ ಆಟವನ್ನೂ ಚೆನ್ನಾಗಿ ಆಡಲಾರಳೆಂದೇ ರಾಜಾಸಾಹೇಬ್ ಅಭಿಪ್ರಾಯ ತಾಳಿದ. ಕುಮಾರಿಯ ಪಕ್ಕದಲ್ಲಿ ಲಲಿತಾ ಚಿಕ್ಕ ಮಗುವಿನಂತೆ ತೋರುತ್ತಿದ್ದಳು. ಕುಮಾರಿಯ ನಿಲುವೂ ಎತ್ತರ, ಗಾತ್ರವೂ ಅಗಲವಾದುದೇ! ವೇಷಭೂಷಣಗಳಲ್ಲೂ ಅವಳು ಆಸ್ಥೆ ವಹಿಸಿದಂತಿತ್ತು. ಪ್ರಶಾಂತವಾದ ಸರೋವರದ ನೀರನ್ನು ಒಂದು ಕಲ್ಲು ಅಲ್ಲೋಲ ಕಲ್ಲೋಲಗೊಳಿಸುವಂತೆ ತರುಣರ ಸಮುದಾಯದಲ್ಲಿ ಅಲ್ಲೋಲಕಲ್ಲೋಲವನ್ನೆಬ್ಬಿಸುವ ವ್ಯಕ್ತಿ ಅವಳು! ಅವಳ ದೇಹದಂತೆ ಅವಳ ಹಲ್ಲುಗಳೂ, ಅಷ್ಟೇ ಏಕೆ, ಧ್ವನಿಯೂ ದೊಡ್ಡವೇ. ಅವಳು ತನ್ನ ವೈಶಿಷ್ಟ್ಯದಿಂದ ರಾಜಾಸಾಹೇಬನನ್ನು ಅಸ್ವಸ್ಥನಾಗುವಂತೆ ಮಾಡಿದ್ದಳು. ಅವನು ಅಸ್ವಸ್ಥನಾಗಿರುವದನ್ನು ಕಂಡು ಅವನ ಕಿವಿಯಲ್ಲಿ ಏನೇನೋ ಹೇಳಹತ್ತಿದಳು. ಬಿರುಗಾಳಿಯೊಂದರ ಮಧ್ಯೆ ಸಿಕ್ಕು ಪಾರಾಗಿ ಬಂದವನಿಗೆ ಬೇರೆಯವರು ಕೂಗುವದು ಮುಸಕು ಮುಸಕಾಗಿ ಕೇಳುವಂತೆ ಅವಳ ಮಾತುಗಳೂ ಭಾಸವಾದವು.

ತುಸು ಸಮಯದಲ್ಲೇ ಸಾವರಿಸಿಕೊಂಡು,

"ಕ್ಷಮಿಸಿರಿ, ಏನೋ ಅಂದಿರಲ್ಲ ?" ಎಂದನಾತ.

"ನಿಮ್ಮನ್ನು ಈ ಹಿಂದೆ ನಾನೆಲ್ಲೋ ಕಂಡಿದ್ದೇನೆ, ಅಣ್ಣಾಸಾಹೇಬ್...."

"ಹೇಗೋ ?"

"ಎಲ್ಲಿ ಎಂಬುದು ನೆನಪಾಗುತ್ತಿಲ್ಲ."

"ನಾನು ಅವರನ್ನು ಕಂಡಿದ್ದರೆ ಎಂದಿಗೂ ಮರೆಯುತ್ತಿರಲಿಲ್ಲ." ಲಲಿತ ಮಾತಾಡಿದಳು.

"ನೀವು ಕನ್ನಡಿಗರಲ್ಲವೇ ?"

"ಹೌದು."

ಕನ್ನಡಿಗರೆಂದರೆ ತನಗೆ ಬಲು ಮೆಚ್ಚಿನವರೆಂದು ಕುಮಾರಿ ಹೇಳಿದಳು.

"ನಿಮ್ಮ ಮರಾಠಿ ಉಚ್ಚಾರದ ಮೇಲಿಂದಲೇ ತರ್ಕಿಸಿದೆ." ಎನ್ನುತ್ತ ಕನ್ನಡಿಗರ ಉಚ್ಚಾರಗಳ ಬಗೆಗೆ ಕುಮಾರಿ ಒಂದು ಭಾಷಣದ ಬಿರುಗಾಳಿ ಬೀಸಿದಳು.

"ಬಹಳ ಮಾಡಿ ನಿಮ್ಮನ್ನು ನಾನು ಗೊಬ್ಬೂರಿನಲ್ಲಿ ಕಂಡಿರಬೇಕು. ನಮ್ಮ ಸರ್ಕಸ್ ಕಂಪನಿ ಅಲ್ಲಿಗೆ ಬಂದಿತ್ತು. ಅಲ್ಲಿ ನಮ್ಮ ಪರಿಚಯದವರೆಂದರೆ ಭೋಸಲೆ. ಹಿಂದೆ ಅವರದೂ ಒಂದು ಸರ್ಕಸ್ ಕಂಪನಿಯಿತ್ತು. ಅವರು ಒಮ್ಮೆ ನಮ್ಮ ಕಂಪನಿಯವರನ್ನು ಊಟಕ್ಕೆ ಕರೆದಿದ್ದರು. ಅಲ್ಲಿಯೇ ನಿಮ್ಮನ್ನು ನಾನು ಕಂಡಿರಬೇಕು."

ಭೋಸಲೆಯವರ ಪರಿಚಯವೇ ತನಗಿಲ್ಲವೆಂದು ಹೇಳಿಬಿಡಬೇಕೆಂದು ರಾಜಾಸಾಹೇಬ್ ಒಂದು ಕ್ಷಣ ಯೋಚಿಸಿದರೂ ಅವನ ಪ್ರಾಮಾಣಿಕತನ ಅದ ಕ್ಕೊಪ್ಪಲಿಲ್ಲ. ಅಷ್ಟರಲ್ಲಿಯೇ ಕಮಲಾಕಾಂತ,

"ಎಲ್ಲಿಯಾದರೂ ಇರಲಿ ಬಿಡು ಕುಮಾರಿ. ಯಾವ ಟೇಬಲ್ ಆರಿಸೋಣ? ಇಲ್ಲೂ ಬದಲಾವಣೆಯಾದಂತಿದೆ. ನಾನು ಯಾವಾಗಲೂ ಆ ಮೂಲೆಯಲ್ಲಿರುತ್ತಿದ್ದ ಟೇಬಲ್ ಆರಿಸುತ್ತಿದ್ದೆ. ಅದೂ ಸಹ ಇಲ್ಲದಾಗಿದೆ. ಬಾಯ್ಜ್ ಬದಲಾಗಿದ್ದಾರೆ, ಕಾರ್ಪೆಟ್ ಕೂಡ ಬದಲಾಗಿದೆ. ಇಷ್ಟೆಲ್ಲ ಬದಲಾವಣೆಗಳನ್ನು ಏಕಕಾಲಕ್ಕೆ ಕಂಡುದು ನನ್ನ ಜೀವಮಾನದಲ್ಲೇ ಇದು ಮೊದಲು." ಎಂದ.

"ಕಮಲಾಕಾಂತ, ತುಸು ಧೈರ್ಯದಿಂದಿರು. ಮೊದಲು ತುಸು ತಿಂಡಿ ತಿನ್ನು. ಅಂದರೆ ನಿನ್ನ ಮನಸ್ಸು ಶಾಂತವಾಗುವದು. ಊಟಕ್ಕೆ ಕೂಡ್ರಲು ಒಂದು ಟೇಬಲ್ ಖಾಲಿಯಿಲ್ಲವಲ್ಲ. ಆಳಿಗೆ ನಾಲ್ಕಾಣೆ ಕೊಡದ ವಿನಾ ನಡೆಯು ಲಾರದು. ಈ ಹೋಟಲು ಪ್ರಾರಂಭವಾದ ಮೊದಲಲ್ಲಿ ನಾವು ಇಲ್ಲಿಗೆ ಬಂದಿದ್ದರೆ ಮಾಲಿಕರು, ಆಳುಗಳು, ಅಡುಗೆಯವರೆಲ್ಲರೂ ಬಾಗಿಲಿಗೆ ಬಂದು ಇದಿರುಗೊಂಡು ಕರೆಯುತ್ತಿದ್ದರು. ಆದರೆ ಇಂದು ನೋಡಬಾರದೇ, ನಮ್ಮ ಪರಿವೆಯೇ ಇಲ್ಲ. ಮುಂಬಯಿ ನಗರವೇ ಮಹಾ ವಿಚಿತ್ರ." ಕುಮಾರಿ ಹೇಳಿದಳು.

"ಅದಕ್ಕೆ ಕಾರಣವೇನು ?" ಕಮಲಾಕಾಂತ ಪ್ರಶ್ನಿಸಿದ.

"ಅದೂ ಗೊತ್ತಿಲ್ಲವೆ ? ಕಾಮನೂರ ಸರದಾರಿಣಿಯ ನೃತ್ಯವಿರುವದಲ್ಲವೆ ಇಲ್ಲಿ ?"

"ಅವಳ ಹೆಸರನ್ನೇ ಕೇಳಿಲ್ಲವಲ್ಲ ನಾನು ?" ಕಮಲಾಕಾಂತ ಆಚ್ಚರಿಯಿಂದ, "ಎಷ್ಟೆಲ್ಲ ಬದಲಾಗಿದೆ; ಅವಳಲ್ಲಿನ ವೈಶಿಷ್ಟ್ಯವೇನು ?" ಎಂದ.

ಕುಮಾರಿ ತನ್ನ ಲೌಡ್ ಸ್ಪೀಕರಿನಂಥ ಧ್ವನಿಯಲ್ಲಿ,

"ಕಮಲಾಕಾಂತ, ನೀನು ಹೋಗಿದ್ದ ಊರುಗಳಲ್ಲಿ ವರ್ತಮಾನ ಪತ್ರಗಳೇ ಬರುತ್ತಿರಲಿಲ್ಲವೆ ?" ಎಂದು ಕೇಳಿದಳು.

"ಅದನ್ನು ನಾನು ಓದುವದೇ ಇಲ್ಲ. ವರ್ತಮಾನಪತ್ರವನ್ನು ಓದಿ ಎಷ್ಟು ವರ್ಷಗಳಾದವೋ ? ಅದಿರಲಿ, ಅವಳ ವಿಷಯವೇನು ?"

"ಆವಳು ಭರತನಾಟ್ಯ ಮಾಡುತ್ತಾಳೆ. ಅವಳೇ ಹಾಗೆ ಅನ್ನುವಳೆಂದು ನಾನೂ ಅನ್ನುತ್ತಿರುವದು. ಆದರೆ ಅದರಲ್ಲಿ ಪಾಶ್ಚಾತ್ಯ ರೀತಿಯೇ ತುಂಬಿದೆ. ಅವಳೂ ಕರ್ನಾಟಕದ ಒಬ್ಬ ಸರದಾರರ ಹೆಂಡತಿ. ಈ ಪುರಾತನ ಕಾಲದ ಸರದಾರರ ಮನೆತನಗಳೆಂದರೆ ನನ್ನ ದೃಷ್ಟಿಯಲ್ಲಿ ಗೌರವವುಳ್ಳವುಗಳು."

ಅವರು ಊಟದ ಮೇಜಿನ ಸುತ್ತ ನೆರೆದರು. ಕುಮಾರಿಯನ್ನು ಕಂಡೊಡನೆ ತನ್ನ ಮನಸ್ಸಿನ ಮೇಲಾದ ಆಘಾತದಿಂದ ತಾನು ಸುಧಾರಿಸಿಕೊಳ್ಳಲಾರನೆಂದೇ ಊಟಮಾಡುವಾಗಲೂ ರಾಜಾಸಾಹೇಬನಿಗೆ ಅನ್ನಿಸುತ್ತಿದ್ದಿತು. ತಾನೊಂದು ಅಪರಿಚಿತ ಸ್ಥಳದಲ್ಲಿ ಕುಳಿತು ಅಲ್ಲಿ ನಡೆದಿದ್ದ ಮಾತುಕತೆ ಕೇಳುತ್ತ ಕೇವಲ ಒಂದು ಯಂತ್ರದಂತೆ ಊಟ ಮಾಡುತ್ತಿರುವದಾಗಿ ಆತ

ತಿಳಿದುಕೊಂಡಿದ್ದ. ತುಸು ಶಾಂಪೇನ್ ಮತ್ತು ಊಟ ಬಿದ್ದೊಡನೆ ತನಗೆ ಎಚ್ಚರ ಬರುತ್ತಿರುವಂತೆ ಅವನಿಗೆ ಭಾಸವಾಯಿತು. ಕಮಲಾಕಾಂತನಿಗೂ ಸ್ಫೂರ್ತಿ ಬಂದಂತಿತ್ತು. ಮೂರು ಫರ್ಲಾಂಗಿನ ಅಂತರದಿಂದ ನೀರು ತರುವದು, ಕಟ್ಟಿಗೆಯೊಡೆಯುವದು, ನೆಲದ ಕಲ್ಲುಗಳನ್ನು ತಿಕ್ಕುವದು, ಜೇನುಹುಳುಗಳ ಕಡಿತದಿಂದ ಪಾರಾಗಲು ಹಾರಾಡುತ್ತಿದ್ದುದನ್ನೆಲ್ಲ ಮರೆತು, ಆ ವಿದ್ಯುದ್ವೀಪ, ಹೊಟ್ಟೆಯನ್ನು ಸೇರಿದ್ದ ಶಾಂಪೇನ್ ಹಾಗೂ ರುಚಿಕರ ಊಟಗಳ ಆನಂದದಲ್ಲಿ ಹಿಂದೆ ತಾನು ಒಳ್ಳೆಯ ದಿನಗಳನ್ನು ಕಳೆದುವನ್ನು ಜ್ಞಾಪಿಸಿಕೊಳ್ಳುತ್ತಿದ್ದ. ಗ್ಲಾಸುಗಳನ್ನು ತುಂಬುತ್ತಲೂ ನಗೆ ಮಾತುಗಳನ್ನಾಡುತ್ತಲೂ ಆತ ಮೋಜಿನಲ್ಲಿದ್ದುದನ್ನು ನೋಡಿದರೆ ಅವನ ತಲೆಗೆ ಮದ್ಯವೇರಿತ್ತೆಂದು ಹೇಳಬಹುದಾಗಿತ್ತು.

ಲಲಿತೆ ಬರ್ಫದ ತುಂಡೊಂದನ್ನು ಕೈಲಿ ಹಿಡಿದು ಕಮಲಾಕಾಂತನ ಕುತ್ತಿಗೆಯ ಹಿಂಬದಿಗೆ, ಅಂಗಿಯ ಕಾಲರಿನಲ್ಲಿ ಇಳಿ ಬಿಟ್ಟಳು. ಅದನ್ನು ನೋಡಿದವರು ಅವಳು ಒಳ್ಳೆಯ ತಮಾಷೆಗಾರ್ತಿ ಎನ್ನುವಂತಿತ್ತು. ಕುಮಾರಿ ಮಾತ್ರ ಹೆಚ್ಚಿಗೆ ಮಾತಾಡದೆ ಯಾರನ್ನೋ 'ರಾಜಾ–ರಾಜಾ' ಎಂದು ಸಂಬೋಧಿಸುತ್ತಿದ್ದಳು.

ಇಲ್ಲಿಯ ತನಕ ರಾಜಾಸಾಹೇಬನ ಲಕ್ಷ್ಯವೇ ಅವಳತ್ತ ಹೋಗಿರಲಿಲ್ಲ. ಅವೆರಡು ಶಬ್ದಗಳಿಂದ ಅವನಿಗೆ ಎಚ್ಚರ ಬಂದಂತಾಗಿರಬೇಕು. ಕಮಲಾಕಾಂತ ಅವಳ ಪರಿಚಯ ಮಾಡಿಕೊಡುವಾಗ 'ಇಂಥ ಪ್ರಾಣಿಯನ್ನು ಹೊರಗೆ ತರಬಾರದು, ತಂದರೆ ಅಪಾಯ ' ಎಂದು ರಾಜಾಸಾಹೇಬ ಅಂದುಕೊಂಡಿದ್ದ. ಅಷ್ಟಕ್ಕೇ ಅವಳನ್ನು ಮರೆತುಬಿಟ್ಟಿದ್ದ. ಆದರೆ ಈಗ ಅವಳ ಬಗೆಗೆ ತುಸು ಕನಿಕರ ಬಂದಂತಾಗಿ ಧೈರ್ಯದಿಂದ ಸಿಗರೇಟು ಹೊತ್ತಿಸಿದ. "ಅವಳ ಈ ಸ್ಥೂಲ ದೇಹದ ವಿಷಯದಲ್ಲಿ ಅವಳ ತಪ್ಪೇನು ? ಅವಳ ತಂದೆ ತಾಯಿಗಳೂ ಸರ್ಕಸ್ಸಿನ ಸ್ಯಾಂಡೋಗಳಾಗಿರಬೇಕು. ಅವಳ ಮನೆತನದವರೆಲ್ಲ ಹಾಗೇ ಇದ್ದರೂ ಇರಬಹುದು. ಅವಳ ಸ್ವಭಾವದಲ್ಲಿನ ಕೊರತೆಗಳಿಗೂ ಅವಳು ಹೊಣೆಗಾರಳಲ್ಲ. ಅವಳಿಗೆ ಬಾಲ್ಯದಲ್ಲಿ ಅವಳ ತಂದೆ ತಾಯಿಗಳು ಸರಿಯಾದ ಶಿಕ್ಷಣ ಕೊಟ್ಟಿರಲಿಕ್ಕಿಲ್ಲ." ಎಂದೆಲ್ಲ ವಿಚಾರ ಬಂದು, ಅವಳ ಬಗೆಗೆ ಕನಿಕರವೆನಿಸಿದ್ದರೆ ಆಶ್ಚರ್ಯವೇನು ? ಆತ ಬಂಧುಪ್ರೇಮದಿಂದ ಅವಳನ್ನು ನೋಡಹತ್ತಿದ.

ಅವಳ ಸ್ಥೂಲ ದೇಹ ಅವಳ ಮಾತು ಆವನಿಗೆ ಪ್ರಿಯವಾಗಿ ಕಂಡವು. ಅವಳು ಆವನ ಕೈ ಚಪ್ಪರಿಸುತ್ತಿದ್ದುದೂ ಆವನಿಗೆ ಆನಂದವನ್ನುಂಟುಮಾಡಿತು. ಅಂತೆಯೇ ಅವಳು 'ರಾಜಾ' ಎಂದು ಅವನನ್ನು ಕರೆಯಬಹುದೆಂದೂ ಆತ ಹೇಳಿದ.

ಇದೇ ಸಮಯದಲ್ಲಿ ಬೇರೊಂದು ಮೇಜಿನ ಕಡೆಗೆ ತಟ್ಟೆ ಹೊತ್ತು ಕೊಂಡು ಹೋಗುತ್ತಿದ್ದ ಪ್ರಭಾಕರ ರಾಜಾಸಾಹೇಬನನ್ನು ಕಂಡ. ಪ್ರಭಾಕರ ಗೊಬ್ಬೂರಿನವನು. ಮನೆಯವರೊಡನೆ ಹೊಡೆದಾಡಿ ಯುದ್ಧ ಕಾಲದಲ್ಲಿ ಸೇನೆ ಯಲ್ಲಿ ಸೇರ್ಪಡೆಯಾಗಿದ್ದ. ಆರು ತಿಂಗಳಿನಲ್ಲಿಯೇ ಆ ಜೀವನಕ್ಕೆ ಬೇಸತ್ತು ಅಲ್ಲಿಂದ ಕಣ್ಮರೆಯಾಗಿದ್ದ. ಈಗ ಅವನು ಸುಂದರ್ ಹೋಟಲಿನಲ್ಲಿ ಮಾಣಿಯ ಕೆಲಸಕ್ಕಿದ್ದ. ಆವನೂ ರಾಜಾಸಾಹೇಬನೂ ಒಂದೇ ಕ್ಲಾಸಿನಲ್ಲಿ ಕಲಿತವರು. ಆರು ವರುಷಗಳಲ್ಲಿ ಗುರುತಿಸಲಾರದ ಬದಲಾವಣೆಯೇನೂ ರಾಜಾಸಾಹೇಬನ ಲ್ಲಾಗಿರಲಿಲ್ಲ. ತನ್ನ ಗೆಳೆಯನಾಗಿದ್ದವನೊಬ್ಬನು ಇಬ್ಬರು ಹುಡುಗಿಯರೊಂದಿಗೆ ಊಟಕ್ಕೆ ಬಂದಿರುವಾಗ ತಾನು ಬಡಿಸುತ್ತಿರುವವನ್ನು ಯೋಚಿಸಿ ಪ್ರಭಾಕರನಿಗೆ ಕೆಡುಕೆನ್ನಿಸಿರಬೇಕು. ರಾಜಾಸಾಹೇಬನನ್ನು ನೋಡಿ ಗುರುತಿಸಿದ ಪ್ರಭಾಕರ ನಿಗೆ ತಾನು ಮನೆಯವರೊಡನೆ ಜಗಳವಾಡಿದುದೂ ದಂಡು ಸೇರಿ ಆಲ್ಲಿಂದ ಓಡಿ ಬಂದುದೂ ನೆನಪಾಗಿ ತನ್ನ ಈಗಿನ ಜೀವನಕ್ಕಾಗಿ ಹೇಸುಕೆಯೆನ್ನಿಸಿತು. ರಾಜಾಸಾಹೇಬನ ಪಕ್ಕದಲ್ಲಿ ಹಾಯ್ದು ಹೋಗುತ್ತಿದ್ದ ಅವನ ಕಣ್ಣುಗಳಿಗೆ ಕತ್ತಲು ಕವಿದಿರಬೇಕು. ಕೈಯಲ್ಲಿನ ತಟ್ಟೆ ಕುರ್ಚಿಗೆ ತಾಕಿ ನೆಲಕ್ಕೆ ಬಿತ್ತು. ಅದರಲ್ಲಿದ್ದ ಸಾರು ಪಲ್ಯಗಳೆಲ್ಲ ಹಾರಿ ರಾಜಾಸಾಹೇಬ, ಲಲಿತಾ ಮತ್ತು ಕುಮಾ ರಿಯರ ಬಟ್ಟೆಗಳನ್ನು ಮುದ್ದಿಟ್ಟವು. ಚೀನಾಮಣ್ಣಿನ ಪಾತ್ರೆಗಳೂ ಒಡೆದು ತುಂಡು ತುಂಡಾದವು. ಪ್ರಭಾಕರನೂ ಒಂದು ಕಡೆಗೆ ಬಿದ್ದುಬಿಟ್ಟ. ಊಟ ಮುಗಿಸಿ ಕುಳಿತಿದ್ದ ರಾಜಾಸಾಹೇಬನೇ ಅವನನ್ನೆಬ್ಬಿಸಿ ಮುಖಕ್ಕೆ ನೀರು ತಟ್ಟಿದ. ಇನ್ನುಳಿದ ಕೆಲಸಗಾರರು ಧಾವಿಸಿ ಬಂದು ಪ್ರಭಾಕರನನ್ನು ಕರೆದೊಯ್ದರು.

ತಾನು ಹುಡುಗಿಯರ ಸಹವಾಸದಲ್ಲಿದ್ದ ಈ ದೃಶ್ಯವನ್ನು ತನ್ನ ಪರಿಚ ಯದ ಪ್ರಭಾಕರ ನೋಡಿದನೇನೋ ಸರಿಯೆ. ಆದರೆ ಸುಶೀಲಾರಾಣಿ ಕಂಡಿದ್ದರೆ ಎಂಥ ಪ್ರಸಂಗವಾಗುತ್ತಿತ್ತು ? ಮುನ್ನೂರು ಮೈಲುಗಳಾಚೆ ಇರುವ ಅವಳು

ನೋಡುವವಾದರೂ ಸಾಧ್ಯವೇ ? ಎಂದು ಸಮಾಧಾನ ತಂದುಕೊಂಡು ಈಗ ಸುಶೀಲಾರಾಣಿ ಏನು ಮಾಡುತ್ತಿರಬಹುದು ? ಎಂದೂ ಕ್ಷಣ ಕಾಲ ರಾಜಾ ಸಾಹೇಬ ಯೋಚಿಸಿದ.

ಪಾಪ! ಅವನಿಗೇನು ಗೊತ್ತು, ಆಗ ತಾನೇ ಕಾಮನೂರಿನ ಸರದಾರಿಣಿಯೊಡನೆ ಬಂದಿದ್ದ ಸುಶೀಲಳೂ, ಆ ಹುಡುಗಿಯರನ್ನೂ ಆಳು ಬಿದ್ದ ದೃಶ್ಯವನ್ನೂ ಕಂಡಿದ್ದಳೆಂಬುದು ? ಅವಳಿದ್ದ ಕೋಣೆಗೂ ಅವರಿದ್ದ ಮೇಜಿಗೂ ಗೋಡೆ ಅಡ್ಡವಾಗಿದ್ದಿತೆಂಬುದು ಅವನಿಗೆ ತಿಳಿದಿರಲಿಲ್ಲ.

## 2

ಸುಂದರ್ ಹೋಟಲು ಮತ್ತು ರೆಸ್ಟಾರೆಂಟ್‌ನಲ್ಲಿ ತಾನಿದ್ದ ಸಮಯದಲ್ಲಿಯೇ ಸುಶೀಲಾರಾಣಿಯೂ ಇದ್ದುದು ರಾಜಾಸಾಹೇಬನಿಗೆ ಗೊತ್ತಾಗದಿರಲು ಕಾರಣಗಳಿದ್ದುವು. ಆ ಕಟ್ಟಡಕ್ಕೆ ಐದು ಮಹಡಿಗಳು. ನಡುಮಧ್ಯ ಎಲ್ಲರಿಗೂ ಕಾಣುವಂತೆ ನೃತ್ಯಶಾಲೆಯಿತ್ತು. ಪ್ರತಿ ಮಹಡಿಯ ಕೆಳಕ್ಕೆ ಜನರು ಕೂಡ್ರಲು ಕುರ್ಚಿಗಳಿದ್ದವು. ವರ್ತುಲಾಕಾರವಾದ ಹೋಟಲು. ವರ್ತುಲಾಕಾರವಾದ ನೃತ್ಯಶಾಲೆ, ಪ್ರತಿ ಮಹಡಿಗೂ ವರ್ತುಲಾಕಾರವಾಗಿ ಎರಡು ಫೂಟು ಎತ್ತರದ ಬಾಲ್ಕನಿ ನಮೂನೆಯ ಗೋಡೆಗಳು. ಆಳುಗಳು ತಟ್ಟೆಗಳನ್ನು ಚೆಲ್ಲಿದಾಗ ನೆಲಕ್ಕೆ ಬಿದ್ದ ಸಾರು ಕೆಳಗಿನ ಮಹಡಿಯವರ ತಲೆಯ ಮೇಲೂ ಬೀಳದಿರಲೆಂದು ಹಾಗೆ ಬಾಲ್ಕನಿ ಗೋಡೆಗಳನ್ನು ಕಟ್ಟಲಾಗಿತ್ತು. ಎಲ್ಲಕ್ಕೂ ಮೇಲಿನ ಮಹಡಿಯ ಮೇಲೆ ಸುಶೀಲಾ ಇದ್ದಳು. ಮೂರನೆಯ ಮಹಡಿಯ ಮೇಲೆ ರಾಜಾಸಾಹೇಬನಿದ್ದ. ರಾಜಾಸಾಹೇಬನ ಮೇಜು ಸುಶೀಲಾ ನಿಂತ ಸ್ಥಳದ ಕೆಳಕ್ಕಿದ್ದರೂ ಪ್ರಭಾಕರ ಬಿದ್ದುದು ಬಾಲ್ಕನಿಯ ಒಳ ಮಗ್ಗಲಿಗಿದ್ದ ದಾರಿಯಲ್ಲಿ. ಪ್ರಭಾಕರ ಕಾಣಿಸುವಂತೆ ಸುಶೀಲಾ ನಿಂತಿದ್ದಳೇನೋ ನಿಜ, ಆದರೆ ಮೇಜಿನ ಮಹಡಿಗಳಿಗೆ ಆಧಾರವಾಗಿದ್ದ ಗೋಡೆಯು ರಾಜಾಸಾಹೇಬನನ್ನು ಮರೆ ಮಾಡಿತ್ತು. ಅಂದ ಮೇಲೆ ಅವಳು ಅಲ್ಲಿದ್ದುದು

ಅವನಿಗೆ ಗೊತ್ತಾಗುವದು ಹೇಗೆ? ಸುಶೀಲೆ ತನ್ನ ಗೆಳತಿಯಾದ ಕಾಮನೂರ ಸರದಾರಿಣಿ ಮತ್ತು ರೈಲಿನಲ್ಲಿ ಪರಿಚಿತನಾದ ವಿಲಾಸರಾಯರೊಡನೆ ಬಂದಿದ್ದಳು. ಆ ಸರದಾರಿಣಿಯ ಜೊತೆಯಲ್ಲಿ ಸುಶೀಲಳನ್ನು ಕಂಡಿದ್ದರೆ ರಾಜಾಸಾಹೇಬನಿಗೆ ಆನಂದವಾಗದಿರುತ್ತಿದ್ದಿಲ್ಲ. ಭರತನಾಟ್ಯ ರಾಣಿಯ ಸಹವಾಸವಲ್ಲವೆ? ಕಮಲಾಕಾಂತ ಎರಡನೆಯ ಬಾಟಲಿಗೆ ಕೈಹಾಕುತ್ತಿದ್ದ ಸಮಯದಲ್ಲೇ ಸುಶೀಲೆ ಆ ಹೋಟಲಿನಲ್ಲಿ ಕಾಲಿರಿಸಿದ್ದಳು.

ಗೊಬ್ಬೂರಿನಿಂದ ಹೊರಟು ಮುಂಬಯಿ ಸೇರುವ ತನಕ ಗಾಡಿಯಲ್ಲಿ ಸುಶೀಲಳಿಗೆ ನಾನಾ ಬಗೆಯ ಅನುಭವಗಳಾಗಿದ್ದವು. ಮಹತ್ವದ ಅನುಭವವೆಂದರೆ ಮೋಟಾರ್ ಮಾರಾಟದ ಎಜಂಟ್ ವಿಲಾಸರಾಯನ ಗೆಳೆತನ. ಅವನದು ಮಧ್ಯಮ ವಯಸ್ಸು. ಆತ ತನ್ನ ಸ್ವಂತ ಶ್ರಮದಿಂದ ಲಕ್ಷಾಂತರ ರೂಪಾಯಿ ಗಳಿಸಿಕೊಂಡಿದ್ದ, ಮೋಟಾರ್ ಕಾರಿನ ಮಾರಾಟದಲ್ಲಿ ಸಿಕ್ಕಿದ ಕಮೀಶನ್ನಿನಿಂದ. ಎಲ್ಲರೂ ಅವನನ್ನು ಹೊಗಳುವವರೇ. ಅವನೂ ತನ್ನನ್ನು ಹೊಗಳಿಕೊಳ್ಳುತ್ತಿದ್ದ. ಪತ್ರಿಕೆಗಳಲ್ಲೂ ಅವನ ವಿರುದ್ಧವಾಗಿ ಏನೂ ಪ್ರಕಟವಾಗಿರಲಿಲ್ಲ. ಪ್ರವಾಸದಲ್ಲಿ ಸುಶೀಲಾರಾಣಿಯೊಡನೆ ಅವನು ಸಲಿಗೆಯಿಂದಲೆ ವರ್ತಿಸುತಿದ್ದನಾದುದರಿಂದ ಅವಳೂ ಅವನೊಡನೆ ಸಂಕೋಚವಿಲ್ಲದೆ ಮಾತನಾಡಿದ್ದಳು. ಅವಳನ್ನು ಕಂಡ ಕ್ಷಣದಲ್ಲಿಯೇ ಅವನಲ್ಲಿ ಪ್ರೇಮೋದಯವಾಗಿತ್ತೆನ್ನಬಹುದು.

ಒಬ್ಬ ಲಕ್ಷಾಧೀಶ್ವರನು ತಮ್ಮನ್ನು ಪ್ರೀತಿಸುತ್ತಿರುವನೆಂದು ಗೊತ್ತಾದರೆ ತಾವು ಮುಂದೆ ಹೇಗೆ ವರ್ತಿಸಬೇಕೆಂಬುದು ಈಗಿನ ಕಾಲದ ಶಾಲಾಬಾಲಿಕೆಯರಿಗೂ ಗೊತ್ತಿರುವ ಮಾತಾಗಿದೆ. ಆದರೂ ಸುಶೀಲೆ ಹಿಂಜರಿಯುತ್ತಿದ್ದಳು. ಅದಕ್ಕೆ ಕಾರಣ ರಾಜಾಸಾಹೇಬನೇ. ರಾಜಾಸಾಹೇಬನ ಬಗೆಗೆ ಅವಳು ವಿಲಾಸರಾಯನ ಮುಂದೆ ಮಾತಾಡಿರಲಿಲ್ಲ. ಅವನು ಕೊಟ್ಟಿದ್ದ ಉಂಗುರವನ್ನೂ ಅವಳು ತೆಗೆದಿರಿಸಿದ್ದಳು. ಅದನ್ನು ಕಂಡರೆ ವಿಲಾಸರಾಯನಿಗೆ ವ್ಯಸನವಾಗಲಾರದೇ? ರಾಜಾಸಾಹೇಬನ ಕೂಡ ಅವಳ ಲಗ್ನ ನಿಶ್ಚಯವಾದುದನ್ನು ಅವಳು ಮರೆಯುವದಾದರೂ ಹೇಗೆ? ಇನ್ನೊಂದು ವಿಷಯವೂ ಅವಳು ಹಿಂಜರಿಯಲು ಕಾರಣವಾಗಿತ್ತು. ವಿಲಾಸರಾಯ ಶ್ರೀಮಂತನೇನೋ ಹೌದು, ಆದರೆ ಅವನಲ್ಲಿ ಆಕರ್ಷಕವಾದುದು ಅಥವಾ ರೋಮಾಂಚಕಾರಿ

ಯಾದುವೇನೂ ತೋರುತ್ತಿರಲಿಲ್ಲ. ಅಷ್ಟೇ ಏಕೆ, ಅವನ ಸಹವಾಸದಿಂದಾಗಿ ತುಸು ಬೇಸರವೂ ಬಂದಿತ್ತು. ಈವರೆಗಿನ ಅವರಿಬ್ಬರ ಸಂವಾದದಲ್ಲಿ ಅವನು ಮಾತಾಡಿದ್ದುದು ಕೇವಲ ಮೋಟರುಕಾರುಗಳ ವಿಷಯವಷ್ಟೆ.

ಮೋಟರು ಕಾರುಗಳ ವಿಷಯದಲ್ಲಿ ಸುಶೀಲಳ ಕಲ್ಪನೆಯೇ ಬೇರೆಯಾಗಿತ್ತು. ಅದೊಂದು ಸುಂದರವಾದ ವಸ್ತು, ಅದರಲ್ಲಿ ಕುಳಿತು ವಾಯುವಿಹಾರಕ್ಕೆ ಹೋಗಬಹುದು, ಅದರಿಂದಾಗಿ ಕಾರುಗಳಿದ್ದ ಬೇರೆಯವರ ಪರಿಚಯವಾಗಬಹುದು! ಅದಕ್ಕೂ ಹೆಚ್ಚಿಗೆ ತಿಳಿದುಕೊಳ್ಳಬೇಕಾದ ಅವಶ್ಯಕತೆಯೂ ಅವಳಿಗಿರಲಿಲ್ಲ. ವಿಲಾಸರಾಯನದು ತೀರ ವಿರುದ್ಧ ರೀತಿ. ಸರ್ಜನ್‌ನೊಬ್ಬನಿಗೆ ಮನುಷ್ಯದೇಹದ ವಿವರಗಳನ್ನು ತಿಳಿದುಕೊಳ್ಳುವ ಆಸ್ಥೆಯಿರುವಂತೆ ಅವನಿಗೆ ಕಾರುಗಳ ಬಗೆಗಿತ್ತು. ಕಾರಿನ ಪ್ರತಿಭಾಗವನ್ನು ಬಿಚ್ಚಿ ತೋರಿಸಿ ಅವುಗಳ ಬಗ್ಗೆ ಮಾತನಾಡುವದೆಂದರೆ ಅವನಿಗೆ ಬಲು ಹಿಗ್ಗು. ಅವನ ಈ ಮಾತುಗಳನ್ನು ಅವಳು ಆಸ್ಥೆಯಿಂದಲೇ ಕೇಳುತ್ತಿದ್ದಳಾದರೂ ಅವನೊಡನೆ ಲಗ್ನವಾಗಿ ಜೀವನವಿಡಿ ಅದನ್ನೇ ಕೇಳಲು ಅವಳು ಸಿದ್ಧಳಿರಲಿಲ್ಲ. ಹಣವಿರಬಹುದು ಅವನಲ್ಲಿ, ಆದರೆ ಅವನ ಆ ಮಾತು ಕೇಳುತ್ತ ಕುಳಿತಿರಲು ಆ ಹಣ ಸಹಾಯಕವಾಗಲಾರದು. ಇಂಥವನ ಬಗ್ಗೆ ನಿರ್ದಿಷ್ಟವಾದ ನಿರ್ಣಯಕ್ಕೆ ಬರಲು ಅವಳಿಂದ ಅಸಾಧ್ಯವಾಗಿತ್ತು. ಅದೇ ಗೊಂದಲದಲ್ಲಿದ್ದಾಗಲೇ ಅವರು ಹೋಟಲಿನಲ್ಲಿ ಕಾಲಿರಿಸಿದುದು. ಅವನು ಈ ಮಹತ್ವದ ವಿಷಯವನ್ನೇ ಎತ್ತಿ ಮಾತಾಡಿದರೆ ತಾನೇನು ಉತ್ತರ ಕೊಡಬೇಕು ಎಂದು ಅವಳು ಯೋಚಿಸಹತ್ತಿದಳು. ಹೋಟಲಿನಲ್ಲಿ ಬಂದು ಕುಳಿತ ನಂತರದ ಅವನ ಮಾತುಗಳ ರೀತಿಗಳನ್ನು ನೋಡಿದರೆ, "ನನ್ನನ್ನು ಲಗ್ನವಾಗುವಿಯಾ.?" ಎಂದು ವಿಲಾಸರಾಯ ಕೇಳಬಹುದೆಂದು ಅವಳಿಗೆನ್ನಿಸದಿರಲಿಲ್ಲ.

ಕಾಮನೂರಿನ ಸರದಾರಿಣಿಯು ಇದ್ದಳೆಂದೇ ಅವನು ಆ ಮಾತುಗಳನ್ನು ತಡೆದಿರಬೇಕು. ಅವರು ಮೂವರೂ ತಮ್ಮ ಸ್ಥಾನಗಳನ್ನಾಕ್ರಮಿಸಿದ್ದರು. ನೃತ್ಯಶಾಲೆಯಲ್ಲಿ ವಾದ್ಯಮೇಳದವರು ಸಂಗೀತಕ್ಕಾರಂಭಿಸಿದ್ದರು. ಜನ ತುಂಬಿದೊಡನೆ ನೃತ್ಯಶಾಲೆಯಲ್ಲಿನ ದೀಪವು ಕೆಂಪು ವರ್ಣ ತಾಳಿತು. ಅದರೊಂದಿಗೆ ಗಿರಾಕಿಗಳ ಚಪ್ಪಾಳೆಯ ಸದ್ದೂ ಕೇಳಬಂದಿತು.

"ನಾನು ಶಾಸ್ತ್ರೋಕ್ತವಾದ ಭರತನಾಟ್ಯವನ್ನು ಇದೇ ನೃತ್ಯಶಾಲೆಯಲ್ಲಿ

ಪ್ರಯೋಗಿಸಿದ್ದೇನೆ. ನಾನೇ ಕೆಲ ನೃತ್ಯಗಳನ್ನು ಶೋಧ ಮಾಡಿ ಕುಣಿದು ತೋರಿಸಿದ್ದೇನೆ." ಸರದಾರಿಣಿ ಹೇಳಿದಳು.

ಅವಳು ಶಾಸ್ತ್ರೋಕ್ತವಾದ ಯಾವುದನ್ನೂ ಕಲಿತಿರಲಿಲ್ಲವೆಂಬುದು ಸುಶೀಲೆ ಅರಿತಿದ್ದ ಸಂಗತಿ; ಆಕೆಯಲ್ಲಿ ಶಾಸ್ತ್ರೋಕ್ತವಾದ ಯಾವ ಗುಣವೂ ಇರಲಿಲ್ಲ!

"ನಾನು ನೃತ್ಯವನ್ನಾರಂಭಿಸುವ ಸಮಯವಾಯಿತು. ಈಗ ನುಡಿಸಲಾಗುತ್ತಿರುವ ಹಾಡನ್ನು ನಾನೇ ಜೋಡಿಸಿದ್ದೇನೆ." ಎನ್ನುತ್ತ ಅವಳು ನೃತ್ಯಶಾಲೆಗೆ ಹೋದಳು. ವರ್ತುಲಾಕಾರವಾದ ವಿಶಾಲ ನೃತ್ಯಶಾಲೆಯಲ್ಲಿ ಮಧ್ಯೆ ನಿಂತು ನಾಟ್ಯಭಂಗಿಯಲ್ಲಿ ಎಲ್ಲರಿಗೂ ನಮಸ್ಕರಿಸಿ ನೃತ್ಯಕ್ಕಾರಂಭಿಸಿದಳು. ಬಟ್ಟೆಯಿಲ್ಲದ ತೋಳುಗಳು; ಹಾಲಿವುಡ್ ನಟಿಯರಂತೆ ಕುಚಗಳನ್ನು ಮೇಲಕ್ಕೆತ್ತಿ ಕಟ್ಟಿಕೊಂಡಿದ್ದಳು. ಅದಷ್ಟು ಭಾಗ ಬಿಟ್ಟು ನಡುವಿನ ತನಕ ಇನ್ನುಳಿದ ದೇಹ ಬರಿದು. ಕೆಳಗೊಂದು ಅಗಲವಾದ ಲಂಗ. ಒಮ್ಮೆ ಗಿರಿ ಗಿರಿ ತಿರುಗಿದೊಡನೆ ಲಂಗದ ನಿರಿಗೆಗಳು, ಏರಿಸಿಹಿಡಿದ ಕೊಡೆಯಂತೆ ಮೇಲಕ್ಕೆದ್ದು, ಬಾಳೆಯ ಕಂಬಗಳಂತಿದ್ದ ಅವಳ ತೊಡೆಗಳು ಪ್ರೇಕ್ಷಕರ ದೃಷ್ಟಿಯನ್ನು ಸೆಳೆಯುತ್ತಿದ್ದವು. ಆ ಬಣ್ಣ, ತಿರುಗುವ ಕೈ, ಎತ್ತಿದ ಕಾಲು, ಮುಖದಲ್ಲಿನ ಮೋಹಕ ನೋಟಗಳೇ ಎಲ್ಲರ ಮನಸ್ಸನ್ನೂ ಸೂರೆಗೊಳ್ಳುತ್ತಿದ್ದವೆಂಬುದು ಸುಶೀಲಳಿಗೆ ಗೊತ್ತಾಗದಿರಲಿಲ್ಲ. ಅವಳು ಕುಣಿದ ನೃತ್ಯಕ್ಕೆ ಭರತ ನಾಟ್ಯವೆನ್ನುವುದಾದರೆ ಭಾರತದಲ್ಲಿ ನೃತ್ಯಕಲೆಯಿದ್ದುದೇ ಸುಳ್ಳಾಗಿರಬೇಕೆಂದು ಸುಶೀಲೆ ಅಭಿಪ್ರಾಯ ತಾಳಿದಳು. ಇಂಥ ಕಾರ್ಯಕ್ರಮ ಕಂಡುದು ಅವಳ ಜೀವಮಾನದಲ್ಲೇ ಇದು ಮೊದಲಸಲ. ಅವಳಿಗೆ ಅಚ್ಚರಿಯೂ ಆಗಿತ್ತು. ನರ್ತಕಿಯನ್ನೇ ಏಕಾಗ್ರಚಿತ್ತದಿಂದ ನೋಡುತ್ತಿದ್ದಳು. ನೃತ್ಯ ಅರ್ಧ ಮೆಟ್ಟಿಲನ್ನು ದಾಟಿತ್ತು. ನರ್ತಕಿಯು ಕಣ್ಣು ಮಿಟುಕಿಸಿದರೆ ಸಾಕು, ಪ್ರೇಕ್ಷಕ ವರ್ಗದಲ್ಲಿ, 'ಶಹಬ್ಬಾಸ್,—ವಾಹವ್ವಾ,—ಬ್ಯೂಟೀಫುಲ್,—ವಂಡರಫುಲ್' ಎಂಬ ಉದ್ಗಾರಗಳು—ಅದರೊಡನೆ ಚಪ್ಪಾಳೆಗಳು. ಹೀಗೆ ಸುಶೀಲೆ ನೃತ್ಯದಲ್ಲಿ ತಲ್ಲೀನಳಾಗಿದ್ದಾಗ ವಿಲಾಸರಾಯ ಅವಳ ಕಿವಿಗಳಲ್ಲಿ ಉಸುರುತ್ತಿದ್ದ: "ನೀನು ನನ್ನನ್ನು ಲಗ್ನವಾಗುವಿಯಾ?"

ವಿಲಾಸರಾಯನಿಂದ ಆ ಪ್ರಶ್ನೆಯನ್ನು ಅವಳು ನಿರೀಕ್ಷಿಸಿದ್ದುದೇನೋ ನಿಜ. ಆದರೆ ಅದಕ್ಕೆ ತಾನು ಕೊಡಬೇಕಾದ ಉತ್ತರವನ್ನು ಅವಳು ನಿರ್ಧರಿಸಿರಲಿಲ್ಲ.

ಅಂತೆಯೇ ಅವಳು ಮೌನ ತಾಳಿದ್ದಳು. ವಿಲಾಸರಾಯ ಅದೇ ಪ್ರಶ್ನೆಯನ್ನು ಪದೇ ಪದೇ ಮೆಲುಕು ಹಾಕುತ್ತಿರುವಾಗಲೇ ಪ್ರೇಕ್ಷಕರ ಚಪ್ಪಾಳೆಯ ಕಡ ಕಡಾಟ ಕೇಳಿಸಿತು. ಅವರಿಬ್ಬರೂ ಎಚ್ಚತ್ತು ಸುಧಾರಿಸಿಕೊಂಡರು. ಸರದಾರಿಣಿಯು ತೇಕುತ್ತ ಮೇಲೆ ಬಂದಳು.

"ಇದಕ್ಕಾಗಿಯೇ ಅವರು ನಾನು ಬೇಡಿದಷ್ಟು ಹಣ ಕೊಡುತ್ತಿರುವರು. ನಿನ್ನಿಂದ ಸಾಧ್ಯವೇ ಅದು?" ಎಂದು ಸರದಾರಿಣಿ ಸುಶೀಲಳನ್ನು ಕೇಳಿದಳು.

ಎಲ್ಲರೂ ವಾಸ್ತವ ಪ್ರಪಂಚಕ್ಕೆ ಬಂದರು. ವಿಲಾಸರಾಯ ಕುರ್ಚಿಗೆ ಆತು ಕುಳಿತ. ಸುಶೀಲೆ ಗೆಳತಿಯ ಕುಣಿತವನ್ನು ಪ್ರಶಂಸಿಸುತ್ತಿದ್ದರೂ ಅವಳ ಮನಸ್ಸು ವಿಲಾಸರಾಯನಿಗೆ ಕೊಡಬಹುದಾದ ಉತ್ತರವನ್ನೇ ಶೋಧಿಸುತ್ತಿತ್ತು. ಇನ್ನೊಮ್ಮೆ ತಾವಿಬ್ಬರೂ ಒಂದೆಡೆ ಸೇರುವ ಮೊದಲೇ ಉತ್ತರ ಹುಡುಕಿಕೊಂಡಿರಬೇಕೆಂದು ನಿರ್ಧರಿಸಿಕೊಂಡಳು.

ಸರದಾರಿಣಿಯು ತುಸು ಕಾಫಿ ಸೇವಿಸಿ ಮಾತಿಗೆ ಪ್ರಾರಂಭಿಸಿದಳು:

"ಸುಶೀಲಾ, ಈಗ ತಾನೇ ಸರದಾರರ ಫೋನ್ ಬಂದಿತ್ತು."

"ಹೇಗೋ?"

ಸುಶೀಲೆ ವಿಲಾಸರಾಯನನ್ನು ತನ್ನ ಚಂಚಲ ಕಣ್ಣುಗಳಿಂದ ಶೋಧಿಸಿ ನೋಡುವದರಲ್ಲಿ ತಲ್ಲೀನಳಾಗಿದ್ದಳು. ಅವನು ಸುಂದರನಾಗಿರಲಿಲ್ಲ. ಅವನಲ್ಲಿ ವಿಶೇಷ ಆಕರ್ಷಣೆಯೂ ಕಂಡುಬರುತ್ತಿರಲಿಲ್ಲ. ಅವನ ದೇಹ ಸ್ಥೂಲವಾದರೂ ಬೊಜ್ಜು ಬರುವ ಲಕ್ಷಣಗಳಿರಲಿಲ್ಲ. ಕೂದಲು ತುಸುವೇ ಇದ್ದರೂ ಆತ ಬೋಳು ತಲೆಯವನಾಗಿರಲಿಲ್ಲ. ಮುಖ ನಿಸ್ತೇಜವಾಗಿದ್ದರೂ ಮೂರ್ಖನಂತಿರಲಿಲ್ಲ. ಅವನಲ್ಲಿದ್ದ ಲಕ್ಷಾಂತರ ರೂಪಾಯಿಗಳನ್ನು ಬಿಟ್ಟರೆ ಅವನ ಶರೀರದಲ್ಲಿ ಮನ ಸೆಳೆಯುವ ಯಾವ ವೈಶಿಷ್ಟ್ಯವೂ ಇರಲಿಲ್ಲ. ಕೇವಲ ಮಾತಿನಲ್ಲಿಯೂ ಮೋಹಕತೆಯಿರಲಿಲ್ಲ. ತಾನೊಪ್ಪಬಹುದಾದ ದೇಹ ಸೌಂದರ್ಯವಾಗಲಿ, ಆಂತರಿಕ ಸೌಂದರ್ಯವಾಗಲಿ ವಿಲಾಸರಾಯನಲ್ಲಿ ಕಂಡುಬರದಿದ್ದರೂ ಕೇವಲ ಅವನಲ್ಲಿದ್ದ ಹಣಕ್ಕೆ ಆಸೆಪಟ್ಟು, ರಾಜಾಸಾಹೇಬನನ್ನು ತಿರಸ್ಕರಿಸಿ, ಆತನನ್ನು ಲಗ್ನವಾಗುವುದು ನಗೆಗೀಡಾದ ಮಾತಾದೀತು ಎಂಬ ವಿಚಾರ ಬಂದು ವಿಲಾಸರಾಯನಿಗೆ ಉತ್ತರ ಕೊಡಲು ತುಸು ಹಿಂದೆ ಸರಿದಿದ್ದಳು. ಒಂದು ವೇಳೆ ವಿಲಾಸರಾಯನನ್ನೇ ಲಗ್ನವಾದರೆ ತನ್ನ ಸ್ವಾಭಿಮಾನಕ್ಕೆ ಅದೊಂದು ಕಳಂಕ

ವೆಂದೂ ಅವಳು ಯೋಚಿಸುತ್ತಿದ್ದಳು.

"ಅವರು ಬಹಳ ಸೊರಗಿದ್ದಾರಂತೆ." ಸರದಾರಿಣಿಯೆಂದಳು.

"ಹೀಗೋ ?"

ಅವಳನ್ನು ಕಾಡುತ್ತಿದ್ದ ವಿಚಾರಗಳಿಂದ ತಪ್ಪಿಸಿಕೊಳ್ಳಲು ಅವಳಿಗೆ ಅನುಕೂಲ ಸಮಯ ಬಂದಂತಾಯಿತು ! ಅಷ್ಟರಲ್ಲೇ, ರಾಜಾಸಾಹೇಬನೊಡನೆ ಆದ ಲಗ್ನದ ನಿಶ್ಚಯ ಮುರಿದು ವಿಲಾಸರಾಯನೊಡನೆ ಲಗ್ನವಾಗಬೇಕು ಎಂಬ ನಿರ್ಣಯಕ್ಕೆ ಅವಳು ಬಂದಿದ್ದಳು.

"ಸೊರಗಿರುವರೇ ಸರದಾರರು ?"

ಒಬ್ಬ ಆಳು ಅಲ್ಲಿಗೆ ಬಂದು,

"ವಿಲಾಸರಾಯರೆ, ನಿಮಗೆ ಟೆಲಿಫೋನ್ ಕರೆ ಬಂದಿದೆ." ಎಂದ.

ಪ್ರೇಮದ ಕನಸಿನಿಂದ ಎಚ್ಚತ್ತ ವಿಲಾಸರಾಯ,

"ಆಂ........", ಎಂದ.

"ನಿಮ್ಮೊಡನೆ ಯಾರೋ ಸದ್ಗೃಹಸ್ಥರು ಮಾತಾಡಬಯಸುತ್ತಿದ್ದಾರೆ."

"ಹೌದು, ನಾನಿಲ್ಲಿರುವದಾಗಿ ತಿಳಿಸಿದ್ದೆ. ಸರದಾರಿಣಿಯವರೆ, ದಯಿಯಿಟ್ಟು ಅಪ್ಪಣೆ ಕೊಡಿ. " ಎನ್ನುತ್ತ ಆತ ಹೊರಟುಹೋದ.

ಸರದಾರಿಣಿಯು ಅವನು ಹೋಗುತ್ತಿದ್ದುದನ್ನೇ ನೋಡುತ್ತ,

"ಅವರ ಬಗೆಗೆ ನಿನ್ನ ಅಭಿಪ್ರಾಯವೇನು, ಸುಶೀಲಾ ?" ಎಂದಳು,

"ವಿಲಾಸರಾಯರೇ ? ಒಳ್ಳೆಯ ಮನುಷ್ಯ."

"ನಿನ್ನನ್ನು ಬಹಳವಾಗಿ ಹೊಗಳುತ್ತಿದ್ದಾನೆ. ಮೆಚ್ಚಿಕೊಂಡಂತೆಯೂ ಕಾಣುತ್ತಿದೆ. ಆದರಲ್ಲಿ ಕೆಡುಕೇನೂ ಇಲ್ಲ. ಅಂತೆಯೇ ನೀವಿಬ್ಬರೂ ಒಂದೇ ಗಾಡಿಯಿಂದ ಬರುವ ಹಾಗೆ ನಾನೇ ಪ್ರವಾಸದ ಕಾರ್ಯಕ್ರಮ ಗೊತ್ತು ಪಡಿಸಿದ್ದು."

"ಲೀಲಾವತಿ, ನೀನು ಇಂಥ ತಂತ್ರಗಾರಳೆಂದು ನಾನು ಭಾವಿಸಿರಲಿಲ್ಲ."

"ಸುಶೀಲಾ, ನಿಮ್ಮಿಬ್ಬರಿಗೂ ಒಳ್ಳೆಯದಾಗುವಂತೆ ಯೋಜಿಸಿಕೊಳ್ಳುವದು ನಿಮಗೆ ಸೇರಿದ ವಿಷಯ. ಅವನಲ್ಲಿ ಆಕರ್ಷಕವಾದುದೇನೂ ಇಲ್ಲವೆಂದು ನಾನೂ ಬಲ್ಲೆ. ಆದರೆ ಅವನಲ್ಲಿರುವ ಹಣವನ್ನು ದುರ್ಲಕ್ಷಿಸುವಂತಿಲ್ಲ. ಈ

ಜಗತ್ತಿನಲ್ಲಿ ಹಣವಿದ್ದರೆ ಏನು ತಾನೇ ಮಾಡಲು ಸಾಧ್ಯವಿಲ್ಲ? ನನ್ನನ್ನು ತಪ್ಪು ತಿಳಿದುಕೋಬೇಡ, ಸುಶೀ........"

"ವಿಲಾಸರಾಯರನ್ನು ನಾನೂ ಮೆಚ್ಚಿಕೊಂಡಿದ್ದೇನೆ."

"ಸುಶೀಲಾ, ನಿನ್ನ ಲಗ್ನ ನಿಶ್ಚಯವಾಗಿದೆಯೋ ಹೇಗೆಂದು ವಿಲಾಸ ರಾಯ ನನಗೆ ಕೇಳಿದ."

"ಎಲಾ........"

"ನಾನು 'ಇಲ್ಲ' ಎಂದಾಗ ಅವನ ಮುಖದಲ್ಲಿ ಮೂಡಿದ ಆನಂದವನ್ನು ವರ್ಣಿಸಲಾರೆ. ನೀನು 'ಹೂಂ' ಅಂದರೆ ಸಾಕು, ವಿಲಾಸರಾಯ ನಿನ್ನವ ನಾಗುವನು."

ಅವರಿಬ್ಬರ ಮಾತು ಸಾಗಿರುವಾಗ, ತಮ್ಮ ಕಡೆಗೇ ಒಬ್ಬರು ಬರುತ್ತಿದ್ದು ದನ್ನು ಸುಶೀಲೆ ಕಂಡಳು. ವ್ಯಸನಾಕ್ರಾಂತವಾದ ಮುಖ, ತುಸು ಸೊರಗಿದ ದೇಹ, ನಲವತ್ತು ವರ್ಷ ಆಗಿರಬಹುದು. ಆತನನ್ನು ನೋಡಿ ಒಂದೆರಡು ವರ್ಷಗಳಾಗಿದ್ದರೂ ಸುಶೀಲೆ ಒಮ್ಮೆಲೇ ಗುರುತಿಸಿದಳು. ಅವನೇ ಕಾಮನೂರ ಸರದಾರ. ಮಧ್ಯಮ ತರಗತಿಯ ನಿಲುವು, ಗೌರ ಮುಖ, ಬಿಸಿಲಿನಲ್ಲಿ ತಿರುಗಿ ದ್ದುದಕ್ಕಾಗಿ ತುಸು ಕಪ್ಪಾಗಿತ್ತು. ಹುರಿಮಾಡಿದ ಮೀಸೆ; ಸ್ವಚ್ಛವಾಗಿ ಬೋಳಿಸಲಾದ ಗದ್ದ, ಅಲ್ಲಿ ಕೂದಲೇ ಬೆಳೆದಿರಲಿಕ್ಕಿಲ್ಲವೆಂದು ಅನ್ನಬಹುದಾ ದಷ್ಟು ನುಣುಪಾಗಿ ವಿದ್ಯುತ್ಪ್ರಕಾಶದಲ್ಲಿ ಮಿಂಚುತ್ತಿತ್ತು. ಅವನ ವೇಷಭೂಷಣ ಗಳು ಕಾಲೋಚಿತವಾಗಿದ್ದರೂ ಅವುಗಳನ್ನು ತೊಡುವುದರಲ್ಲಿ ಆತ ಹೆಚ್ಚಿನ ದಕ್ಷತೆ ವಹಿಸಿರಲಿಲ್ಲವೆಂಬುದನ್ನು ಸಾರಿ ಹೇಳುತ್ತಿದ್ದವು. ಹತ್ತಿರ ಬಂದು ತೆರವಾ ಗಿದ್ದ ಕುರ್ಚಿಯಲ್ಲಿ ಕುಳಿತು,

"ಲೀಲಾ........" ಎಂದನಾತ. ದುಃಖ ಉಕ್ಕಿ ಬಂದಿತ್ತು.

"ಸರದಾರ್........" ತುಸು ಗಂಭೀರವಾಗಿಯೇ ಲೀಲಾವತಿ ನುಡಿದಳು. "ಸರದಾರರೇ, ನೀವಿಲ್ಲಿಗೇಕೆ ಬಂದಿರೆಂಬುದೇ ನನಗೆ ತಿಳಿಯುತ್ತಿಲ್ಲ. ನಾನು ಕೂಡ್ರಲು ಹೇಳದಿದ್ದರೂ ನೀವಾಗಿ ಕೂತು ಮೇಜಿನ ಮೇಲೆ ಕೈಯ್ಯೂರಿರು ವಿರಿ. ನನ್ನನ್ನು ಲೀಲಾ ಎಂದು ಕರೆಯಬೇಡಿರಿ. ನನ್ನ ಹೆಸರು ಲೀಲಾ ಅಲ್ಲ—ಲೀಲಾರಾಣಿ. ಬೇರೆ ಹೆಸರಿನಿಂದ ಕರೆದರೆ ನನಗಾಗದು. ಅದಿರಲಿ, ಸುಶೀಲೆ ಬಂದಿದ್ದಾಳೆ. ಅವಳನ್ನು ಮಾತಾಡಿಸುವದೂ ತಿಳಿಯಬಾರದೇ?

ನಮ್ಮ ಲಗ್ನದ ಕಾಲಕ್ಕೆ ಅವಳು ಪಟ್ಟ ಶ್ರಮವನ್ನು ಮರೆತಿರೇನು ?"

"ಸುಶೀಲಾದೇವಿ, ಚೆನ್ನಾಗಿದ್ದೀರಾ ? ನನಗೆ ಎಲ್ಲವೂ ನೆನಪಿದೆ. ನಿಮ್ಮನ್ನು ಕಂಡು ಸಂತೋಷವಾಯಿತು."

"ಅದಿರಲಿ ಸರದಾರರೆ, ಈಗ ನೀವು ಬಂದುದರ ಉದ್ದೇಶವೇನು ?" ಎಂದು ಲೀಲಾವತಿ ಕೇಳಿದರೂ, ಸರದಾರರು ಸುಶೀಲೆಯತ್ತ ನೋಡುತ್ತಿದ್ದರು.

"ಅವಳಿಗೆ ಎಲ್ಲವನ್ನೂ ತಿಳಿಸಿದ್ದೇನೆ." ಎಂದಳು ಲೀಲಾರಾಣಿ.

"ಹಾಗಿದ್ದರೆ ಸುಶೀಲಾದೇವಿಯನ್ನೆ ಕೇಳುವೆ. ನನ್ನಂಥ ಕಲಾಪ್ರೇಮಿಗೆ, ಭಾವಜೀವಿಗೆ ಹಾವು ಮುಂಗಗಳನ್ನು ನೋಡುವದು ಸಾಧ್ಯವಾದೀತೇ ಸುಶೀಲಾ ದೇವಿ ? ಎಲ್ಲವನ್ನೂ ವಿರೋಧಿಸುವ ಮೂರ್ಖನೂ ನಾನಲ್ಲ. ಆದರೆ ಮನೆಯಲ್ಲಿ ಹಾವು ಇರಿಸಿಕೊಳ್ಳುವದು ಸಮಂಜಸವೆ ?"

"ಆ ಬಡಪ್ರಾಣಿಯ ತಲೆಗೆ ಹೊಡೆಯಲು ನಿಮಗಾವ ಅಧಿಕಾರ ?"

"ಆ ವಿಷಯದಲ್ಲಿ ನನ್ನಿಂದ ತುಸು ಪ್ರಮಾದವಾಗಿದೆ. ಕಾಫಿಯಲ್ಲಿನ ಸಕ್ಕರೆಯನ್ನು ಅಲುಗಿಸುತ್ತಿದ್ದಾಗ ಶಶಿ ತನ್ನ ಮುಖ ಮೇಲಕ್ಕೆತ್ತಿತು. ಹಿಂದಿನ ರಾತ್ರಿ ನಿದ್ರೆಯಿಲ್ಲದ್ದರಿಂದ ನನ್ನ ತಲೆಯೂ ತಾಳದಲ್ಲಿರಲಿಲ್ಲ. ಹೊಸ ಚಿತ್ರವೊಂದರ ಬಗ್ಗೆ ಯೋಚಿಸುತ್ತಿದ್ದೆ........"

"ಆಂ........ ಏನನ್ನು ಯೋಚಿಸುತ್ತಿದ್ದಿರಿ ?"

"ಒಂದು ಚಿತ್ರದ ಕುರಿತು........"

"ಒಂದು ವರ್ಷದ ಹಿಂದೆ ನಮ್ಮ ಸರದಾರರಿಗೆ ಬಣ್ಣದ ಕುಂಚ ಹಿಡಿಯಲೂ ಬರುತ್ತಿದ್ದಿಲ್ಲ, ಆಸ್ಥೆಯೂ ಇರಲಿಲ್ಲ. ಈಗೊಂದು ಸ್ಟುಡಿಯೋ ಇದೆಯೆಂದ ಮಾತ್ರಕ್ಕೆ ಕಲಾಕಾರರಾಗಿ ಆಕಾಶದಲ್ಲಿ ವಿಹರಿಸುತ್ತಿದ್ದಾರೆ. ಗರುಡ ಪಕ್ಷಿ ಚುಂಚಿನಿಂದ ಹಾವನ್ನು ಕಚ್ಚುವಂತೆ ಇವರು ಚಮಚದಿಂದ ಅದರ ತಲೆ ಕುಕ್ಕುತ್ತಿದ್ದಾರೆ."

"ನೀನು ನನ್ನನ್ನು ವ್ಯರ್ಥವಾಗಿ ಹೀಯಾಳಿಸುತ್ತಿರುವಿ. ನನ್ನ ಕಲಾ ನೈಪುಣ್ಯ ಹೊರಬರಲು ತುಸು ತಡವಾದುದೇನೋ ನಿಜ. ಅದಕ್ಕಾಗಿ ಜಗಳವೇಕೆ ? ಶಶಿಯನ್ನು ಹೊಡೆದುದಕ್ಕೆ ಕ್ಷಮೆ ಕೇಳಿದರೆ, ನಮ್ಮಿಬ್ಬರ ಜಗಳ ಕೊನೆಗೊಳ್ಳುವಂತಿದ್ದರೆ ಅದಕ್ಕೂ ನಾನು ಸಿದ್ಧನಿದ್ದೇನೆ. ತಪ್ಪಾಯಿತು ಅಂದರೆ

ಗಂಡ ಹೆಂಡಿರ ಜಗಳ ಮುಗಿದಂತಾಗಲಿಲ್ಲವೇ ಸುಶೀಲಾದೇವಿ ?"

"ಸರಿಯಾದ ಮಾತು.... "

"ಸುಶೀಲಾದೇವಿಯೂ ನನ್ನ ಅಭಿಪ್ರಾಯ ಒಪ್ಪುತ್ತಿರುವಳು ಲೀಲಾ ರಾಣಿ........"

"ಹೌದು........ " ಅಸಮಾಧಾನದಿಂದಲೇ ಲೀಲಾರಾಣಿ ಒಪ್ಪಿದಳು.

ವಿಲಾಸರಾಯ ಬಿಟ್ಟುಹೋಗಿದ್ದ ವಿಸ್ಕಿ ಕುಡಿದೊಡನೆ ಸರದಾರರು ಎಲ್ಲ ವನ್ನೂ ಮರೆತು ತಮ್ಮ ಸ್ವಭಾವಕ್ಕೆ ತಿರುಗಿದರು.

"ಪ್ರಸಂಗದ ಒತ್ತಡದಿಂದ ನಾನು ಕ್ಷಮೆ ಬೇಡಿದೆನಾದರೂ ಶಶಿಯು ಮನೆಯಲ್ಲಿರುವದನ್ನು ನಾನು ತಾತ್ವಿಕವಾಗಿ ಒಪ್ಪಲಾರೆ. "

"ಸುಶೀಲಾ, ಸರದಾರರೊಡನೆ ನನ್ನ ಪ್ರಥಮ ಪರಿಚಯ ಹೇಗಾಯಿತು ಗೊತ್ತೆ ? ನಾನೊಂದು ರಾತ್ರಿ ನಾಟಕದಿಂದ ತಿರುಗಿ ಮನೆಗೆ ಹೊರಟಿದ್ದೆ. ಇವರು ದಾರಿಯಲ್ಲಿ ಭೇಟಿಯಾದರು. 'ಏಕೆ ಒಬ್ಬರೇ ಹೊರಟಿರುವಿರಲ್ಲ, ನಿಮ್ಮೊಡನೆ ನಾನೂ ಬರುವೆ' ನೆಂದರು. ಈಗ ಮಾತ್ರ ತಾವು ಒಬ್ಬರೇ ತಿರುಗಬೇಕೆನ್ನುತ್ತಾರೆ. ಹಿಂದೆ ತಾವಾಡಿದ ಮಾತುಗಳನ್ನೂ ಮರೆತಿದ್ದಾರೆ. ನಮ್ಮ ನಮ್ಮ ರುಚಿಗಳಲ್ಲಿ ನಾವು ಅಡ್ಡಿಯಾಗಬಾರದೆಂದೂ ಕರಾರು ಆಗಿತ್ತು."

"ಲೀಲಾರಾಣಿ, ನಾನು ಬೇಕೆಂತಲೇ ಇದನ್ನು ಮಾತಾಡುತ್ತಿರುವದು. ಏಕೆಂದರೆ ಮುಂದಾದರೂ ನಮ್ಮಲ್ಲಿ ಜಗಳ ಬರಬಾರದೆಂದು ನಾನೀಗ ಹೀಗೆ ಸೂಚಿಸುತ್ತಿರುವದು. ನನ್ನನ್ನು ಶಾಂತಿದೂತನೆಂದು ಭಾವಿಸು........"

"ನಾನು ಭಾವಿಸಿರುವದನ್ನು ನೀವು ಕೇಳಿದರೆ ನಿಮ್ಮ ಹೃದಯಕ್ರಿಯೆ ನಿಲ್ಲಬಹುದು........"

"ನನ್ನ ಯೋಗ್ಯತೆಗೂ ಮಿಕ್ಕಿ ಸಹಿಸಿಕೊಳ್ಳುತ್ತಿರುವೆನಲ್ಲ, ಲೀಲಾ ರಾಣಿ........"

"ಸರದಾರರೆ ಕೇಳಿರಿ. ನಾನೀಗ ಶಾಂತಳಾಗಿರುವದು ನಿಮ್ಮ ಸುದೈವ. ಸಿಟ್ಟಿಗೆದ್ದರೆ ಕುರ್ಚಿಯನ್ನೇ ಎತ್ತಿ ನಿಮ್ಮ ತಲೆಯ ಮೇಲೆ ಹೇರಬಹುದು. ಅದ ಕ್ಕಾಗಿ ವಾಸ್ತವವಾದಿ ಮನುಷ್ಯನಂತೆ ಮಾತನಾಡಿರಿ. ನೀವು ಅನ್ನುವದಾದರೂ ಏನದು ?"

"ಆ ಹಾವನ್ನು ಮನೆ ಬಿಡಿಸಿದರೇ ನಾನು ಆ ಮನೆ ಸೇರುವೆ."

"ಎಂದಿಗೂ ಸಾಧ್ಯವಿಲ್ಲ."

ಸರದಾರರು ದೀರ್ಘ ನಿಟ್ಟುಸಿರೊಂದನ್ನು ಬಿಟ್ಟು,

"ನಿನ್ನನ್ನು ಲಗ್ನವಾಗುವ ಕಾಲಕ್ಕೆ ನೀನು ನನ್ನನು, ಕಾಯಾ-ವಾಚಾ-ಮನಸಾ ಪ್ರೀತಿಸುವದಾಗಿಯೂ ನನ್ನ ಆಜ್ಞೆಯನ್ನು ಪಾಲಿಸುವದಾಗಿಯೂ ವಚನವಿತ್ತುದನ್ನು ಮರೆತಂತಿದೆ. ಆಗ ನೀನು ಹೇಳಿದುದೆಲ್ಲ ನಿಜವಾಗಬಹುದೆಂದು ನಾನು ನಂಬಿದ್ದೆ."

ಲೀಲಾರಾಣಿಯ ಹ್ನದಯ ತುಸು ಮೃದುವಾಗಿರಬೇಕು, ಸಲುಗೆಯಿಂದ ಕೇಳಿದಳು:

"ಆ ವಿಷಯವೇ ಬೇರೆ. ಅಂತೆಯೇ ನಿಮಗಿನ್ನೂ ಮನೆ ಸೇರಲು ದಾರಿಯಿದೆ. ನೀವೂ ಅವರಂತೇ ನುಡಿದಿರಲ್ಲವೇ ? ಅಲ್ಲ, ನಾನೇನು ಶಶಿಯನ್ನು ಪ್ರೀತಿಗಾಗಿ ಇರಿಸಿಕೊಂಡಿದ್ದೇನೆಯೆ ? ನನ್ನ ಪ್ರಚಾರ ಸಾಧನವೆಂದು ಸಾಕಿದೆನಷ್ಟೇ. ಅದಕ್ಕೂ ನನಗೆ ಅಧಿಕಾರವಿಲ್ಲವೇನು ?"

"ಮಂಗನ ವಿಷಯವಾಗಿ ನನ್ನ ತಕರಾರು ಇಲ್ಲ. ಅದರಿಂದ ಪ್ರಸಿದ್ಧಿಗೆ ಅನುಕೂಲವಾಗಬಹುದು. ಹನುಮ ಬೇಕಾದರೆ ಇರಲಿ, ಶಶಿಯನ್ನು ಮಾತ್ರ ದಯಮಾಡಿ ದಾಟಿಸಿಬಿಡು"

"ಓ ! ಹನುಮನ ಬಗ್ಗೆ ನಿಮ್ಮ ತಕರಾರು ಇಲ್ಲವೆನ್ನಿರಿ."

"ತಕರಾರು ಇದೆಯಾದರೂ ಅದರಿಂದ ನಿನಗಾಗುವ ಲಾಭದ ಕಲ್ಪನೆಯಿದೆ."

"ಹನುಮನಿರುವ ಮನೆಯಲ್ಲಿ ನೀವಿರಲು ಸಿದ್ಧರೇ ?"

"ತಡೆದುಕೊಳ್ಳಬಲ್ಲೆ. ಹನುಮ-ಶಶಿ ಇಬ್ಬರೂ ಇರುವ ಮನೆಯಲ್ಲಿರುವದು ಮಾತ್ರ ಅಸಾಧ್ಯ."

ಕೆಲ ನಿಮಿಷ ಮೌನ. ಲೀಲಾರಾಣಿಯೇ ವಿಷಾದದಿಂದ ಹೇಳಿದಳು:

"ಅದೇಕೋ ಶಶಿಯನ್ನು ಬಿಟ್ಟಿರಲು ನನ್ನ ಮನಸ್ಸು ಸಿದ್ಧವಾಗದಾಗಿದೆ."

"ಲೀಲಾರಾಣಿ........"

"ತಡೆಯಿರಿ. ನಾನು ಅದನ್ನು ಹೊರಕ್ಕೆ ಹಾಕುವೆನೆಂದು ಇನ್ನೂ ಹೇಳಿಲ್ಲ."

"ನೀನದನ್ನು ಅಟ್ಟಿಯೇ ಬಿಡುವಿಯಷ್ಟೆ ?"

ಅವಳು ತುಸು ಯೋಚಿಸಿ,

"ಆಗಲಿ, ಪ್ರಾಣಿ ಸಂಗ್ರಹಾಲಯಕ್ಕೆ ಕಳಿಸಿಬಿಡುವೆ." ಎಂದಳು.

"ನನ್ನ ಲೀಲಾ........!"

ಯಾರೋ ತನ್ನ ಕೈಗಳನ್ನು ಮೇಜಿನ ಬುಡದಲ್ಲಿ ಹಿಡಿದಿರುವಂತೆ ಸುಶೀಲ ಳಿಗನ್ನಿಸಿತು. ಸರದಾರರ ಮುಖ ನೋಡಿದ ಮೇಲೆ ಅವರು ಪ್ರೇಮಾತಿರೇಕ ದಿಂದ ಲೀಲಾರಾಣಿಯ ಕೈಗಳೆಂದು ತನ್ನವುಗಳನ್ನೇ ಹಿಡಿದಿರುವದು ಖಾತ್ರಿ ಯಾಯಿತು.

"ಸರದಾರರೇ, ನಿಮ್ಮ ಧ್ವನಿಯಲ್ಲಿನ ಮಾರ್ದವತೆ ನನ್ನ ಕಿವಿಗೆ ಬಿದ್ದರೆ ನನ್ನ ಎಲ್ಲ ಸಿಟ್ಟೂ ಮಾಯವಾಗುತ್ತದೆ." ಲೀಲಾರಾಣಿಯ ಪ್ರೇಮ ಜಾಗ್ರತ ವಾಯಿತು.

"ಪ್ರಿಯೇ, ಈಗ ತಾನೇ ನೀನು ಕುಣಿಯುತ್ತಿದ್ದಾಗ ಓಡಿ ಬಂದು ನಿನ್ನನ್ನು ಅಪ್ಪಿಕೊಂಡುಬಿಡಬೇಕೆಂದು ಮಾಡಿದ್ದೆ."

"ಸರದಾರರೇ........"

"ಪ್ರಿಯೇ........"

"ದಯಮಾಡಿ ನನ್ನ ಕೈ ಬಿಡಿರಿ ಸರದಾರರೇ," ಸುಶೀಲಾ ಹೇಳಿದಳು.

ಸರದಾರರು ಗಾಬರಿಯಾಗಿ ಕೈ ಸಡಲಿಸಿದರು; ಕೂಡಲೇ ಚೇತರಿಸಿ ಕೊಂಡು,

"ಸುಶೀಲಾದೇವಿ, ದಾಂಪತ್ಯ ಜೀವನದ ಮಧುರ ರೂಪವಿದು. ನಿಮಗೂ ತೀವ್ರ ಗೊತ್ತಾಗುವದು. ಜಗಳವಾದ ಮರುಕ್ಷಣದಲ್ಲೆ ಮರೆತು ಮತ್ತೆ ಒಂದಾ ಗುವದು. ಇದೇ ಪ್ರೇಮಜ್ಯೋತಿ ! ಒಮ್ಮೆ ತುಸು ಮಂದವಾಗುವದು, ಒಮ್ಮೆ ಹೆಚ್ಚು ಪ್ರಕಾಶಿಸುವದು........"

ಕೆಳಗಿನ ಮಹಡಿಯ ಮೇಲಾದ ಸಪ್ಪಳದಿಂದ ಅವನ ಮಾತು ಅರ್ಧಕ್ಕೆ ನಿಂತಿತು. ಅವರು ಎದ್ದು ನೋಡಿದರು. ಗಾಜುಗಳು ತುಂಡು ತುಂಡಾಗಿ ಬಿದ್ದಿದ್ದವು. ಲೀಲಾರಾಣಿ ಕಾಫಿಯ ಕಪ್ಪನ್ನು ಬದಿಗೆ ತಳ್ಳಿದಳು. ಸರದಾರರ ಪ್ರೇಮಜ್ಯೋತಿ ಆರಿಹೋಯಿತು. ಕೆಳಗಿನ ದುರ್ಘಟನೆಯನ್ನು ಪೂರ್ತಿ ನೋಡಿದವಳು ಸುಶೀಲಾರಾಣಿಯೊಬ್ಬಳೇ.

ಆಳು ನೆಲಕ್ಕೆ ಬಿದ್ದುದು, ಯಾವನೋ ಓರ್ವ ಹರವಾದ ಬೆನ್ನಿನವ ಆ ಆಳನ್ನು ಎತ್ತಿದ್ದುದು, ಅವನ ಪಕ್ಕದಲ್ಲಿದ್ದ ಸ್ಥೂಲದೇಹಿ ಹೆಣ್ಣೊಂದು ಆಳಿನ ಮುಖಕ್ಕೆ ನೀರು ಉಗ್ಗುತಿದ್ದುದನ್ನು ಅವಳು ಕಂಡಳು. ಆ ಬೆನ್ನು ತನ್ನ ಗುರುತಿನದೇ ಎಂದು ಅವಳಿಗೆನ್ನಿಸಿತು. ಅದು ಯಾರದಾಗಿರಬೇಕು? ನಿಃಸಂದೇಹವಾಗಿ ರಾಜಾಸಾಹೇಬನದು. ಅವಳು ಇನ್ನೊಮ್ಮೆ ನೋಡುವಷ್ಟರಲ್ಲೇ ಅವನು ಹಿಂದೆ ಸರಿದಿದ್ದ. ಕೆಲ ನಿಮಿಷ ಅವಳ ವಿಚಾರಶಕ್ತಿಯೇ ಕುಗ್ಗಿದಂತಾಯಿತು. ರಾಜಾಸಾಹೇಬ ಮುಂಬಯಿಯಲ್ಲಿಯೆ? ಅದೂ ಆ ಹೆಣ್ಣಿನ ಜೊತೆಗೆ? ಅವಳ ಸ್ತ್ರೀಹೃದಯ ನಾನಾ ಕಲ್ಪನೆಗಳನ್ನು ತಂದುಕೊಂಡಿತು.

ಅವರು ಮತ್ತೆ ತಮ್ಮ ಕುರ್ಚಿಗಳಲ್ಲಿ ಕುಳಿತರು. ಸರದಾರ ಮತ್ತು ಲೀಲಾರಾಣಿಯರ ಮಾತಿಗೆ ಪ್ರಾರಂಭವಾಯಿತು. ಅದಕ್ಕೆ ಅಡ್ಡಿ ಬಾರದಂತೆ ಸುಶೀಲೆ ದೂರ ಸರಿದಳು.

"ನೀನೇಕೆ ಮೌನವಾಗಿರುವಿ ಸುಶೀಲಾ ?" ಲೀಲಾರಾಣಿ ಕೇಳಿದಳು.

"ನಾನೇನೋ ವಿಚಾರದಲ್ಲಿದ್ದೆ."

"ವಿಚಾರ ಮಾಡುವದೂ ಒಳ್ಳೆಯ ಕೆಲಸವೆಂದೇ ಹೇಳುವರು, ನಾನು ಮಾತ್ರ ಪ್ರಯತ್ನಿಸಿಲ್ಲ. ಸರದಾರರು ಮನೆಬಿಟ್ಟು ಹೋಗುವದು ಯೋಗ್ಯವಾದ ಮಾತೇ? ಪಾಪ! ಅವರ ಮಾತು ನಡೆಯದಿದ್ದರೆ ಅವರು ಇನ್ನೇನು ಮಾಡಬೇಕು?"

## ೮

ಇಷ್ಟೊಂದು ಸೊಗಸಾದ ರಾತ್ರಿಯನ್ನು ಕಮಲಾಕಾಂತ ತನ್ನ ಜೀವಮಾನದಲ್ಲೇ ಕಂಡಿರಲಿಲ್ಲವೇನೋ! ಆತ ಆನಂದಸಾಗರದಲ್ಲಿ ತೇಲುತ್ತಿದ್ದ. ಆಗೊಮ್ಮೆ ಈಗೊಮ್ಮೆ ತಂಗಿಯ ನೆನಪು ಬಂದು ಅವನ ಆನಂದಕ್ಕೆ ವ್ಯತ್ಯಯ ತರುತ್ತಿದ್ದಿತು. ತನ್ನ ಬರುವನ್ನೇ ಅವಳು ಇದಿರು ನೋಡುತ್ತ ಕುಳಿತ ಚಿತ್ರವೂ ಅವನ ಕಣ್ಣಿನ ಮುಂದೆ ಬರುತ್ತಿತ್ತು. ಆದರೇನು? ಅದೆಲ್ಲವೂ ಕ್ಷಣಕಾಲ

ಮಾತ್ರ. ಮರುಕ್ಷಣವೇ ಆತ ಆನಂದಸಾಗರದಲ್ಲಿ ತೇಲಿಬಿಡುತ್ತಿದ್ದ. ಒಮ್ಮೆ ಮಾವನ ನೆನಪೂ ಬಂದುಹೋಯಿತು. ಅವಳು ಬಗೆದ ದ್ರೋಹದ ನೆನಪೂ ಬಂದಿತು. ನಾಳೆ ಮತ್ತೆ ಪ್ರಮೀಲೆಯ ಅದೇ ಆ ಮನೆಯಲ್ಲಿ ತಾನು ಬಿದ್ದಿರ ಬೇಕೆಂಬುದೂ ಹೊಳೆಯಿತು. ಆದರೆ ಅನುಭವಿಸುತ್ತಿದ್ದ ಸುಖಮಯ ಸಮಯ ವನ್ನು ಅಂಥ ವಿಚಾರಗಳಿಂದ ಕೆಡಿಸಿಕೊಳ್ಳಲು ಸಿದ್ಧನಾಗಲಿಲ್ಲ.

ರಾತ್ರಿಯಲ್ಲಿ ತೆರೆದಿರುವ ಈ ರೆಸ್ಟಾರೆಂಟುಗಳಲ್ಲಿ ಮೋಜಿಗೆ ಕೊರತೆಯಾ ದರೂ ಎಲ್ಲಿಯದು ? ದೇವರೇ ಅದನ್ನು ಕೊನೆಗೊಳಿಸಬೇಕು. ಅಂಥ ಸಮಯ ಬರುವದನ್ನೇ ನೋಡುತ್ತಿದ್ದ ರಾಜಾಸಾಹೇಬನಿಗೆ, 'ನನಗೆ ನಿದ್ರೆ ಬರುತ್ತಿದೆ' ಎಂದು ಕುಮಾರಿ ಹೇಳಿದುದು ಅಂಥ ದೈವೀ ಪ್ರಸಂಗವಾಗಿಯೇ ಕಂಡದ್ದರಲ್ಲಿ ಆಶ್ಚರ್ಯವೇನು ? ಇಂಥ ನಸುಕಿನಲ್ಲಿ ಮನೆ ಸೇರುವುದು ಸರಿಯಾದುದಲ್ಲ ವೆಂದೇ ಲಲಿತಳ ಅಭಿಪ್ರಾಯವಾಗಿತ್ತು. ರಾಜಾಸಾಹೇಬನಿಗೂ ನಿದ್ದೆ ಬರ ಹತ್ತಿತ್ತು. ಕೊನೆಗೊಮ್ಮೆ ಅವರ ಗುಂಪು ಏಳಲೇಬೇಕಾಯಿತು.

ಲಲಿತಳ ಮನೆ ಸಮೀಪದಲ್ಲಿತ್ತು. ಅವಳನ್ನು ಕಳಿಸಲು ರಾಜಾಸಾಹೇಬ ದೂರ ಹೋಗಬೇಕಿರಲಿಲ್ಲ. ಕುಮಾರಿಯ ಮನೆ ಮಾತ್ರ ದೂರದಲ್ಲಿತ್ತು. ಅವ ಳನ್ನು ಕಳುಹಿಸುವುದು ಕಮಲಾಕಾಂತನ ಪಾಲಿಗೆ ಬಂತು.

"ನಿನ್ನ ಗೆಳೆಯನ ಹೆಸರು ಏನೆಂದು ಹೇಳಿದಿ ಕಮಲಾಕಾಂತ ?" ನಿದ್ರೆ ಯಲ್ಲಿಯೇ ಕುಮಾರಿ ಕೇಳಿದಳು.

"ಅಣ್ಣಾಸಾಹೇಬನೆಂದು ಅವನೇ ಹೇಳಿದ. ಅವನ ಪರಿಚಯವಾದುದೂ ಇಂದೇ."

"ಛೇ, ಆದಿರಲಾರದು. ಅವನ ಹೆಸರು ರಾಜಾಸಾಹೇಬ್........... ಎಂದೇನೋ ಇದೆ."

"ನಿನಗೆ ಹೇಗೆ ಗೊತ್ತು ?"

"ನನಗೆ ಗೊತ್ತಿದೆ. ಅವನನ್ನು ನಾನು ಗೊಬ್ಬೂರಿನಲ್ಲಿ ಕಂಡಿದ್ದೆನೆಂದು ಹೇಳಲಿಲ್ಲವೇ ? ಅವನಂಥವನೇ ಜಗತ್ತಿನಲ್ಲಿ ಬೇರೊಬ್ಬ ಸಿಗುವದೂ ದುರ್ಲಭ. ಅವನನ್ನು ರಾಜಾಸಾಹೇಬ್‌ನೆಂದು ಯಾರೋ ಕರೆದುದು ನನಗೆ ನೆನಪಿದೆ." ಅವನ ಪೂರ್ಣ ಹೆಸರಿನ ನೆನಪು ತಂದುಕೊಳ್ಳಲು ಅವಳ ಮೆದುಳು ಎಚ್ಚತ್ತಿತು. " ಅದೇನೋ ಒಂದು ಗಿಡದ ಹೆಸರಿನ ಮೇಲೆ ಅವನ ಅಡ್ಡಹೆಸರು ಇದೆ.... "

"ಹಾಂ........ ಹಾಂ........ ನೆನಪಾಯಿತು. ಅತ್ತೀಗೇರಿ ರಾಜಾ ಸಾಹೇಬ್...."

ಕಮಲಾಕಾಂತನ ದಣಿವು ನಿದ್ರೆಗಳೆಲ್ಲ ಕ್ಷಣಮಾತ್ರದಲ್ಲಿ ಮಾಯವಾದವು.

"ಛೆ, ಇರಲಾರದು." ಎಂದು ಆತ ಪ್ರತಿಭಟಿಸಿದ.

"ಖಂಡಿತವಾಗಿಯೂ ಅವನ ಹೆಸರು ಅದೇ."

ಕುಮಾರಿಯ ಕಣ್ಣುಗಳು ಮುಚ್ಚತೊಡಗಿದ್ದವು.

"ನಿನಗೆ ಖಾತ್ರಿಯಾಗಿ ನೆನಪಿದೆಯೇ ?"

"ಹೌದು...."

"ಹಾಯ್, ಪರಮಾತ್ಮಾ !"

ಟ್ಯಾಕ್ಸಿಯಲ್ಲಿ ಕುಳಿತಿದ್ದ ಕಮಲಾಕಾಂತ ಯೋಚನಾಮಗ್ನನಾಗಿದ್ದ. ಇವನು ತನ್ನ ಹೆಸರನ್ನು ಬದಲಿಸಿಕೊಂಡು ಮುಂಬಯಿಗೆ ಬಂದುದರ ಕಾರಣ ವೇನು? ಇರಲಾರದು ಎಂದು ಹೇಳುವದೂ ಕಷ್ಟ! ಕುಮಾರಿ ಅವನನ್ನು ಗುರುತಿಸಿರಲಿಲ್ಲವೇ ?

ಕುಮಾರಿಯನ್ನು ಅವಳ ಮನೆಗೆ ತಲುಪಿಸಿ ಅದೇ ಟ್ಯಾಕ್ಸಿಯಲ್ಲಿ ಆತ ಅಣ್ಣಾಸಾಹೇಬನ ವಾಸಸ್ಥಳಕ್ಕೆ ತಿರುಗಿ ಬಂದ. ಅವನನ್ನು ಕೂಡಲೆ ಮನೆಗೆ ಕರೆದೊಯ್ಯಲು ನಿಶ್ಚಯಿಸಿದ್ದ. ಏಕೆಂದರೆ ಅವನಲ್ಲಿ ಉತ್ಸಾಹವಿರುವದೂ ಇಂಥ ರಾತ್ರಿಗಳಲ್ಲೇ. ಮರುದಿನ ಅವನಲ್ಲಿ ಈಗಿನ ಉತ್ಸಾಹ ಹೇಗಿರಬೇಕು ? ಅಣ್ಣಾಸಾಹೇಬನನ್ನು ಮನೆಗೆ ಕರೆದೊಯ್ದು, ಪ್ರಮೀಲೆಯೊಡನೆ ಅವನ ಪ್ರೇಮ ಬೆಳೆಯುವಂತೆ ಅನುಕೂಲವಾಗುವದು. ಅನಂತರ ಅವನಿಂದ ಹತ್ತು ಸಾವಿರ ರೂಪಾಯಿ ಸಾಲ ಪಡೆದುಕೊಳ್ಳುವದು ! ಹೀಗೆಲ್ಲ ಯೋಚಿಸುತ್ತಿರುವಾದಲೇ ಒಮ್ಮೆಲೇ ಟಾಕ್ಸಿ ನಿಂತುದರಿಂದ ಅವನಿಗೆ ಎಚ್ಚರವಾಯಿತು.

ಕರೆಗಂಟೆಯ ಸಪ್ಪಳವನ್ನು ಕೇಳಿದ ರಾಜಾಸಾಹೇಬ್ ಹಾಸುಗೆಯಲ್ಲಿಂದ ಎದ್ದು ಬಂದು ಬಾಗಿಲು ತೆರೆದ. ಕಮಲಾಕಾಂತನನ್ನು ಪುನಃ ನೋಡಿ, "ಇದೇನು ಮುಂಬಯಿ ರೂಢಿಯೋ ಏನೋ, ಯಾರಿಗೆ ಗೊತ್ತು ? ರಾತ್ರಿಯ ಊಟ ಮುಗಿದು ಹೋದನಂತರ ಮರುದಿನ ಮಧ್ಯಾಹ್ನದ ಊಟದ ಹೊತ್ತಿನ ತನಕ ಮಾತನಾಡುತ್ತ ಕೂತಿರಬೇಕೋ ಏನೋ ?" ಎಂದುಕೊಂಡ.

"ನಿಮಗೆ ತೊಂದರೆ ಕೊಡುತ್ತಿರುವದಕ್ಕೆ ಕ್ಷಮಿಸಿರಿ, ಅಣ್ಣಾಸಾಹೇಬ್. ನಾನು ಒಂದೆರಡು ದಿನಗಳಲ್ಲಿ ತಿರುಗಿ ನಮ್ಮ ಹಳ್ಳಿಗೆ ಹೋಗಲಿದ್ದೇನೆ. ಅಲ್ಲಿಯ ತನಕ ನೀವು ನಮ್ಮ ಮನೆಯಲ್ಲಿಯೇ ಇರಬೇಕು. ನಿಮ್ಮನ್ನು ಕರೆದೊಯ್ಯಲು ಬಂದಿರುವೆ."

ರಾಜಾಸಾಹೇಬನಿಗೆ ಅತ್ಯಾನಂದವಾಯಿತು. ಆತ ಯೋಚಿಸಿದುದಕ್ಕಿಂತಲೂ ತೀವ್ರ ಗತಿಯಿಂದ ಕಾರ್ಯಗಳು ಸಾಧಿಸಹತ್ತಿದವು.

"ಆಗಬಹುದು, ಸಂತೋಷ."

"ಈಗ ಬಹಳ ರಾತ್ರಿಯಾಗಿದೆ. ನಾನು ನಸುಕಿನಲ್ಲಿ ಬರುವೆ. ಏಳು ಗಂಟೆಗೆ ಹೊರಡುವ ಬಸ್ಸಿಗೆ ಹೋಗೋಣ, ಆಗಬಹುದೇ ?"

"ಓಹೋ, ನಾನಂತೂ ಸಿದ್ಧನೇ."

"ನಾವು ಬಡವರು, ಅದನ್ನು ಮಾತ್ರ ನೀವು ದೊಡ್ಡ ಮನಸ್ಸಿನಿಂದ ಸಹಿಸಿಕೊಳ್ಳಬೇಕು."

"ಹಾಗೇ ಆಗಲಿ."

"ನಮಸ್ಕಾರ, ಬರುತ್ತೇನೆ." ಎನ್ನುತ್ತ ಕಮಲಾಕಾಂತ ಹೊರಹೋದ.

## ೬

ಮಧ್ಯಾಹ್ನದ ಊಟದ ಸಮಯಕ್ಕೆ ಸರಿಯಾಗಿ ಪ್ರಮಿಲೆ ಕಮಲಾಕಾಂತನಿಗಾಗಿ ತಟ್ಟೆಯಲ್ಲಿ ಊಟ ಬಡಿಸಿ ತಂದು ಮೇಜಿನ ಮೇಲಿರಿಸಿದಳು. ಅವನಿನ್ನೂ ಹಾಸುಗೆಯಲ್ಲೇ ಇದ್ದ. ಅವನ ವ್ಯಸನಾಕ್ರಾಂತವಾದ ಮುಖ ನೋಡಲಾರದೆ ಊಟದ ತಟ್ಟೆಯ ಮೇಲೆ ಬಟ್ಟೆಯೊಂದನ್ನು ಮುಚ್ಚಿಟ್ಟು ಅವಳು ಹೊರಕ್ಕೆ ಹೋದಳು. ತುಸು ವೇಳೆಯ ನಂತರ ಬಂದು ನೋಡಿದರೂ ಅವನು ಊಟವನ್ನು ಮುಟ್ಟಿರಲಿಲ್ಲ. ಆತ ಅವಳನ್ನೊಮ್ಮೆ ಕಡೆಗಣ್ಣಿನಿಂದ ನೋಡಿ, ಅವಳ ಮುಖದ ಮೇಲೆ ದುಃಖದ ಛಾಯೆಯಿದ್ದುದನ್ನು ಗುರುತಿಸಿಕೊಂಡ. ಎರಡನೆಯ ಸಲ ಅವಳು ಹೊರ ಹೋದೊಡನೆ ತಟ್ಟೆಯ ಮೇಲಿನ ಬಟ್ಟೆಯ

ನ್ನೆಳೆದು ನೋಡಿದ. ಚಪಾತಿ, ಬೆಣ್ಣೆ, ಜೇನುತುಪ್ಪ, ಬಟಾಟಿ ಪಲ್ಯ ಅವನ ಬಾಯಲ್ಲಿ ನೀರು ತಂದವು. ಅವಳು ಮೂರನೆಯ ಸಲ ಬರುವದರೊಳಗಾಗಿ ಎಲ್ಲವನ್ನೂ ತಿಂದು ತಟ್ಟೆಯ ಮೇಲೆ ಬಟ್ಟೆ ಮುಚ್ಚಿದ. ಅವನು ಅಧೀರನಾಗಿ ರುವದಕ್ಕೆ ಈವರೆಗಿನ ಅವಳ ಮೌನವೇ ಕಾರಣವಾಗಿತ್ತು. ಅಣ್ಣಾಸಾಹೇಬ ನನ್ನು ಅವನು ಮನೆಗೆ ಕರೆತಂದಾಗಿನಿಂದಲೂ ಅವಳು ಏಕಾಂತದಲ್ಲಿ ಕಮಲಾ ಕಾಂತನಿಗೆ ಭೆಟ್ಟಿಯಾಗಿರಲಿಲ್ಲ. ಮಾತಾಡಿದರೆ ಎಲ್ಲಿ ಬೈಯುವಳೋ ಎಂದು ಹೆದರಿದ್ದ, ಅವಳು ಹಾಗೂ ಮಾಡಿರಲಿಲ್ಲ. ಊಟ ತಂದಿಟ್ಟಾಗಲೂ ಅವಳು ಮಾತಾಡಿರಲಿಲ್ಲ. ತನ್ನ ಅಣ್ಣನ ವಿಷಯವಾಗಿ ಅವಳಿಗೆ ವಿಪರೀತ ಸಿಟ್ಟು ಬಂದಿತ್ತು. ಅವನನ್ನು ಕೊಂದುಹಾಕುವಷ್ಟು ಸಿಟ್ಟು! ಆದರೇನು ? ಪಾಪ! ಮಾವ ಅವನಿಗೆ ಹಣ ಬಿಡಲಿಲ್ಲವೆಂದು ವ್ಯಸನಪಡುತ್ತ ಎಲ್ಲೆಲ್ಲಿ ಸುತ್ತಿದ್ದನೋ, ಊಟವನ್ನಾದರೂ ಮಾಡಿರುವನೋ ಇಲ್ಲವೋ ಯಾರಿಗೆ ಗೊತ್ತು ? ಎಂದು ಯೋಚಿಸಿ ಅವನು ಊಟ ತೀರಿಸಲಿ ಎಂದು ಕಾದಿರಬೇಕು! ಮುಂಜಾವಿ ನಿಂದ ಮಧ್ಯಾಹ್ನದ ತನಕ ಕೋಪ ತಡೆಹಿಡಿದು ಅವಳಿಗೆ ಸಾಕಾಗಿರಬೇಕು. ಒಮ್ಮೆ ಸುತ್ತಲೂ ನೋಡಿ ಬಾಗಿಲು ಹಾಕಿರುವದನ್ನು ಖಚಿತ ಮಾಡಿಕೊಂಡು,

"ಅಣ್ಣಾ, ಇದೆಲ್ಲ ಏನು ?" ಎಂದು ಆರಂಭಿಸಿದಳು.

ಕಮಲಾಕಾಂತ ಅವಳ ಮಾತಿನ ಉದ್ದೇಶ ಕಲ್ಪಿಸಿಕೊಂಡು ಗದ್ದರಿಸಿದ:

"ಯಾವುದು? ನನ್ನನ್ನು ಹಾಗೇಕೆ ದುರುಗುಟ್ಟಿ ನೋಡುತ್ತಿರುವಿ ? ಅಂಥದು ಏನಾಗಿದೆ ?"

ಆತ ಗದ್ದರಿಸಿದನೇನೋ ನಿಜ. ಆದರಲ್ಲಿ ಬೇರೆಯವರನ್ನು ಹೆದರಿಸುವ ಕಠೋರತೆಯಿರಲಿಲ್ಲ. ತಾನೇ ಹೆದರಿದ ಭಾವವಿತ್ತು. "ನನ್ನ ತಲೆ ಸಿಡಿಯು ತ್ತಿದೆ, ಪ್ರಮಿಲಾ."

"ಅದು ಸಿಡಿದು ಹೋದರೇನೇ ಒಳ್ಳೇದು." ಕಠೋರವಾಗಿ ಪ್ರಮಿಲೆ ನುಡಿದಳು.

"ಆಗಲಿ ಹಾಸ್ಯಮಾಡು, ಅನ್ನುವದನ್ನೆಲ್ಲ ಅಂದುಬಿಡು."

"ಒರಟು ಮಾತಾಡಿದೆನೇ ಅಣ್ಣಾ ? ಕ್ಷಮಿಸು."

ಅವಳನ್ನು ಬೆದರಿಸ ಹೋಗಿ ತನಗಾಗಿ ಅವಳಲ್ಲಿ ಮರುಕ ಹುಟ್ಟುವಂತಾ ದುದಕ್ಕೆ ಅವನಿಗೆ ವ್ಯಸನವಾಯಿತು. ಕೊನೆಯ ಉಪಾಯವೆಂದು ಅವನು

ಮೋರೆಯ ತುಂಬಾ ಮುಸುಕನ್ನೆಳೆದುಕೊಂಡು ದುಃಖಿಸುತ್ತಿರುವವನಂತೆ ನಟಿಸ ಹತ್ತಿದ. ಪ್ರಮೀಲೆಯೇ ಪುನಃ ಮಾತು ಬೆಳೆಸಿದಳು:

"ಕಮಲಾಕಾಂತ, ನೀನು ಮೂರ್ಖನೆಂಬುದನ್ನು ಸುಳ್ಳೆಂದು ತಿಳಿಯಲು ನಾನು ಅನೇಕ ದಿನಗಳಿಂದ ಶ್ರಮಪಟ್ಟೆ. ನೀನು ಜಾಣ ಎಂದು ಅನ್ನಲು ನನ್ನ ವಿವೇಕ ಒಪ್ಪದಿದ್ದರೂ ಅದನ್ನೂ ಅಲ್ಲಗಳೆದು ನಿನ್ನನ್ನು ಜಾಣನೆಂದೇ ಭಾವಿಸಲು ಹತ್ತಿದ್ದೆ. ಈಗ ಮಾತ್ರ ಹಾಗನ್ನಲು ನನ್ನಿಂದ ಸಾಧ್ಯವಿಲ್ಲ. ನೀನೇನು ನಡೆಸಿರುವಿ ಎಂದು ಯೋಚಿಸಿರುವಿಯೇನು ? ಮೂರು ದಿನಗಳಿಂದ ಮುಂಬಯಿ ನಗರದಲ್ಲಿ ನೀನು ತಿರುಗಿದ್ದುದಕ್ಕಾಗಿ ನನಗೆ ವ್ಯಸನವಿಲ್ಲ. ನೀನು ನನಗೆ ಹೇಳಿಯೂ ಹೋಗಲಿಲ್ಲ ಅಥವಾ ಒಂದು ಪತ್ರವನ್ನೂ ಬರೆಯಲಿಲ್ಲವೆಂದೂ ನಾನು ನಿನ್ನನ್ನು ಹೀಯಾಳಿಸುತ್ತಿಲ್ಲ. ನೀನು ಹಾಗೇಕೆ ಮಾಡಿದಿ ಎಂಬ ಕಾರಣವೂ ನನಗೆ ಗೊತ್ತಿದೆ. ಮಾವನ ಹಣ ನಿನಗೆ ಸಿಗಲಿಲ್ಲವೆಂದು ವ್ಯಸನಪಟ್ಟು ಹಾಗೆ ಹುಚ್ಚರಂತೆ ವರ್ತಿಸಿರಬಹುದು. ಮನೆ ಬಿಟ್ಟು ಹೋದ ನೀನು, 'ತಲೆ ನೋಯುತ್ತಿದೆ' ಎಂದು ಬಂದಿದ್ದರೆ, 'ಉಡಾಳ ಹುಡುಗ' ಎಂದು ಉಪಚಾರ ಮಾಡುತ್ತಿದ್ದೆ. ಆದರೆ ನೀನು ಅದಕ್ಕೂ ಮುಂದೆ ಹೋಗಿರುವಿ. ಯಾವನೋ ಓರ್ವ ಅಪರಿಚಿತನನ್ನು ಮನೆಗೆ ತಂದಿರುವಿ. ಅವನು ತಿರುಗಿ ಹೋಗುವನೆಂದೂ ನಿಶ್ಚಿತವಿಲ್ಲ. ಅಣ್ಣಾಸಾಹೇಬನನ್ನು ನಾನು ದೂಷಿಸಲಾರೆ. ಅವನು ಎಂಥ ಮನುಷ್ಯನೆಂಬುದನ್ನು ನಾನಿನ್ನೂ ಪರೀಕ್ಷಿಸಿಲ್ಲ. ಅವನು ಕನ್ನಡಿಗನೇನೋ ಸರಿಯೇ. ಒಳ್ಳೆಯವನಂತೆಯೂ ಕಾಣುತ್ತಿದ್ದಾನೆ. ಆದರೆ ನಿನ್ನ ಗೆಳೆಯರೆಲ್ಲ 'ರತ್ನ' ಗಳಾಗಿರುವದರಿಂದ ಮಾತ್ರ ತುಸು ಹೆದರಿಕೆ."

ಹೊದಿಕೆಯೊಳಗಿಂದ ಪ್ರತಿಭಟನೆಯ ಧ್ವನಿ ಕೇಳ ಬಂದುದರಿಂದ ಅವಳ ಹುಬ್ಬು ಮೇಲಕ್ಕೇರಿದವು.

"ಅಣ್ಣಾ, 'ನನ್ನ ಗೆಳೆಯರೆಂದರೆ ಕಳ್ಳರೆಂದು ಭಾವಿಸಬೇಡ' ಎಂದೆನ್ನಬಹುದು ನೀನು. ನಿನ್ನ ಜೇಬಿನಲ್ಲಿ ಹಣ ಇಟ್ಟುಕೊಂಡು ಮುಂಬಯಿಯಲ್ಲಿ ತಿರುಗುವಾಗ ಇಂಥ ನೂರಾರು ಗೆಳೆಯರೂ ಭೆಟ್ಟಿಯಾಗಬಹುದು." ಇಬ್ಬರನ್ನೂ ಬೈದು ತುಸು ಸಮಯ ಮೌನವಾಗಿದ್ದು ಅವಳು ಮುಂದುವರಿಸಿದಳು:

"ಅಣ್ಣಾಸಾಹೇಬ್ ಕೆಟ್ಟವನೆಂದು ನನಗಿನ್ನೂ ತಿಳಿದಿಲ್ಲವೆಂದು ನಾನೆಂದೆನಲ್ಲವೇ ? ಆದರೆ ಅವನ ಕೈಬೆರಳುಗಳ ಗುರುತನ್ನು ಪೋಲೀಸರು ಎಷ್ಟು ಸಲ

ತೆಗೆದುಕೊಂಡಿರುವರೋ ಯಾರಿಗೆ ಗೊತ್ತು ? ನಮಗೇನೋ ಇನ್ನೂ ಅವನ ಸ್ವಭಾವದ ಆ ಮುಖ ನೋಡಲು ಸಿಕ್ಕಿಲ್ಲ. ಅವನು ಯಾರೇ ಇರಲಿ, ಅವನಿಗಾಗಿ ನಾನು ಅಡುಗೆಯವಳೂ ತೊತ್ತೂ ಆಗಿ ದುಡಿಯಲಾರೆ. ನಮ್ಮ ಮನೆಯ ಬಡತನ ಅಪರಿಚಿತನೊಬ್ಬ ನೋಡುವದು ನನಗೆ ಬೇಕಾಗಿಲ್ಲ. ನನ್ನ ಪ್ರಾಮಾಣಿಕ ಜೀವನದಲ್ಲೂ ನನ್ನ ಬಡತನದಲ್ಲೂ ನನಗೆ ಅಭಿಮಾನವಿದೆ. ಬೇರೆಯವರು ನಕ್ಕರೆ ನನ್ನಿಂದ ತಡೆಯಲಾಗದು. ಅದಕ್ಕಾಗಿ ಅಣ್ಣಾ, ಆದಷ್ಟು ಬೇಗ ಆ ನಿನ್ನ ಗೆಳೆಯ ಅಣ್ಣಾಸಾಹೇಬನನ್ನು ನಮ್ಮ ಮನೆಯಿಂದ ಹೊರಕ್ಕೆ ದಾಟಿಸು. ಇಲ್ಲವಾದರೆ ನನಗೆ ಸಮಾಧಾನವೇ ಸಿಕ್ಕಲಾರದು."

ಇಷ್ಟು ಮಾತಾಡಿ ಪ್ರಮಿಲೆ ನಗಹತ್ತಿದಳು. ಅದೊಂದು ಆವಳ ಮಾನಸಿಕ ದುರ್ಬಲತೆ. ಯಾರ ಮೇಲೂ ಅವಳ ಸಿಟ್ಟು ಬಹಳ ಸಮಯವಿರುತ್ತಿರಲಿಲ್ಲ. ಯಾರ ಮೇಲೆ ಸಿಟ್ಟಿಗೆದ್ದಿರುತ್ತಿದ್ದಳೋ ಅವರಲ್ಲಿಯೇ ನಗೆ ಹುಟ್ಟಿಸುವ ವಿಶೇಷವೊಂದನ್ನು ಹುಡುಕಿಕೊಂಡು ನಕ್ಕುಬಿಡುವಳು. ಚಿಕ್ಕ ಮಗುವಿನಂತೆ ಹಾಸುಗೆಯಲ್ಲಿ ಮುಖವನ್ನಡಗಿಸಿ ಕಮಲಾಕಾಂತ ಬಿದ್ದಿರುವದನ್ನು ಕಂಡು ಅವಳಿಗೆ ನಗು ಬಂದುದು. ಸಿಡಿಲಿನ ಆರ್ಭಟಕ್ಕೆ ಇಲಿಯು ಹೋರಿನಲ್ಲಿ ಸೇರಿ, ಸಿಡಿಲು ಕಡಿಮೆಯಾದೊಡನೆ ಹೊರಕ್ಕೆ ಇಣಿಕಿ ನೋಡುವಂತೆ ಕಮಲಾಕಾಂತ ಹೊದಿಕೆಯೊಳಗಿಂದ ಆಗಾಗ ಮುಖವನ್ನು ಹೊರಕ್ಕೆ ತೆಗೆದು ನೋಡುತ್ತಿದ್ದ.

"ನಿಜವಾಗಿಯೂ ನೀನು ಮಾಡಿದ್ದು ಕೆಟ್ಟದ್ದು. ನಿನಗೆ ಸ್ವಲ್ಪವಾದರೂ ಬುದ್ಧಿಯೂ, ವಿಚಾರಶಕ್ತಿಯೂ ಇದ್ದಿದ್ದರೆ ನೀನು ಹೀಗೆ ಮಾಡುತ್ತಿರಲಿಲ್ಲ. ನೀನೇ ಯೋಚಿಸು. ಅತಿಥಿಗಳನ್ನು ಬರಮಾಡಿಕೊಳ್ಳುವ ಸ್ಥಿತಿ ನಮ್ಮಲ್ಲಿದೆಯೇ ? ನಾನೇ ನಿನ್ನ ಅಣ್ಣಾಸಾಹೇಬನೊಡನೆ ಸರಿಯಾಗಿ ನಡೆದುಕೊಳ್ಳುವದಿಲ್ಲ. ಅಂದರೆ ಅವನಾಗಿಯೇ ನನ್ನನ್ನು ದ್ವೇಷಿಸಹತ್ತುವನು."

"ನಿನ್ನ ಅಭಿಪ್ರಾಯವಾದರೂ ಏನಿರುವದು ?" ಅಂಜುತ್ತ ಕಮಲಾಕಾಂತ ಕೇಳಿದ.

"ಅವನನ್ನು ಜೇನು ಬಿಡಿಸಲು ಹಚ್ಚುತ್ತೇನೆ."

"ದಯಮಾಡಿ ಅಂಥಾದ್ದು ಮಾಡಬೇಡ."

"ಅದಾದ ಮೇಲೆ ಜೇನುತುಪ್ಪ ತೆಗೆಯಹಚ್ಚುತ್ತೇನೆ. ಅಷ್ಟರಲ್ಲಿ ಅವನಿಗೆ

ಸಾಕಾಗಿ ಹೋಗುವದು. ಅದಕ್ಕೂ ಮಿಕ್ಕಿ ಉಳಿದರೆ ಪಾತ್ರೆ ತೊಳೆಯ ಹಚ್ಚು ತ್ತೇನೆ. ಕೊನೆಯ ಪಕ್ಷ ನಮ್ಮ ಕೆಲಸವಲ್ಲಿ ಉಪಯೋಗಕ್ಕಾದರೂ ಬೀಳಲಿ."

ಕಮಲಾಕಾಂತ 'ಬೇಡ' 'ಬೇಡ' ವೆಂದು ಕೂಗುತ್ತಿದ್ದರೂ ಅವಳು ಕೇಳ ಲಿಲ್ಲ. ಕೋಣೆಯಿಂದ ಹೊರಬಿದ್ದು ಹೋದಳು. ಅವಳು ಅಟ್ಟವನ್ನಿಳಿಯು ತ್ತಿದ್ದ ಸಪ್ಪಳ ಅವನಿಗೆ ಕೇಳಿಸಿತು.

ರಾಜಾಸಾಹೇಬ್ ತನ್ನ ಕೋಣೆಯಲ್ಲಿರಿಸಲಾಗಿದ್ದ ಊಟವನ್ನುಂಡು ಸಿಗರೇಟೊಂದನ್ನು ಸೇದುತ್ತಿದ್ದ. ಆಹ್ಲಾದಕರವಾದ ದಿನವದು. ಶುಭ್ರವಾದ ಆಕಾಶ, ಸ್ವಚ್ಛ ಹವೆ, ಮನಸ್ಸಿನಲ್ಲಿ ಸಮಾಧಾನ. ತನ್ನ ಕಾರ್ಯದಲ್ಲಿ ಸಾಕಷ್ಟು ಪ್ರಗತಿಯನ್ನೂ ಸಾಧಿಸಿದ್ದ ಸಮಾಧಾನ ಬೇರೆ. ಯಾವ ಹುಡುಗಿಯ ಆಸ್ತಿಯ ನ್ನೆಲ್ಲ ಗಿಟ್ಟಿಸಿದ್ದನೋ ಅವಳ ಮನೆಯ ಚಪ್ಪರದ ನೆರಳಲ್ಲೇ ಅವನು ನಿಂತಿದ್ದ. ಅವಳೊಡನೆ ಸಲುಗೆ ಬೆಳಸಿಕೊಂಡು, ತನ್ನ ನಿಜವಾದ ಅಸ್ತಿತ್ವವನ್ನು ಅವಳಿಗೆ ತಿಳುಹಿಸಿ ಅವಳು ತನ್ನ ಹಿಂದಿನ ನಿರ್ಣಯವನ್ನು ಬದಲಿಸುವಂತೆ ಮಾಡಬಹು ದೆಂಬ ಆಶೆಯೂ ಮೂಡಿ ಬಂದಿತ್ತು. ಈ ಮನೆಯಲ್ಲಿ ಕಾಲಿಕ್ಕಿದ ಗಳಿಗೆ ಯಲ್ಲೇ ಅವಳನ್ನು ಕಂಡಿದ್ದ. ಅವಳಿಗೆ ಮೋಹಿತನಾಗಿ ಅವಳನ್ನು ಮೆಚ್ಚಿ ಕೊಂಡಿದ್ದ. ಮುಂಬಯಿಯ ಈ ಹುಡುಗಿಯರಲ್ಲಿ ನೋಡಿದವರನ್ನು ಮುಗ್ಧ ಗೊಳಿಸುವ ಅದಾವುದೋ ವಿಶಿಷ್ಟ ಗುಣವಿರುವದೆಂದೇ ಅವನ ನಂಬುಗೆಯಾ ಗಿತ್ತು. ಎಷ್ಟು ದಿನಗಳಾದರೂ ಈ ಮನೆಯಲ್ಲಿರಲು ಆತ ಸಿದ್ಧನಿದ್ದ.

ಈ ಮನೆಯಲ್ಲೂ ವೈಶಿಷ್ಟ್ಯವಿರದಿರಲಿಲ್ಲ. ಸುತ್ತಲೂಹರಡಿದ್ದ ಇತರ ಮನೆ ಗಳಿಗಿಂತಲೂ ಈ ಮನೆ ಆಕರ್ಷಕವಾಗಿ ಕಂಡಿತ್ತು. ಅದರ ಗೋಡೆಗಳಿಗೆ ಸುಣ್ಣ ಬಳಿದುದರಿಂದಲೋ ಏನೋ! ಅದರೊಂದಿಗೆ ನಿಸರ್ಗದ ರಮಣೀಯ ತೆಯೂ ಆ ಮನೆಯ ಸೌಂದರ್ಯ ಹೆಚ್ಚಿಸಿತ್ತು.

ಪ್ರಮಿಲೆ ಆತನೆಡೆಗೇ ಬರುವುದನ್ನು ಕಂಡ ರಾಜಾಸಾಹೇಬ ಕೆಳಗಿಳಿದು ಅವಳಿಗೆ ಎದುರು ಹೊರಟ. ಸಿಗರೇಟನ್ನು ಬಿಸುಟು ಅವಳ ಹತ್ತಿರ ಬಂದು ನೋಡಿದಾಗ ಮುಂಜಾವಿನಲ್ಲಿ ತಾನಿನ್ನೂ ನಿದ್ರೆಗಣ್ಣಿನಲ್ಲಿ ನೋಡಿದ್ದುದರ ಕಿಂತಲೂ ಅವಳು ಮೋಹಕಳಾಗಿ ಕಂಡಳು. ರಾತ್ರಿಯ ಹುಡುಗಿಯರ ನೆನ ಪಾಗಿ ಅವರೊಡನೆ ಪ್ರಮಿಲೆಯನ್ನು ತುಲನೆ ಮಾಡಿ ನೋಡಿದ. ಸ್ತ್ರೀಯ ಸೌಂದರ್ಯವನ್ನು ವರ್ಣಿಸಲು ಅವನನ್ನು ಕೇಳಿದ್ದರೆ 'ನಿನ್ನಿನ ಹುಡುಗಿಯರಿಗೆ

ಎಲ್ಲ ರೀತಿಯಿಂದ ವಿರುದ್ಧವಾದುದೇ ಸ್ತ್ರೀಸೌಂದರ್ಯ' ಎಂದು ಆತ ತಟ್ಟನೆ ಹೇಳಬಹುದಿತ್ತು. ಪ್ರಮೀಲೆ ಮಧ್ಯಮ ತರಗತಿಯ ಮೈಕಟ್ಟಿನವಳು. ಧ್ವನಿಯೂ ಸಣ್ಣದಾಗಿದ್ದರೂ ಅದನ್ನು ಮತ್ತೊಮ್ಮೆ ಕೇಳಬೇಕೆಂದು ಆಸೆಯೆನ್ನಿಸುವಷ್ಟು ಕೋಮಲವಾಗಿತ್ತು.

"ನಿಮ್ಮ ಮನೆಯ ಸೌಂದರ್ಯದ ಬಗ್ಗೆ ಆಶ್ಚರ್ಯವಾಗುತ್ತದೆ." ಅವನೆಂದ.

"ಅದರ ಬಾಹ್ಯ ಸೌಂದರ್ಯಕ್ಕೆ ಎಲ್ಲರೂ ಮೋಸ ಹೋಗುತ್ತಾರೆ. ನೀರು ನೋಡಿ ಈಜುವ ಮನಸ್ಸಾಗಿ ನೀರಲ್ಲಿ ಹಾರಿದರೆ ಮೊಸಳೆಗಳ ಕಾಟವಿದ್ದಂತೆ! ಸುತ್ತಲಿನ ಗಿಡಗಂಟೆಗಳೂ ಸೊಗಸಾಗಿ ಕಾಣುತ್ತವೆ. ಆದರೆ ಅಲ್ಲಿ ಹೋದರೆ ನಿಮ್ಮ ರಕ್ತ ಹೀರುವ ಪ್ರಾಣಿಗಳೂ ಇವೆ. ರಾತ್ರಿಯೂ ಬಲು ಸೊಗಸಾಗಿರುತ್ತದೆ. ಹೊರಗೆ ಕಾಲಿಕ್ಕಿದರೆ ಸೊಳ್ಳೆಗಳು ನಿಮ್ಮನ್ನು ತಿಂದುಬಿಡಬಹುದು." ಪ್ರಮೀಲೆ ಉತ್ತರಿಸಿದಳು.

ತನ್ನ ಮಾತಿನಿಂದ ಅವನು ಬೆದರಿದನೋ ಇಲ್ಲವೋ ನೋಡಲೆಂದು ತುಸು ತಡೆದಳು. ಅವಳ ಮಾತಿಗೆ ಅವನು ಅಂಜಿ ಮನೆಯೊಳಗೆ ಓಡಿಹೋಗಿ ತನ್ನ ಬಟ್ಟೆಬರೆ ಕಟ್ಟಿಕೊಂಡು ಪಾರಾಗುವ ಲಕ್ಷಣ ಕಾಣಲಿಲ್ಲ.

"ಈ ಜೇನುಹುಳಗಳಂತೂ ಯಾವಾಗ ಕಚ್ಚುವವೋ ಹೇಳಬರುವಂತಿಲ್ಲ. ನಿಮಗೆ ಅಂಜಿಕೆಯಾಗುವದಿಲ್ಲವೇ ಅಣ್ಣಾಸಾಹೇಬ್ ?" ಎಂದಳು.

"ಇಲ್ಲ. ಪಾಪ ಚಿಕ್ಕ ಪ್ರಾಣಿಗಳು...."

ಅವನ ಈ ಮಾತುಗಳಿಂದ ಅವಳಿಗೆ ಆನಂದವಾಗಿರಬೇಕು. ಮೆಲುನಗೆಯೊಂದಿಗೆ,

"ನಿಮಗೆ ಆ ಜೇನುಹುಳುಗಳ ಮೇಲೆ ಅಷ್ಟು ಮಮತೆಯಿರುವದಾದರೆ ಅವನ್ನು ಜೇನುಹುಟ್ಟಿನಿಂದ ಹಾರಿಸಲು ನನಗೆ ಸಹಾಯ ಮಾಡುವಿರಾ ?"

"ಓಹೋ, ಆಗಬಹುದು."

ಅವಳು ಮನೆಯೊಳಕ್ಕೆ ಓಡಿಹೋಗಿ ಕಮಲಾಕಾಂತನನ್ನು ಎಬ್ಬಿಸಿ,

"ಅವನು ನನ್ನ ಕೈಯಲ್ಲಿ ಸಿಕ್ಕ. ಇಲ್ಲಿಂದ ಓಡಿಹೋಗುವದೊಂದೇ ಅವನಿಗಿರುವ ದಾರಿ" ಎಂದಳು.

ಅವಳ ಮಾತು ಕೇಳಿದ ಕಮಲಾಕಾಂತ ಎದ್ದು ಕುಳಿತು,

"ಏನು ಮಾಡಿದೆಯೇ ಪ್ರಮೀಲಾ ?" ಎಂದು ಪ್ರಶ್ನಿಸಿದ.

"ಅದು ನಿನಗೆ ತಿಳಿಯಲಾರದು. ಜೇನುಹುಳು ಹಾರಿಸಲು ಸಹಾಯ ಮಾಡಲು ಸಿದ್ಧನಾಗಿದ್ದಾನೆ. ಜೇನುಹುಳ ಕಚ್ಚಿದ ನಂತರ ಅಮೋನಿಯಾ ಕೂಡಿಸಿದ ನೀರಿನಿಂದ ಅವನ ಮೈ ತೊಳೆಯಲು ಎದ್ದೇಳು, ಪುಣ್ಯಾತ್ಮಾ."

"ಅವನು ನಮ್ಮ ಅತಿಥಿಯಲ್ಲವೇ ?"

"ಗಾಬರಿಯಾಗಬೇಡ. ಇನ್ನು ಬಹಳ ಹೊತ್ತು ಆತ ಇಲ್ಲಿ ಉಳಿಯ ಲಾರ."

"ನೀನು ಹಾಗೆಲ್ಲ ಮಾಡಬಾರದು. ನಾನೊಮ್ಮೆ ನಿನಗೆ ಸಹಾಯ ಮಾಡಹೋಗಿ ಒಂದು ವಾರವೆಲ್ಲಾ ಅವುಗಳ ಕಡಿತದಿಂದಾದ ನೋವನ್ನು ಉಪಚರಿಸಿಕೊಳ್ಳುವದರಲ್ಲೇ ಕಳೆದಿದ್ದೇನೆ."

"ನೀನು ಆಗ ಸಿಗರೇಟು ಸೇದುತ್ತಿದ್ದಿ. ಅವಕ್ಕೆ ಸಿಗರೇಟಿನ ಹೊಗೆ ಅಂದರಾಗದು."

"ಅವನೂ ಈಗ ತಾನೇ ಸಿಗರೇಟು ಹೊತ್ತಿಸಿದ್ದನಲ್ಲ ?"

"ಸಾಕು, ಬಾಯಿ ಮುಚ್ಚು."

ಅವಳು ಜೇನುತುಪ್ಪ ತೆಗೆಯಲು ಬೇಕಾಗುವ ಆಯುಧಗಳನ್ನು ಹೊತ್ತು ತರುತ್ತಿದ್ದುದನ್ನೇ ರಾಜಾಸಾಹೇಬ ಕುತೂಹಲದಿಂದ ನೋಡುತ್ತಿದ್ದ. ಸ್ಟೂಲ್; ಹೊಗೆ ಕಾರುವ ಬತ್ತಿ, ಚಾಕು, ಸ್ಕ್ರೂಡ್ರಾಯವ್ಹರ್, ರಾಣಿಹುಳುಗಳನ್ನು ಹಿಡಿಯುವ ಬಲೆ, ಎಲ್ಲವನ್ನೂ ಅವಳಿಂದ ಕಿತ್ತುಕೊಂಡು,

"ನಾನು ಹೊರುವೆ ತರ್ರಿ. ಇವೆಲ್ಲಾ ಒಂದು ಗಾಡಿ ಇವೆಯಲ್ಲ!" ಎಂದ.

ಈ ಆಯುಧಗಳನ್ನು ನೋಡಿ ಮುಂದಿನ ಕೆಲಸವನ್ನು ಕಲ್ಪಿಸಿಕೊಂಡು ಅವನು ಭಯಪಡಬಹುದೆಂದು ನಂಬಿದ್ದ ಪ್ರಮೀಲೆಗೆ ಅವನ ದಿಟ್ಟತನದಿಂದ ಅಸಮಾಧಾನವಾಯಿತು.

"ಈ ಕೆಲಸಕ್ಕೆ ನೀವು ಮುಖವಾಡ ಉಪಯೋಗಿಸುವದಿಲ್ಲವೇ ?" ಆತ ಕೇಳಿದ.

ಪ್ರಮೀಲೆ ತಪ್ಪದೆ ಅದರ ಉಪಯೋಗವನ್ನು ಮಾಡುತ್ತಿದ್ದಳು. ಅವಳ

ಮತ್ತು ಅವಳ ಸಾಕು ಜೇನುಹುಳುಗಳ ನಡುವೆ ಪರಿಚಯ ಬೆಳೆದು ಬಂದಿತ್ತು. ಅವಳು ಮುಖವಾಡ ಧರಿಸದಿದ್ದರೂ ಅವಳನ್ನು ಕಚ್ಚುತ್ತಿರಲಿಲ್ಲವೆನ್ನಬಹುದು. ಆದರೆ ಇದುವರೆಗೆ ಆಕೆ ಅದನ್ನು ಪರೀಕ್ಷಿಸಲು ಮಾತ್ರ ಹೋಗಿರಲಿಲ್ಲ. "ಆ ಹುಳುಗಳೆಲ್ಲ ನನ್ನನ್ನು ಬಲ್ಲವು, ನಾನು ಬಂದ ಉದ್ದೇಶವನ್ನೂ ಗುರುತಿಸಿಕೊಳ್ಳ ಬಹುದು. ಆದರೆ ಆ ಸಾವಿರಾರು ಹುಳಗಳಲ್ಲಿ ಒಂದೇ ಒಂದು ನನ್ನನ್ನು ಗುರು ತಿಸದಿದ್ದರೆ ನನ್ನ ಗತಿಯೇನು ?" ಎಂದು ಹೆದರಿ ಅವಳು ಮುಖವಾಡ ಧರಿಸು ವದನ್ನು ಬಿಟ್ಟಿರಲಿಲ್ಲ. ಇಂದು ಮಾತ್ರ ಅವಳ ವಿಚಾರವೇ ಬೇರೆಯಾಗಿತ್ತು. ತಾನು ಮುಖವಾಡ ಧರಿಸಿ, ಆತನಿಗೆ ಕೊಡದಿರಲಿಕ್ಕಾದೀತೇ ? ಆತನಿಗಂತೂ ಮುಖವಾಡ ಕೊಡಲು ಅವಳು ಸಿದ್ಧಳಿರಲಿಲ್ಲ.

"ನಾನು ಈ ಹುಳುಗಳಿಗೆ ಅಂಜುವದೇ ಇಲ್ಲ. ಅಂತೆಯೇ ಮುಖ ವಾಡ ಧರಿಸುವದಿಲ್ಲ. ನೀವು ಅಂಜುತ್ತೀರೇನು ?" ಎಂದು ಕೇಳಿದಳು.

"ಇಲ್ಲ."

"ಅವುಗಳಲ್ಲೊಂದು ನಿಮ್ಮನ್ನು ಕಚ್ಚಲು ಬಂದರೆ ನೀವೇನು ಮಾಡ ಬೇಕೆಂಬುದು ಗೊತ್ತಿದೆ ತಾನೆ ?"

"ಅವು ಬಂದೇ ಬರುವವು. ನಾನು ಅವನ್ನು ತಡೆಗಟ್ಟುವದಿಲ್ಲ ತಾವೇ ಬೇಕಾದ್ದು ಮಾಡಿಕೊಳ್ಳಲಿ. "

ಪ್ರಮೀಲೆಗೆ ಆತನ ಮಾತಿನಲ್ಲಿ ನಂಬುಗೆಯಾಗಲಿಲ್ಲ. ಆತ ಬಡಾಯಿ ಕೊಚ್ಚುತ್ತಿರುವನೆಂದು ಭಾವಿಸಿದಳು. ಜೇನುಗೂಡುಗಳತ್ತ ಇಬ್ಬರೂ ಮೌನ ವಾಗಿ ಬಂದರು.

ಗಿಡಗಳ ಟೊಂಗೆಗಳಿಗೆ ಜೇನುಹುಳುಗಳು ಸಾಲಾಗಿ ಮನೆಕಟ್ಟಿಕೊಂಡು ಜೇನುತುಪ್ಪ ಸಂಗ್ರಹಿಸುತ್ತಿದ್ದವು. ಎಲ್ಲೆಲ್ಲಿಯೂ ಆ ಹುಳುಗಳ ಸಪ್ಪಳವೇ. ಕೆಲವು ಹುಳುಗಳು ಜೇನುತುಪ್ಪ ಹುಡುಕುತ್ತಿದ್ದವು. ಇನ್ನೂ ಕೆಲವು ಅದನ್ನು ತಂದು ಹುಟ್ಟುಗಳಲ್ಲಿಡಲು ಹವಣಿಸುತ್ತಿದ್ದವು. ಕೆಲವು ನಿರುದ್ಯೋಗಿಗಳು ತಾವೂ ಕೆಲಸದಲ್ಲಿರುವವರಂತೆ ನಟಿಸುತ್ತ ಇತರರಿಗೂ ಬರುಹೋಗುವುದಕ್ಕೆ ತೊಂದರೆ ಕೊಡುತ್ತಿದ್ದವು. ಅಂಥ ನಿರುದ್ಯೋಗಿ ಹುಳುವೊಂದು ರಾಜಾಸಾಹೇಬನ ಮುಖಕ್ಕೆ ಮುದ್ದುಕೊಟ್ಟಿತು. ಆ ಮುದ್ದಿನಿಂದಾಗಿ ಆತ ತುಸು ಹಿಂದೆ ಸರಿದು ದನ್ನು ಕಂಡ ಪ್ರಮೀಲೆಯ ಹೃದಯಕ್ಕಾದ ಆನಂದ ಹೇಳತೀರದು.

“ಹೆದರಬೇಡಿರಿ ಅಣ್ಣಾಸಾಹೇಬ್, ಅದು ಗಂಡು ಹುಳ. ಇಂಗ್ಲೀಷಿನಲ್ಲಿ ಅದಕ್ಕೆ ಡ್ರೋನ್ ಅನ್ನುತ್ತಾರೆ. ಅದು ಕಚ್ಚಿದರೂ ನೋವಾಗುವದಿಲ್ಲ.”

“ಅವಕ್ಕೆ ಬುದ್ಧಿಯೂ ಇರುವದಿಲ್ಲ. ಅದೋ ಮತ್ತೆ ಬಂತು !”

“ನಿಮ್ಮ ಸಿಗರೇಟಿನ ವಾಸನೆ ಹತ್ತಿರಬೇಕು. ಅಯ್ಯೋ ! ಅದಕ್ಕೆ ಸಾವಿರದಾ ಹದಿನೆಂಟು ಮೂಗಿನ ಹೊರಳೆಗಳಿರುತ್ತವೆ.”

“ಪಾಪ, ಅವಕ್ಕೂ ಸಿಗರೇಟಿನ ಮೇಲೆ ಆಸೆಯಿರಬೇಕು.”

ಪ್ರಮೀಲೆಗೆ ತನ್ನ ಜೇನು ಹುಳುಗಳ ಮೇಲೇ ಸಿಟ್ಟು ಬಂದಿತ್ತು. ಅವು ಆತನನ್ನು ಕಚ್ಚುತ್ತಲೇ ಇರಲಿಲ್ಲವಲ್ಲ ! ಆವನ ಪಕ್ಕದಲ್ಲಿಂದ ಹಾರಿ ಹೋಗುತ್ತಿದ್ದವು. ಅವನ ಶರ್ಟು, ಬೆನ್ನಿನ ಮೇಲೂ ಕೂಡ್ರುತ್ತಿದ್ದವು. ಅವನ ಮುಖ ನೋಡಿ ‘ನೀವಾರು ?’ ಎಂದು ಕೇಳುವಂತೆ ಕಾಣುತ್ತಿದ್ದವು. ಆದರೆ ಒಂದು ಹುಳವೂ ಆತನನ್ನು ಕಚ್ಚಲಿಲ್ಲ ! ಪಾಪ, ಕಮಲಾಕಾಂತ ಇನ್ನೂ ಅರ್ಧ ಫರ್ಲಾಂಗ ದೂರಿದ್ದರೂ ಅವನನ್ನು ಕಚ್ಚಲು ಧಾವಿಸಿ ಬರುತ್ತಿದ್ದವು. ಅದಕ್ಕೆ ಕಾರಣವೆಂದರೆ: ಕಮಲಾಕಾಂತ ಜೇನುಹುಳು ಕಂಡರೆ ಸಾಕು, ಲೀಲಾರಾಣಿಯಂತೆ ಭರತನಾಟ್ಯವಾಡುತ್ತಿದ್ದ.

ಮೌನವಾಗಿ ರಾಜಾಸಾಹೇಬ್ ಕೆಲಸಕ್ಕೆ ಆರಂಭಿಸಿದ. ಪ್ರಮೀಲೆ ಹೊಗೆ ಕಾರುವ ಬತ್ತಿಗೆ ಬೆಂಕಿ ಹಚ್ಚಿ ಹುಟ್ಟಿನ ಹತ್ತಿರ ಒಯ್ದಳು. ಪೋಲೀಸರಂತೆ ಹೊರಕ್ಕೆ ಕಾವಲಿಗೆ ನಿಂತಿದ್ದ ಒಂದೆರಡು ಹುಳುಗಳು ಹುಟ್ಟಿನಲ್ಲಿ ಒಳಸೇರಿ ತಮ್ಮ ಸೈನ್ಯಕ್ಕೆ ಸೂಚನೆ ಕೊಟ್ಟಿರಬೇಕು. ಕೃತ್ರಿಮ ಜೇನುಹುಟ್ಟನ್ನು ಕೆಳಕ್ಕಿಳಿಸಿಕೊಂಡು ಪ್ರಮೀಲೆ,

“ಇದನ್ನು ನೀವು ಹಿಡಿಯುವಿರಾ ಅಣ್ಣಾಸಾಹೇಬ್” ಎನ್ನುತ್ತ ಅವನ ಕೈಗೆ ಹುಟ್ಟನ್ನು ಕೊಟ್ಟಳು. ಅವಳ ಹೃದಯವನ್ನು ಯಾರೋ ಇರಿಯುತ್ತಿದ್ದಂತೆ ಭಾಸವಾಗುತ್ತಿತ್ತು. ಆ ಹುಟ್ಟಿನಲ್ಲಿನ ಜೇನುತುಪ್ಪವನ್ನೆಲ್ಲ ತೆಗೆದುಕೊಂಡುದಾಯಿತು.

ತನ್ನ ಗೆಳೆಯನ ಸ್ಥಿತಿಯೇನಾಗುವದೋ ಎಂದು ನೋಡಲು ಬಂದಿದ್ದ ಕಮಲಾಕಾಂತ, ಅವನು ದೃಢವಾಗಿ ನಿಂತುದನ್ನೂ ಹುಟ್ಟು ಕೆಳಕ್ಕಿಳಿಸಿದುದನ್ನೂ ಕಂಡು ಮನೆಯತ್ತ ತಿರುಗಿ ಧಾವಿಸಿದ್ದ.

ಹುಟ್ಟಿನಲ್ಲಿನ ಎಲ್ಲ ತುಪ್ಪವೂ ಪಾತ್ರೆಯನ್ನು ಸೇರಿದ ನಂತರ ಹಿಂದೆ ಉಳಿದಿದ್ದ ಒಂದೆರಡು ಹುಳುಗಳೂ ಧಾವಿಸಿ ಬಂದು ಮಾಯವಾದುವು. ಮತ್ತೆ ಹುಟ್ಟನ್ನು ಅಲ್ಲಿ ಅಂಟಿಸಲಾಯಿತು. ಅದು ಕೃತ್ರಿಮ ಹುಟ್ಟು!

"ಈ ಹುಳುಗಳು ತಮಗೆ ತೊಂದರೆ ಕೊಡುವವರನ್ನೂ ಲಕ್ಷಿಸದಿರುವದು ಆಶ್ಚರ್ಯದ ಮಾತು. ತುಪ್ಪದಿಂದ ತುಂಬಿದ ಹುಟ್ಟು ಬರಿದಾದೊಡನೇ ಅವು ಇನ್ನಾವ ವಿಚಾರವನ್ನೂ ಮಾಡದೆ ಬೇರೆ ಮನೆ ಹುಡುಕಲು ಹೊರಟುಬಿಡುತ್ತವೆ. ತುಪ್ಪ ಇಲ್ಲವಾದದ್ದರ ಕಾರಣದ ಪರಿವೆಯೇ ಅವಕ್ಕಿದ್ದಂತಿಲ್ಲ. ಜೇನು ಬಿಡಿಸುವ ಈ ಕೆಲಸಕ್ಕೆ ಅನುಭವ ಬೇಕು. ಮೊದಲ ಬಾರಿ ನಾನು ಜೇನು ಬಿಡಿಸಲು ಹೋದಾಗ ನನ್ನ ಕಣ್ಣುಗಳನ್ನು ಮುಚ್ಚಿ, ನನ್ನ ದೇಹದ ತುಸುವಾದರೂ ಭಾಗ ಅವು ಕಚ್ಚದೆ ಬಿಡುವವೋ ಇಲ್ಲವೋ ಎಂದೂ ಹೆದರಿದ್ದೆ." ಅಣ್ಣಾ ಸಾಹೇಬ್ ಹೇಳುತ್ತಿದ್ದ.

ಪ್ರಮೀಲೆಯ ಕಣ್ಣುಗಳಲ್ಲಿ ನಿರಾಶೆ ಮೂಡಿಬಂದಿತ್ತು.

"ನೀವು ಮೊದಲ ಬಾರಿ ಪ್ರಯತ್ನಿಸಿದ್ದು ಯಾವಾಗ? ಅಂತೂ ಈ ಮೊದಲೂ ನೀವು ಈ ಕೆಲಸ ಮಾಡಿದ್ದೀರಿ?" ಅವಳ ಧ್ವನಿ ನಡುಗುತ್ತಿತ್ತು. ತಾನು ಯೋಜಿಸಿದ್ದ ಮಂತ್ರ ವಿಫಲವಾಯಿತೆಂದು ಅಸಮಾಧಾನವಾಗಿತ್ತು. ರಾಜಾಸಾಹೇಬ್ ಅವಳ ಕಣ್ಣುಗಳನ್ನು ನೋಡಿದ. ಅವುಗಳಲ್ಲಿ ಅವನಿಗೆ ಅದೇನೂ ಕಂಡುಬರಲಿಲ್ಲ.

"ಒಮ್ಮೆ ಏಕೆ, ಸಾವಿರ ಸಲ. ಜೇನುಹುಳ ಸಾಕುವ ಉದ್ಯೋಗವನ್ನು ಒಂದು ವರ್ಷದ ತನಕ ಕಲಿತಿದ್ದೇನೆ."

ಕ್ಷಣಕಾಲ ಪ್ರಮೀಲೆಗೆ ತನ್ನ ಬಗೆಗೇ ಕನಿಕರವೆನ್ನಿಸದಿರಲಿಲ್ಲ. ತನ್ನ ಯೋಜನೆಗಾಗಿ ತಾನೇ ಅಸಹ್ಯಪಡುವಂತಾಯಿತು. ಸಾವಿರ ಸಲ ಈ ಕೆಲಸ ನಿರ್ವಹಿಸಿದ್ದ ತಜ್ಞನೊಬ್ಬನನ್ನು ಅವಳು ಪರೀಕ್ಷಿಸುತ್ತಿರಲಿಲ್ಲವೆ?"

ಮರುಕ್ಷಣದಲ್ಲೇ ಅವಳ ವಿಚಾರ ಬೇರೆ ದಾರಿ ಹಿಡಿಯಿತು. ಇಬ್ಬರು ಕ್ರಿಕೆಟ್ ಆಟಗಾರರು ಅಲ್ಪ ಪರಿಚಯದಲ್ಲೇ ಸ್ನೇಹಿತರಾಗುವಂತೆ ಜೇನುಹುಳು ಸಾಕುವ ಉದ್ಯೋಗದಲ್ಲಿದ್ದ ಇವರಿಬ್ಬರಿಗೂ ಸ್ನೇಹವಾಗುವುದೂ ಸಹಜವೇ ಅಲ್ಲವೆ! ಅಲ್ಪಸ್ವಲ್ಪ ಭಿನ್ನಾಭಿಪ್ರಾಯಗಳಿದ್ದರೂ ಕರಗಿಹೋಗುತ್ತವೆ. ಈ ತರದ ಸಂಬಂಧ ಬಂದಾಗ ಅಪರಿಚಿತ ಗಂಡಸು—ಹೆಂಗಸರಲ್ಲಿಯ ಸಂಕೋಚ

ಭಾವ ಕಳೆದುಹೋಗಿ ಒಂದು ಬಗೆಯ ಬಾಂಧವ್ಯ ಬಂಧನವುಂಟಾಗುವದು. ಅವರಲ್ಲಿ ಪರಸ್ಪರರ ಬಗೆಗಿದ್ದ ತಿರಸ್ಕಾರ, ದ್ವೇಷ, ತುಚ್ಛ ಭಾವನೆಗಳೆಲ್ಲ ಮಾಯವಾಗಿ ವೃತ್ತಿ ಬಾಂಧವರಾಗಿ ಬಿಡುವರು.

ರಾಜಾಸಾಹೇಬನ ಮಾತು ಪ್ರಮಿಲೆಯ ವಿಚಾರಗಳ ಬುಡವನ್ನೇ ಕಿತ್ತು ಬಿಟ್ಟಿತ್ತು. ಅವನ ಬಗೆಗಿದ್ದ ದ್ವೇಷವನ್ನೆಲ್ಲ ತೊಡೆದು ಹಾಕಿತ್ತು. ಆತನ ಸಹವಾಸವೇ ಬೇಡವೆಂದಿದ್ದಳಲ್ಲವೇ ? ಆದರೆ ಈಗ ಅವನ ವಿಷಯದಲ್ಲಿನ ಅವಳ ವರ್ತನೆ ಪೂರ್ತಿ ಬದಲಾಗಿತ್ತು. ಆತ ಆ ಮನೆಯಲ್ಲಿ ಬೇಕಾದಷ್ಟು ದಿನ ಇರಲಿ ಎಂದು ಆಕೆ ನಿರ್ಧರಿಸಿದಳು.

"ನೀವು ಜೇನುಹುಳ ಸಾಕಿದ್ದಿರಾ, ಅಣ್ಣಾಸಾಹೇಬ್ ?"

"ಇಲ್ಲ, ನಾನು ಸಾಕಿಲ್ಲ. ಅದಕ್ಕೆ ಬೇಕಾಗುವ ಬಂಡವಾಳ ನನ್ನಲ್ಲಿರಲಿಲ್ಲ. ಹಣದ ಕೊರತೆಯೆಂದರೆ........"

"ನನಗೆ ಗೊತ್ತಿದೆ, ಹಣವೆಂದರೆ ವಿಚಿತ್ರ........ "

"ಹಣ್ಣವಿಲ್ಲದೆ ಜೇನು ಸಾಕುವ ಮಹತ್ಕಾರ್ಯದಲ್ಲಿ ಕೈ ಹಾಕಲು ನನಗೆ ಧೈರ್ಯ ಬರಲಿಲ್ಲ. ಆ ವಿಚಾರವನ್ನೇ ಬಿಟ್ಟುಬಿಟ್ಟೆ. ನನ್ನ ಗೆಳೆಯರೂ ನನಗಾಗಿ ಪ್ರಯತ್ನಪಟ್ಟು ಒಂದು ಕೆಲಸ ಕೊಡಿಸಿದರು...."

"ಎಂಥ ಕೆಲಸ ?"

"ಕ್ಲಬ್ಬಿನಲ್ಲಿ ಆಟಗಳನ್ನು ಕಲಿಸುವದು."

"ಗೊಬ್ಬೂರಿನಲ್ಲೇ ?"

"ಹೌದು."

"ಅಂತೂ ಹಳ್ಳಿಗಾಡಿನಲ್ಲಿ ವಾಸವಾಗಿ ಜೇನು ಬೆಳೆಸುವ ಆಸೆ ನಿಮಗೂ ಇತ್ತು." ಪ್ರಮಿಲೆಗೆ ಆವನ ಬಗ್ಗೆ ಮರುಕವೆನ್ನಿಸಿತೆಂಬುದನ್ನು ಅವಳ ಧ್ವನಿಯಲ್ಲಿ ಗುರುತಿಸಬಹುದಿತ್ತು.

"ಗೊಬ್ಬೂರಿನ ಬಗ್ಗೆ ನನಗೆ ದ್ವೇಷವಿಲ್ಲ. ಆದರೂ ಗ್ರಾಮಾಂತರದಲ್ಲಿ ನನ್ನದೇ ಆದ ತೋಟ ಸಾಗುಮಾಡಿ, ಅದರಲ್ಲೇ ಜೇನುಹುಳ ಸಾಕುವದೂ ನನ್ನ ಕನಸೇ ಸರಿ."

ಕ್ಷಣಕಾಲ ಅವನು ತನ್ನನ್ನೇ ಮರೆತು ಮಾತಾಡುತ್ತಿದ್ದ. ತನ್ನ ಆರ್ಥಿಕ ಸ್ಥಿತಿಯ ಬಗೆಗೆ ಆತ ಹೀಗೆಲ್ಲ ಮಾತಾಡುವದು ಸರಿಯಾಗಿರಲಿಲ್ಲ. ಅವನು

ಬಯಸಿದರೆ ಒಂದೇಕೆ, ಎಷ್ಟೋ ತೋಟಗಳನ್ನು ಕೊಳ್ಳುವಷ್ಟು ಹಣ ಸಿಕ್ಕಿತ್ತಲ್ಲವೆ ? ಲಕ್ಷಾಧೀಶ್ವರನಾಗಿಯೂ ಅದಕ್ಕೆ ಶೋಭಿಸುವಂತೆ ವರ್ತಿಸಲು ತುಸು ರೂಢಿಯೂ ಬೇಕೆಂದು ಅವನಿಗೆ ಹೊಳೆಯಿತು.

"ನನ್ನ ಮಹತ್ವಾಕಾಂಕ್ಷೆಯೂ ಅದೇ." ಎಂದು ಪ್ರಮೀಲೆಯೂ ತನ್ನ ಮನೋಬಯಕೆಯನ್ನು ತಿಳಿಸಿದಳು.

ತನ್ನ ಹೃದಯವನ್ನೆಲ್ಲ ಆತನ ಮುಂದೆ ಬಿಚ್ಚಿಡಲು ಸಿದ್ಧಳಾಗಿ,

"ನನ್ನಲ್ಲಿ ಹಣವಿದ್ದರೆ ಒಂದು ತೋಟ ಕೊಳ್ಳುತ್ತಿದ್ದೆ. ಸುಗ್ಗಿಯಕಾಲದಲ್ಲಿ ಆ ಊರಲ್ಲಿನ ಎಲ್ಲ ಚಿಕ್ಕ ಮಕ್ಕಳನ್ನೂ ಕರೆದುಕೊಂಡು ಹೋಗಿ ಅವರಿಗೆ ಸಾಕಾಗುವಷ್ಟು ಹಣ್ಣುಹಂಪಲು ತಿನಿಸುತ್ತಿದ್ದೆ " ಎಂದಳು.

"ಆ ಹುಡುಗರು ತೋಟವನ್ನೇ ಹಾಳುಮಾಡುತ್ತಿದ್ದರು........"

"ಅದಕ್ಕೆ ನಾನೇನು ಚಿಂತಿಸುತ್ತಿರಲಿಲ್ಲ. ನನ್ನಲ್ಲಿ ಹಣದ ಕೊರತೆಯೆ ? ಹಾಳಾದ ತೋಟವನ್ನು ರಿಪೇರಿ ಮಾಡುವದು ಸಾಧ್ಯವಿದ್ದರೆ ಮಾಡಿಸುವದು, ಇಲ್ಲವಾದರೆ ಬೇರೊಂದು ತೋಟವನ್ನೇ ಕೊಳ್ಳುವದು. ಎಲಾ, ಶೇಖ್ ಮಹಮ್ಮದನ ವಿಚಾರಗಳಲ್ಲವೆ ?" ಎಂದು ನಗುತ್ತ ಅವನನ್ನು ನೋಡಿದಳು.

ಏನೋ ನೆನಪಾಯಿತು. ವ್ಯವಸಾಯ ಬಂಧುವೊಬ್ಬನ ಮುಂದೆ ಗೌಪ್ಯದ ಮಾತಾದರೂ ಎಲ್ಲಿಯದು ? ತುಸು ಹಿಂಜರಿದರೂ ಮತ್ತೆ ಮುಂದುವರಿಸಿದಳು:

"ನಮ್ಮ ಸೋದರಮಾವನೊಬ್ಬನಿದ್ದ........"

ತನ್ನ ಹೃದಯಕ್ಕೆ ಚೂರಿಯಿಂದ ತಿವಿಯಲು ಯಾರೋ ಮುಂದೆ ಬರುತ್ತಿರುವಂತೆ ಕಂಡಿತು ರಾಜಾಸಾಹೇಬನಿಗೆ. ಆತ ತನ್ನ ಮುಖವನ್ನು ಬೇರೆ ಕಡೆಗೆ ತಿರುಗಿಸಿ, ತನ್ನಿಂದಾಗಿ ಅವಳಿಗಾದ ಅನ್ಯಾಯವನ್ನು ಕಲ್ಪಿಸಿಕೊಂಡು ವ್ಯಸನಪಡಹತ್ತಿದ.

"ಇಂಥ ಹತ್ತೆಂಟು ತೋಟಗಳನ್ನು ಕೊಳ್ಳಬಹುದಾದಷ್ಟು ಹಣವನ್ನು ನನಗೆ ಬಿಟ್ಟುಹೋಗಲಿದ್ದ ಸೋದರಮಾವ. ಆದರೆ ಅದ್ಯಾವನೋ ಒಬ್ಬ ರಾಜಾ ಸಾಹೇಬನಂತೆ, ನಮ್ಮ ಮಾವನ ಸ್ನೇಹ ಸಂಪಾದಿಸಿ ಅವನಿಗೆ ಮೋಸ ಮಾಡಿ ತನ್ನ ಹೆಸರಿಗೆ ಎಲ್ಲವನ್ನೂ ವರ್ಗಾಯಿಸಿಕೊಂಡಿದ್ದಾನೆ." ಎನ್ನುತ್ತ ಪ್ರಮೀಲೆ ತನ್ನ ಬಗೆಗೆ ಅವನು ಕನಿಕರಪಡುತ್ತಿರಬಹುದೇ ? ಎಂದು ನೋಡಿದಳು ಅವನ

ಮುಖದಲ್ಲಿ ಕಳೆಯೇ ಇರಲಿಲ್ಲ. "ಅಹಾ! ಎಂಥ ಒಳ್ಳೆಯ ಮನುಷ್ಯನೀತ! ನನ್ನ ದುರ್ದೈವಕ್ಕಾಗಿ ಅವನಿಗೆಷ್ಟು ವಿಷಾದವಾಗಿದೆ!" ಎಂದುಕೊಂಡಳು.

"ಆ ರಾಜಾಸಾಹೇಬ್ ಅದನ್ನು ಹೇಗೆ ಸಾಧಿಸಿಕೊಂಡನೆಂಬುದು ನನಗೆ ತಿಳಿದಿಲ್ಲ. ನಮ್ಮ ಮಾವ ಮೂರ್ಖನಾಗಿರಲಿಲ್ಲವೇನೋ ನಿಜ; ಆದರೆ ಅವನು ಅನೇಕ ರೀತಿಯ ಹಂಚಿಕೆ ಹೂಡಿ ಮಾವನನ್ನು ಬುಟ್ಟಿಗೆ ಹಾಕಿಕೊಂಡಿರಬೇಕು. ಮಾವ ಹಟವಾದಿಯೂ ಹೌದು. ಈ ರಾಜಾಸಾಹೇಬನೊಬ್ಬ ಮಾತ್ರ ಅವನ ಮನವೊಲಿಸುವದರಲ್ಲಿ ಯಶಸ್ವಿಯಾದ."

ಏನೋ ನೆನಪು ಮಾಡಿಕೊಳ್ಳುವವಳಂತೆ ತುಸು ತಡೆದು ಅವಳು ಹೀಗೆಂದಳು:

"ಆದಾದ ಮೇಲೆ ಆ ರಾಜಾಸಾಹೇಬನ ದುರಹಂಕಾರ! ತನ್ನ ವಕೀಲರ ಮುಖಾಂತರ ನನಗೆ ಪತ್ರ ಬರೆಯಿಸಿ, ಆ ಆಸ್ತಿಯನ್ನು ನನಗೆ ಕೊಡಲು ಮುಂದೆ ಬಂದ. ಅವನ ಆ ಮೋಸದ ಕೃತಿಗಾಗಿ ಅವನ ಆತ್ಮ ಒಪ್ಪಿರಲಿಕ್ಕಿಲ್ಲ. ಆತ್ಮದ ಸಮಾಧಾನಕ್ಕಾಗಿ ಹೀಗೆ ಮಾಡಿರಬೇಕು. ನಾನೂ ಸಹಜವಾಗಿಯೇ ಅವನ ಕೊಡುಗೆಯನ್ನು ನಿರಾಕರಿಸಿದೆ."

"ಯಾಕೆ ? ಕಾರಣವೇನು ?"

"ಯಾಕೆನ್ನುವಿರಾ? ನನ್ನನ್ನು ಮೋಸಗೊಳಿಸಿದವನಿಂದ ದಾನ ಪಡೆಯಲೇ ?"

"ಅವನ ಉದ್ದೇಶ ಹಾಗಿರದಿದ್ದರೆ ?"

"ಅದರ ಹೊರತು ಅವನ ಉದ್ದೇಶವಾದರೂ ಬೇರಾವುದು? ಹೋಗಲಿ, ಆ ಮಾತೇ ಬೇಡ. ಇಂಥ ಒಳ್ಳೆಯ ದಿನವನ್ನು ಹೊಲಸು ಮಾತಿನಿಂದ ಹಾಳಿಡುವುದು ಬೇಡ."

ಅವನ ಹೃದಯದಿಂದ ನಿಟ್ಟುಸಿರೊಂದು ಹೊರಬಂದು ಗಾಳಿಯಲ್ಲಿ ಲೀನವಾಯಿತು. ಹಣ ಬಿಟ್ಟುಕೊಡುವದರಲ್ಲೂ ಇಷ್ಟು ತೊಂದರೆ ಬರಬಹುದೆಂದು ಅವನಿಗೆ ಗೊತ್ತಿರಲಿಲ್ಲ. ತಾನು ತನ್ನ ನಿಜ ಪರಿಚಯ ಮಾಡಿಕೊಟ್ಟಿರದಿದ್ದುದೇ ಒಳ್ಳೆಯದಾಯಿತೆಂದು ತುಸು ಆನಂದ ತಾಳಿದ. ತಾನು ಆ ಸಂಗತಿಯನ್ನು ಹೊರಗೆಡಹುವ ವೇಳೆ ಬಂದಿದ್ದಾಗಲೇ ಅವಳು ಆ ಮಾತಿಗೆ ತಡೆ ಹಾಕಿದ್ದಳು. ವಕೀಲರ ಮುಖಾಂತರ ಕಳಿಸಿದ್ದ ಆತನ ಪತ್ರಕ್ಕೆ ಅವಳು ತಕ್ಷಣ ಉತ್ತರಕೊಟ್ಟ

ಕಾರಣವೂ ಈಗ ತಿಳಿದುಬಂತು. ತನ್ನ ಕಾರ್ಯ ಕೈಗೂಡಲು ಅನುಕೂಲ ಸಮಯಕ್ಕಾಗಿ ಕಾಯುವದೇ ಯೋಗ್ಯವೆಂದು ನಿರ್ಧರಿಸಿದ.

"ಪ್ರಮಿಲಾದೇವಿ, ಬೇರೆ ಜೇನುಹುಟ್ಟುಗಳನ್ನು ಬಿಚ್ಚಬೇಕಲ್ಲ ? ನೀವು ರಾಣಿ ಹುಳುಗಳನ್ನು ನೋಡುತ್ತ ನಿಂತಿರೋ ಹೇಗೆ ?"

ಅವಳಿಗೆ ನಾಚುಕೆಯೆನ್ನಿಸಿತು. ಅವನನ್ನು ಫಜೀತಿ ಮಾಡಲೆಂದೇ ಆವಳು ಹುಟ್ಟುಬಿಡಿಸಲು ತೊಡಗಿದ್ದಳು. ಆದರೆ, ಜೇನು ಸಾಕುವ ಇನ್ನೊಬ್ಬ ನನ್ನು ವಂಚಿಸುವದಾದರೂ ಹೇಗೆ? ಅಂತೆಯೇ ಧೈರ್ಯವಾಗಿ ಪ್ರಸಂಗವನ್ನೆ ದುರಿಸಲೆಂದು ಅವಳು ಹೇಳಿದಳು:

"ಅಣ್ಣಾಸಾಹೇಬರೆ, ಜೇನು ಬಿಡಿಸುವ ಇಚ್ಛೆ ನನಗಿರಲಿಲ್ಲ. ನನ್ನ ಅಣ್ಣ ನಂತೆ ನೀವೂ ಜೇನುಹುಳ ಕಚ್ಚಿದೊಡನೆ ಕುಣಿಯುತ್ತ ನೆಗೆಯುತ್ತ ಮನೆಯೊ ಳಗೆ ಧಾವಿಸುವದನ್ನು ನೋಡುವ ಮನಸ್ಸಿತ್ತು. ನನ್ನ ದುರ್ಬುದ್ಧಿಗಾಗಿ ನಾಚಿಕೆ ಯೆನ್ನಿಸುತ್ತದೆ. ಹಾಗೆ ಹುಳ ಕಡಿಸಿಕೊಂಡ ನೀವು ನನ್ನ ಮನೆಯಲ್ಲಿ ಇರಲಾ ರಿರಿ. ಹೆದರಿ ಓಡಿ ಹೋಗುವಿರಿ ಎಂದೇ ನಾನು ಭಾವಿಸಿದ್ದೆ. ನನ್ನ ಅಲ್ಪತನ ಕ್ಕಾಗಿ ಕ್ಷಮೆ ಬೇಡುತ್ತೇನೆ. ನಿಮ್ಮ ಮನಸ್ಸಿಗೆ ಬಂದಷ್ಟು ದಿನ ಇಲ್ಲಿಯೇ ಇರ ಬೇಕು."

ರಾಜಾಸಾಹೇಬನಿಗೆ ಆಶ್ಚರ್ಯವೆನ್ನಿಸಿತು.

"ಆಯ್ಯೋ, ನನ್ನಿಂದ ನಿಮಗೆ ತೊಂದರೆಯಾದರೆ........"

"ಛೆ, ಛೆ, ನಿಮ್ಮಿಂದ ಯಾವ ತೊಂದರೆಯೂ ಇಲ್ಲ....."

"ನೀವೇ ಅಂದಿರಲ್ಲ........?"

"ಹೌದು, ನಾನು ಆಗ ಹಾಗೆ ಭಾವಿಸಿದ್ದೆ. ಈಗಿನ ಪರಿಸ್ಥಿತಿಯೇ ಬೇರೆ. ನೀವೂ ಜೇನುಹುಳುಗಳ ಗೆಳೆಯರೆಂಬುದು ನನಗೆ ಗೊತ್ತಿರಲಿಲ್ಲ. ಇನ್ನು ನೀವು ನಮ್ಮ ಮನೆ ಬಿಟ್ಟು ಹೋಗಬಾರದು. ನೀವು ಹೋದದ್ದೇ ಆದರೆ ನನ್ನ ಮತ್ತು ಕಮಲಾಕಾಂತನ ಹೃದಯಗಳನ್ನು ತುಳಿದುಹೋಗಬೇಕಾ ದೀತು. ಏಕೆ ? ನನ್ನ ಮಾತಿನಲ್ಲಿ ವಿಶ್ವಾಸ ಹುಟ್ಟುತ್ತಿಲ್ಲವೆ ? ನೀವು ಹೋಗುವ ವಿಚಾರ ಮಾಡುತ್ತಿರುವಂತಿದೆ. ಆದರೆ ಹೋಗಕೂಡದು. ಅಣ್ಣಾಸಾಹೇಬ್, ದಯಮಾಡಿರಿ ನನ್ನ ಮೇಲೆ. ಇಲ್ಲಿ ಮೊಸಳೆಗಳೂ ಇಲ್ಲ, ಸೊಳ್ಳೆಯ ಕಾಟವೂ ಇಲ್ಲ. ಅಕಸ್ಮಾತ್ ನಾಲ್ಕಾರು ಸೊಳ್ಳೆಗಳು ಇದ್ದರೂ ಏನಂತೆ? ಅವು ಎಲ್ಲ

ಕಡೆಗೂ ಇದ್ದೇ ಇರುವವು. ಹಿಂದಿನದೆಲ್ಲ ಮರೆತುಬಿಡುವಿರಷ್ಟೆ? ನೀವು ಬ್ಯಾಡ್ಮಿಂಟನ್ ಆಡಬಲ್ಲಿರಾ?"

"ಹೌದು ಆಡುತ್ತೇನೆ."

"ಹಾಗಿದ್ದರೆ ನೀವು ಹೋಗುವದೇ ಸಾಧ್ಯವಿಲ್ಲ. ಇಲ್ಲಿ ಒಳ್ಳೆಯ ಆಟಗಾರರು ಇದ್ದಾರೆ. ಅವರ ಗೆಳೆತನದ ಲಾಭ ನಿಮಗಾದೀತು. ನಾನೂ ಆಡಬಲ್ಲೆ. ಸರ್ವೀಸ್ ನನ್ನ ಎತ್ತಿದ ಕೈ ಇದ್ದಂತೆ."

"ನಾನೂ ಅಷ್ಟೆ........"

"ಎಲ್ಲಾ ಸರಿಯಾಯಿತಲ್ಲ. ಜೇನು ಸಾಕುವದು, ಬ್ಯಾಡ್ಮಿಂಟನ್ ಆಟದಲ್ಲಿ ಸರ್ವೀಸ್, ಎರಡರಲ್ಲೂ ನಮ್ಮಿಬ್ಬರ ಒಲವು ಒಂದೇ ಆಗಿದೆ. ಎಂಥ ಅದ್ಭುತ ಪರಿಚಯ! ನೀವು ಹೋಗಲಾರಿರಿ, ಅಣ್ಣಾಸಾಹೇಬ್."

"ನನ್ನಿಂದ ತೊಂದರೆಯೇಕೆ?"

"ಅಯ್ಯೋ, ಅಣ್ಣಾಸಾಹೇಬ್ ಇನ್ನೂ ಅದೇ ಮಾತೇ? ಸಾಕು, ಮನೆಯೊಳಕ್ಕೆ ಬರ್‍ರಿ. ಅಡುಗೆಯ ಪಾತ್ರೆ ಪಡಗ ತಿಕ್ಕುವದರಲ್ಲಿ ತುಸು ಸಹಾಯ ಮಾಡಲಾರಿರಾ?"

"ಓಹೋ! ಅದಕ್ಕೇನು, ನಡೆಯಿರಿ........"

ರಾಜಾಸಾಹೇಬ್ ಅವಳನ್ನು ಹಿಂಬಾಲಿಸಿದ. ಇಬ್ಬರೂ ಮನೆಯನ್ನು ಸೇರಿದರು.

## ೧೦

ಸುಂದರ್ ರೆಸ್ಟಾರೆಂಟಿನಲ್ಲಿ ಆಳು ಬಿದ್ದುದರಿಂದಾದ ಗದ್ದಲದ ಕಾರಣದಿಂದ ಸುಶೀಲಾ ಮತ್ತು ವಿಲಾಸರಾಯರ ಪ್ರಣಯದ ಮಾತುಗಳಿಗೆ ಭಂಗ ಬಂದಿತ್ತು. ಮರುದಿವಸವೇ ವಿಲಾಸರಾಯ ಲಗ್ನದ ಸೂಚನೆ ತರಬಹುದೆಂದು ಯೋಚಿಸಿದ್ದ ಸುಶೀಲೆಗೆ ನಿರಾಶೆಯಾಗಹತ್ತಿತು. ಈಗೀಗ ವಿಲಾಸರಾಯ ಆ ಮಾತನ್ನೇ ಎತ್ತಿರಲಿಲ್ಲ. ಕಾರಿನ ಕಾರ್ಬರೇಟರ್, ಸ್ಪಾರ್ಕ, ಪ್ಲಗ್, ಅದೂ

ಇದೂ ಇವೇ ಮೊದಲಾದ ಮಾತುಗಳನ್ನಾಡುತ್ತಿದ್ದ. ಪ್ರೇಮ, ಲಗ್ನಗಳಿಗೆ ಸಂಬಂಧಿಸಿದ ಮಾತುಗಳನ್ನೇ ಆತ ಆಡುತ್ತಿರಲಿಲ್ಲ. ಅವನ ರೀತಿಯೇ ಅವಳಿಗೊಂದು ಒಗಟಾಗಿ ನಿಂತಿತ್ತು.

ಅವಳಿಗೆ ನಿರುತ್ಸಾಹವುಂಟಾಗಿದ್ದುದು ಸಹಜವೇ. ಮನೆಗೆ ಬರಲಿರುವ ಅತಿಥಿಯನ್ನು ಸಂಭ್ರಮದಿಂದ ಸತ್ಕರಿಸಲು ಮನೆಯನ್ನು ಸ್ವಚ್ಛವಾಗಿರಿಸಿ. ಶೃಂಗರಿಸಿ ಕಾದು ಕುಳಿತಾಗ ಅತಿಥಿಯು ಬಾರದಿದ್ದರೆ ಮನಸ್ಸಿಗಾಗುವ ಅಸಂತೋಷವೇ ಅವಳಲ್ಲೂ ನೆಲೆಯೂರಿತ್ತು. ವಿಲಾಸರಾಯ ಲಗ್ನವಾಗಲು ಕೇಳಿದರೆ ಅವನಿಗೆ ಕೊಡಬಹುದಾದ ಉತ್ತರವನ್ನು ಆಕೆ ನಿರ್ಧರಿಸಿಕೊಂಡಿದ್ದಳು. ಬರಬಹುದಾಗಿದ್ದ ಎಲ್ಲ ತೊಡರುಗಳನ್ನು ಬಿಸುಟಿ ಬಿಡುವದನ್ನು ಗೊತ್ತು ಮಾಡಿಕೊಂಡಿದ್ದಳು. ಆದರೇನು? ಪಾಪ! ಆ ವಿಲಾಸರಾಯನ ಇಚ್ಛೆಯೇ ಅವಳಿಗೆ ಗೊತ್ತಾಗಿರಲಿಲ್ಲ.

ಸೆಲ್ಫ್ ಸ್ಟಾರ್ಟರ್ ಇರುವ ಮೋಟಾರಿನಂತೆ ಸ್ವಯಂ ಸಾಮರ್ಥ್ಯದಿಂದ ಮುಂದೋಡುವ ವ್ಯಕ್ತಿ ವಿಲಾಸರಾಯನಲ್ಲ. ಬೇರೆ ಯಾರಾದರೂ ಹ್ಯಾಂಡಲ್ ಹೊಡೆದು ಅವನ ಚಲನೆಗೆ ಸ್ಫೂರ್ತಿ ತರಬೇಕಾಗುತ್ತಿತ್ತು. ಲಗ್ನದಂಥ ಮಹತ್ವದ ವಿಚಾರದಲ್ಲಿಯಂತೂ ಅವನದು ಯಾವಾಗಲೂ ಹಿಂದೆಗೆಯುವ ಮನಸ್ಸು. ಮನಸ್ಸು ಸಿದ್ಧವಾದರೂ ಎಚ್ಚರಿಕೆಯೆಂಬ ಬ್ರೆಕ್ ಅವನ ವಿಚಾರಗಳನ್ನು ಮುಂದೋಡಗೊಡುತ್ತಿರಲಿಲ್ಲ. ಸುಂದರ್ ರೆಸ್ಟಾರಂಟಿನಲ್ಲಿ ಮಾತ್ರ ಅದಾವ ಸ್ಫೂರ್ತಿಯೋ ಅವನನ್ನು ಹುರುಪುಗೊಳಿಸಿತ್ತು.

"ನನ್ನನ್ನು ಲಗ್ನವಾಗುವಿಯಾ ಸುಶೀಲಾ?" ಎನ್ನುತ್ತಿರುವಾಗಲೇ ಆ ಗೊಂದಲವಾಗಬೇಕೇ? ಆ ರಾತ್ರಿಯೆಲ್ಲ ಅವನು ಮತ್ತೆ ಮತ್ತೆ ಆ ಘಟನೆಯನ್ನೇ ನೆನೆದುಕೊಂಡು ವಿಷಾದಪಟ್ಟಿದ್ದ. ತಾನು ಮುಂದಿಡುತ್ತಿದ್ದ ಹೆಜ್ಜೆಗೆ ಬ್ರೆಕ್ ಹಾಕಿದಂತೆ ಆ ಗದ್ದಲ! ವ್ಯಾಪಾರವೊಂದನ್ನು ಬಿಟ್ಟರೆ ಅವನು ಯಾವ ಕೆಲಸದಲ್ಲೂ ಧೈರ್ಯದಿಂದ ಮುಂದೆ ಹೆಜ್ಜೆ ಇಡಲು ಅಸಮರ್ಥನಾಗಿದ್ದ. ಯಾರಾದರೂ ಊಟಕ್ಕೆ ಕರೆದರೂ ಅವನು ಒಮ್ಮೆಲೇ 'ಹೂಂ' ಎನ್ನುತ್ತಿರಲಿಲ್ಲ. ರೆಸ್ಟಾರಂಟಿನಲ್ಲಾದ ಘಟನೆಯ ನಂತರ ಅವನ ಪ್ರೇಮಜ್ಯೋತಿ ತುಸು ಮಂದವಾಗಿತ್ತೆನ್ನಬಹುದು. ಆದರೂ ಆತ ಸುಶೀಲಾರಾಣಿಯ ನೆನಪು ಮಾಡಿಕೊಳ್ಳುವದನ್ನು ಬಿಟ್ಟಿರಲಿಲ್ಲ. ಅವಳ ಸುಂದರವಾದ 'ಬಾಡಿ', 'ಹೆಡ್‌ಲೈಟ್'

ಗಳಂಥ ಕಣ್ಣುಗಳು ಅವನ ಮನಸ್ಸನ್ನು ಸೆಳೆದುಕೊಂಡಿದ್ದವು. ಆದರೆ ಒಂದು ಬಗೆಯ ಭೀತಿಯ ಬ್ರೆಕ್ ಅವನ ಪ್ರಗತಿಯನ್ನು ತಡೆಹಿಡಿದಿತ್ತು. ಲಗ್ನದಕುರಿತು ಯೋಚಿಸಿದೊಡನೆ ಅವನಲ್ಲಿ ಭೀತಿ ನೆಲೆಯೂರಿ ನಿಲ್ಲುತ್ತಿತ್ತು. ಪುರೋಹಿತರು, ವಾದ್ಯಗಳು, ಜನರ ಗದ್ದಲ, ಊಟದ ಸಂಭ್ರಮ, ಎರಡು ಮಾಂಸ ಪಿಂಡಗಳು ಒಂದರ ಪಕ್ಕದಲ್ಲಿ ಇನ್ನೊಂದು ಕೂಡುವದು............ ಎಲ್ಲವೂ ಅವನಿಗೆ ಭಯವನ್ನುಂಟು ಮಾಡುತ್ತಿದ್ದವು. ಅವನಲ್ಲಿನ ಸಂಕೋಚ ಸ್ವಭಾವ ಲಗ್ನದ ಆಡಂಬರಕ್ಕೆ ಒಪ್ಪುತ್ತಿರಲಿಲ್ಲ. 'ಎಚ್ಚರಿಕೆಯಿಂದ ಹೆಜ್ಜೆಯಿಡಬೇಕು' ಎನ್ನುವ ಇನ್ನೊಂದು ಸ್ವಭಾವ ದಾಂಪತ್ಯಜೀವನದಲ್ಲಿ ಬರಬಹುದಾದ ತೊಂದರೆಗಳ ಕಲ್ಪನೆಗಳನ್ನು ಮುಂದೆ ಮಾಡುತ್ತಿತ್ತು. ಅಂತೆಯೇ ಸುಶೀಲೆಯೊಡನೆ ಅವನ ವರ್ತನೆ ಸಲುಗೆಯದಾಗಿದ್ದಿತೇ ವಿನಾ ಆತ್ಮೀಯವಾಗಿರಲಿಲ್ಲ. ಅವಳೂ ಮೋಟಾರು ವ್ಯವಸಾಯದಲ್ಲಿರುವವಳೇ ಆಗಿದ್ದರೆ ಆತ ಆತ್ಮೀಯನಾಗಿರುತ್ತಿದ್ದನೋ ಏನೋ!

ಲೀಲಾರಾಣಿ ಕಳೆದ ಮೂರು ತಿಂಗಳಿನಿಂದ ನೃತ್ಯದ ಕಾರ್ಯಕ್ರಮಗಳಲ್ಲಿದ್ದುದರಿಂದ ಅವಳಿಗೆ ವಿಶ್ರಾಂತಿ ಬೇಕಿತ್ತು. ಅಂತೆಯೇ ನಗರದ ಹೊರಗಿದ್ದ ಒಂದು ವಿಶಾಲವಾದ ಮನೆಯನ್ನು ಬಾಡಿಗೆಗೆ ಹಿಡಿದು ಅಲ್ಲಿಗೆ ಸ್ಥಳಾಂತರಿಸಿದ್ದಳು. ಅವಳ ಪತಿ, ಮಂಗ ಹನುಮ, ಹಾವು 'ಶಶಿ', ಅತಿಥಿಗಳಾದ ಸುಶೀಲೆ ಮತ್ತು ವಿಲಾಸರಾಯ ಅವಳೊಡನೆ ಹೊಸ ಮನೆ ಸೇರಿದ್ದರು. ಅರ್ಧ ಚೌರಸ ಮೈಲು ಬಯಲು ಜಾಗ ಆ ಮನೆಯ ಸುತ್ತುಮುತ್ತಲೆಲ್ಲ ಹಬ್ಬಿತ್ತು. ಗಿಡಗಂಟೆಗಳೂ ಯಥೇಚ್ಛವಾಗಿದ್ದವು. ಮಧ್ಯದಲ್ಲಿ ಆ ಮನೆ. ಅಷ್ಟು ಜನಕ್ಕೆ ಅದು ಬಹಳ ದೊಡ್ಡದೆನಿಸುತ್ತಿದ್ದರೂ ಬೇರಾರಿಗೂ ಬರಗೊಡಲು ಅವಳು ಸಿದ್ಧಳಿರಲಿಲ್ಲ. ಅವಳ ಪ್ರಸಿದ್ಧಿಶಾಖೆಯ ಕಾರ್ಯದರ್ಶಿ ಶಹಾ ಮಾತ್ರ ಬರಲಿದ್ದ.

ಲೀಲಾರಾಣಿ ಬಾಡಿಗೆಗೆ ಹಿಡಿದ ಬಂಗಲೆಯ ಸುತ್ತಲಿನ ಆವರಣವೂ ಮನಮೋಹಕವಾಗಿತ್ತು. ತುಸು ಎತ್ತರದ ಮೇಲಿದ್ದ ಮನೆಯದು! ಗಿಡಗಳ ಮೇಲಿಂದ ದೃಷ್ಟಿ ಹಾಯಿಸಿ ನೋಡಿದರೆ ಸುತ್ತಲಿನ ಕೊರಕಲುಗಳಲ್ಲಿ ಹಳ್ಳದಂತೆ ಹರಿಯುತ್ತಿದ್ದ ನೀರನ್ನು ಕಾಣಬಹುದಿತ್ತು. ಅಲ್ಲಲ್ಲಿ ಕಾಲು ದಾರಿಗಳು; ವಿಶ್ರಾಂತಿಗಾಗಿ ಕೂಡ್ರಲೆಂದು ಹಾಕಲಾದ ಕಟ್ಟೆಗಳು. ಇಷ್ಟೆಲ್ಲ ಸೊಬಗಿದ್ದಿತಾದರೂ ಅದರ ಪರಿಣಾಮ ವಿಲಾಸರಾಯನ ಮೇಲಾಗಿರಲಿಲ್ಲ. ಈಗ ತಾನೇ

ಆತ ಸುಶೀಲಳೊಡನೆ ಆ ಕಾಲುದಾರಿಗಳಲ್ಲಿ ಸುತ್ತಿ ಬಂದು ಆ ಕಟ್ಟೆಯೊಂದರ ಮೇಲೆ ಕುಳಿತು ಎಂಜಿನುಗಳಿಗೆ ಹಾಕುವ ಎಣ್ಣೆಯ ವಿಚಾರವಾಗಿ ಮಾತಾಡುತ್ತಿದ್ದ. ಅವನ ಆ ಲಕ್ಷಾಂತರ ಹಣ, ಅವನ ಉತ್ಕರ್ಷೆಗೆ ಕಾರಣವಾದ ಆ ಮೋಟಾರ್ ಉದ್ಯೋಗಗಳನ್ನು ಕಾಲಿನಿಂದ ಒದ್ದು, ಅವನ ಆ ದುಂಡಗಿನ ಮೂರ್ಖ ಮುಖಕ್ಕೆ ಒಂದೇಟು ಬಿಟ್ಟು ಹೊರಟುಹೋಗಬೇಕೆಂದು ಸುಶೀಲಳಿಗೆ ಅನ್ನಿಸಿದರೂ ತಡೆದುಕೊಂಡು ಅವನ ಮಾತುಗಳನ್ನು ಕೇಳುತ್ತಿದ್ದಳು. ಅಷ್ಟರಲ್ಲಿ ಅವರು ಕುಳಿತ ಸ್ಥಳಕ್ಕೆ ಶಹಾ ಬಂದುದೇ ತಡ, ಅವನೊಡನೆ ಸುಶೀಲೆ ನಿರ್ಲಜ್ಜಳಂತೆ ಹೊರಟುಹೋದಳು. ಎತ್ತರವಾದ ಸ್ಥಳದಲ್ಲಿ ನಿಂತಿದ್ದಾಗ ಕಾಲು ಬುಡದಲ್ಲಿನ ಆಧಾರವೇ ಕಳಚಿದಂತೆ ವಿಲಾಸರಾಯನಿಗೆ ಭಾಸವಾಯಿತು.

ಅಂದು ರವಿವಾರದ ಬಿಡುವಿನ ದಿನವಾದುದರಿಂದ ಯಾರಿಗೂ ಹೆಚ್ಚಿನ ಕೆಲಸಗಳಿರಲಿಲ್ಲ. ರಾತ್ರಿಯಾದಂತೆ ಚಂದ್ರ ಹೆಚ್ಚೆಚ್ಚು ಪ್ರಕಾಶಮಾನವಾಗಿ ಪ್ರಶಾಂತ ಬೆಳಕನ್ನು ಹರಡಹತ್ತಿದ್ದ. ಲೀಲಾರಾಣಿಯ ಮನೆಯ ಸುತ್ತಲಿನ ಆ ಸೃಷ್ಟಿಸೌಂದರ್ಯ ನಯನಮನೋಹರವಾಗಿತ್ತು. ಹನುಮ ತನ್ನ ಹಾಸುಗೆ ಸೇರಿದ್ದ. ಆ ಮನೆಯ ಜನರೆಲ್ಲ ದಿವಾಣಖಾನೆಯಲ್ಲಿ ನೆರೆದಿದ್ದರು. ವಿಲಾಸರಾಯ ಮಾತ್ರ ಹೊರಗೆ ನಿಂತು ಶುಷ್ಕ ಮನಸ್ಕನಾಗಿ ಸಿಗರೇಟು ಸೇದುವದರಲ್ಲಿ ಮಗ್ನನಾಗಿದ್ದ. ಅವನನ್ನು ನೋಡಿದವರೆಲ್ಲ ಅವನು ವಿಷಾದದಲ್ಲಿರುವದನ್ನು ತಟ್ಟನೆ ಹೇಳಬಹುದಿತ್ತು. ಇಂಥ ಬೆಳುದಿಂಗಳಿನ ರಾತ್ರಿಯು ಮೋಟಾರ್ ತಯಾರಕರಿಗೆ ರುಚಿಸುತ್ತಿರಲಿಕ್ಕಿಲ್ಲ. ಅವರ ಹೃದಯ ಬರಿದಾಗಿ, ತಾವು ಏಕಾಂಗಿಯಾಗಿರುವದು ಹೊಳೆದು, ಯಾವಳಾದರೊಬ್ಬ ಸುಂದರಿಯನ್ನು ಹುಡುಕಿಕೊಂಡು ಲಗ್ನವಾಗಬೇಕೆಂದೂ ಮನಸ್ಸು ಬಯಸುತ್ತಿರಬೇಕು ! ಇಂಥ ಮನಃಸ್ಥಿತಿಯಲ್ಲಿ ಒಂದು ಗಿಡದ ಬೊಡ್ಡೆಗೆ ಆತು ನಿಂತಿದ್ದ ಯಾರೋ ತನ್ನೆಡೆಗೆ ಬರುತ್ತಿದ್ದುದು ವಿಲಾಸರಾಯನಿಗೆ ಕಂಡಿತು.

"ವಿಲಾಸರಾಯರೇನು ?"

ಎನ್ನುತ್ತ ಅವನು ನಿಂತ ಸ್ಥಳದ ಹತ್ತಿರವೇ ಇದ್ದ ಕಟ್ಟೆಯ ಮೇಲೆ ಸುಶೀಲೆ ಕುಳಿತಳು. ಪಿಯಾನೋದ ಮಂಜುಳ ಸ್ವರ ಮನೆಯ ಕಿಟಕಿಯೊಳಗಿಂದ ತೂರಿಬಂದು ವಿಲಾಸರಾಯನ ಕಿವಿಗಳ ಮೇಲೆ ಅಪ್ಪಳಿಸುತ್ತಲಿತ್ತು.

ಆಹ್ಲಾದಕರವಾದ ರಾತ್ರಿಯ ಪ್ರಶಾಂತ ಸೊಬಗಿನಲ್ಲಿ ಈಗ ಇನ್ನಿಷ್ಟು ಕರ್ಣ ಮಧುರವಾಗಿ ಕೇಳಬರುತ್ತಿತ್ತು. ವಿಲಾಸರಾಯ ತನ್ನ ಕೈಯಲ್ಲಿನ ಸಿಗರೇಟು ಬಿಸುಟು ಕಟ್ಟೆಯ ಮೇಲೆ ಕುಳಿತ. ಮನೆಯಲ್ಲಿ ಪಿಯಾನೋದೊಂದಿಗೆ ವಿರಹ ಗೀತೆಯೊಂದನ್ನು ಅನ್ನಲಾಗುತ್ತಿತ್ತು. ಇಬ್ಬರೂ ತುಸು ಸಮಯ ಆ ಸಂಗೀತ ವನ್ನು ಕೇಳುತ್ತ ಕುಳಿತರು. ಅದಾದ ನಂತರ ಸುಶೀಲೆಯ ಮುಖದಿಂದ ವಿಷಾ ದದ ಉಸಿರೊಂದು ಹೊರಬಂತು.

"ಶಹಾರವರ ಧ್ವನಿ ಕರ್ಣ ಮಧುರವಾಗಿದೆಯಲ್ಲವೆ ?" ಸುಶೀಲೆ ಕೇಳಿ ದಳು.

ವಿಲಾಸರಾಯ ಉತ್ತರ ಕೊಡಲಿಲ್ಲ. ಶಹಾನ ಧ್ವನಿ ಕರ್ಣ ಕಠೋರ ವಾಗಿದೆ ಎಂದು ತನ್ನಷ್ಟಕ್ಕೇ ಮನದಲ್ಲಿ ಅಂದುಕೊಂಡ. ಆ ಧ್ವನಿ ಕೇಳಲು ಕೂಡ ಅವನಿಗೆ ಇಚ್ಛೆಯಿರಲಿಲ್ಲ. ಇಂಥ ಸುಂದರ ಸೊಬಗಿನ ರಾತ್ರಿಯ ಸುಖ ಹಾಳು ಮಾಡುತ್ತಿದ್ದ ಆ ಧ್ವನಿಯ ಬಗ್ಗೆ ಅವನಲ್ಲಿ ತಿರಸ್ಕಾರವುಂಟಾಗಿತ್ತು.

"ನಿಮಗೆ ಹೇಗೆನಿಸುತ್ತದೆ, ವಿಲಾಸರಾಯರೆ ?"

"ಹೂಂ........"

"ಹೂಂ ಅಂದ ಮಾತ್ರಕ್ಕೆ ಪ್ರಶಂಸಿಸಿದಂತಾಗಲಿಲ್ಲ. ವಿಲಾಸರಾಯರೆ, ನಿಮಗೆ ಅವಮಾನವಾಗುವಂತೆ ನಾನು ವರ್ತಿಸಿಲ್ಲವಷ್ಟೆ ? ಈಗ ಕೆಲದಿನ ಗಳಿಂದ ನಿಮ್ಮಲ್ಲಿ ಬದಲಾವಣೆ ಕಂಡುಬರಹತ್ತಿದೆ. ಮೊದಲು ನೀವು ನನ್ನೊಂ ದಿಗೆ ಎಷ್ಟು ಹರಟುತ್ತಿದ್ದಿರಿ. ಈಗೀಗ ಒಂದು ಮಾತನ್ನೂ ಆಡುವದಿಲ್ಲ. ಅದರ ಕಾರಣವೇನು ?"

ಈಗ ಮಾತ್ರ ವಿಲಾಸರಾಯನ ಮನಸ್ಸಿನ ಮೇಲೆ ವಿಚಿತ್ರ ಪರಿಣಾಮ ವಾಯಿತು. ತನ್ನನ್ನು ಅವಳು ಸರಿಯಾಗಿ ತಿಳಿದುಕೊಂಡಿಲ್ಲವೆಂದು ತೋರಿತು. ಅವಳ ಮಾತಿನ ಭಾವ ಹಾಗೆ ತೋರುತ್ತಿದ್ದರೂ, ಆ ಭಾವವನ್ನು ಎತ್ತಿ ತೋರಿ ಸುವ ಶಬ್ದಗಳು ಅವಳ ಮಾತಿನಲ್ಲಿರಲಿಲ್ಲ. ಅವನ ವಿಚಾರಶಕ್ತಿ ಕುಗ್ಗುತ್ತಿ ರುವ ಅನುಭವ ಆತನಿಗಾಯಿತು. ಅವನು ಮೌನ ತಾಳಿ ಮುಖ ಕೆಳಕ್ಕೆ ಮಾಡಿ ಕುಳಿತಿದ್ದರೂ ಅವಳ ಪ್ರತಿಯೊಂದು ಶಬ್ದವೂ ಅವನನ್ನು ಇರಿಯುತ್ತಿರು ವಂತೆ ಭಾಸವಾಗುತ್ತಿತ್ತು. ಅವಳಿಗೆ ಆತ ಏನೆಂದು ಉತ್ತರ ಕೊಡಬೇಕೆಂದು ಯೋಚಿಸಬೇಕಾದ ಆವಶ್ಯಕತೆ ತೋರಿತು. ಏನಾದರೊಂದು ನೆಪ ಹೂಡಿ

ಮನೆ ಸೇರಿ ಯೋಚಿಸಬೇಕೆಂದರೆ ಅವನ ನರಗಳ ಶಕ್ತಿಯೇ ಅಡಗಿದಂತಾಗಿತ್ತು. ಅದೃಶ್ಯ ಶಕ್ತಿಯೊಂದು ಅವನನ್ನು ಹಿಂದಕ್ಕೆ ದೂಡುತ್ತಲಿದ್ದಿತು. ಬೆಳದಿಂಗಳೊಂದ ರಲ್ಲೇ ಅಂಥ ಶಕ್ತಿಯಿರಲಾರದು. ಸುಶೀಲೆಯ ಧ್ವನಿಯೊಂದರಲ್ಲೂ ಅಂಥ ಶಕ್ತಿಯಿರಲೂ ಸಾಧ್ಯವಿರಲಿಲ್ಲ. ಆದರೆ, ಆ ಬೆಳದಿಂಗಳು ಮತ್ತು ಅವಳ ಧ್ವನಿ ಇವೆರಡರ ಸಂಯೋಗದ ಪರಿಣಾಮ ಭಯಂಕರವಾಗಿತ್ತು. ಅವನ ಧ್ವನಿ ಕುಗ್ಗಿ ಹೋಗಿ ತನ್ನ ಜೀವಮಾನದಲ್ಲೇ ಅತಿ ಭಯಂಕರವಾದ ಪ್ರಸಂಗವನ್ನೆದುರಿಸು ತ್ತಿರುವಂತೆ ಕಂಡಿತು !

ಮನೆಯೊಳಗಣ ಸಂಗೀತ ನಿಂತಿತ್ತು. ಪತ್ರಿಕೆಯೊಂದನ್ನು ಶಹಾ ತಿರುವಿ ಹಾಕುತ್ತಿದ್ದ. ಲೀಲಾರಾಣಿ ಮಾತ್ರ ಪಿಯಾನೋದ ಮೇಲೆ ಬೆರಳುಗನ್ನೋಡಿ ಸುತ್ತ ಕೋಮಲ ಮತ್ತು ಮಂಜುಳ ರಾಗ ನುಡಿಸುತ್ತಿದ್ದಳು. ಅಂಥ ಸುಂದರ ರಾತ್ರಿಯ ಪ್ರಶಾಂತತೆಯಲ್ಲಿ ಕರ್ಣಮಧುರವಾದ ಸಂಗೀತ ಕೇಳಬರುತ್ತಿರುವಾಗ ಸುಂದರಿಯೋರ್ವಳು ಪಕ್ಕದಲ್ಲಿ ಕುಳಿತು ಹೀಯಾಳಿಸುವದನ್ನು ಯಾವ ಗಂಡಸು ತಡೆದುಕೊಳ್ಳಬಹುದು ! ಆನಂದ ಪಡುವದರ ಬದಲು ವ್ಯರ್ಥ ವೇಳೆ ಕಳೆ ದಂತಾಗಲಿಕ್ಕಿಲ್ಲವೆ ? ಆ ಮೋಟಾರ್ ತಯಾರಕನಿಗೆ ಹೇಗೆ ಹೇಗೋ ಅನ್ನಿಸ ಹತ್ತಿತ್ತು.

"ನಮ್ಮಿಬ್ಬರ ಮಧ್ಯೆ ವಿರಸವಾಗುವ ಯಾವುದೇ ಕೃತಿ ನನ್ನಿಂದ ಘಟಿಸಿ ದ್ದರೆ ಅದಕ್ಕಾಗಿ ನಾನು ನಿಮ್ಮ ಕ್ಷಮೆ ಬೇಡುವೆ, ವಿಲಾಸರಾಯರೆ."

"ಹಂ...."ಆದಕ್ಕೂ ಹೆಚ್ಚಿಗೆ ಶಬ್ದಗಳು ವಿಲಾಸರಾಯನಿಂದ ಹೊರಡಲಿಲ್ಲ.

"ನನಗಿಲ್ಲಿ ಸ್ನೇಹದವರೂ ಇಲ್ಲ. ಏಕಾಂಗಿಯಾಗಿದ್ದೇನೆ. ಮನೆಯ ನೆನಪು ಬೇರೆ ಬರಹತ್ತಿದೆ."

ವಿಲಾಸರಾಯನ ವಿಶಾಲ ಹೃದಯದಲ್ಲಿ ಅವಳ ಬಗೆಗೆ ದಯೆ ಹುಟ್ಟಿತು. ಅವಳ ಮಾತುಗಳು ಈಗ ಮಂಜುಳ ಸ್ವರದಂತೆ ಕೇಳಬರಹತ್ತಿದವು.

"ಇಲ್ಲಿಯ ಜೀವನ ಆನಂದಮಯವಾಗಿದೆ. ಮುಂಬಯಿ ನಗರವಂತೂ ಭವ್ಯವಾಗಿದೆ. ಮೇಲಾಗಿ ಲೀಲಾರಾಣಿಯಂಥ ಪ್ರೇಮಮೂರ್ತಿಯನ್ನು ಕಾಣು ವದು ವಿರಳ. ಆದರೂ ನನಗೆ ನಮ್ಮ ಮನೆಯ ನೆನಪಾಗುತ್ತಿದೆ. ಆ ಮನೆ ಯಿಂದ ನಾನು ಬಹಳ ದೂರವಿರುವಂತೆ ಅನ್ನಿಸಿ ಸಂಕಟವಾಗುತ್ತಿದೆ. ಮನೆ

ಯಲ್ಲಿ ಇರುವವರೂ ನಾವು ಮೂರೇ ಜನ. ನನ್ನ ತಾಯಿ ಮತ್ತು ತಮ್ಮ ಸುಭಾಸ........"

ಕೊನೆಯ ಶಬ್ದಗಳನ್ನುಚ್ಚರಿಸುವಾಗ ಅವಳ ಧ್ವನಿ ನಡುಗಿತು. ಸುಭಾಸ ನೆಂದರೆ ಕಾದಂಬರಿಗಳಲ್ಲಿ ಉಲ್ಲೇಖಿತವಾಗುವ ಚಿಕ್ಕ ರಾಜಕುಮಾರನಂತೆ ಕಂಡುಬಂದ. ತನ್ನ ಕೈಗಳಲ್ಲಿ ಅವಳ ಕೈಗಳಿರಬೇಕೆಂದು ಭಾಸವಾಯಿತು. ಬೆಚ್ಚಗಿನ ಮೃದುವಾದ ಕೈಗಳು! ಕೈಬಿಗಿತವೂ ಹೆಚ್ಚಿತು.

"ನನ್ನನ್ನು ಬಹಳ ಹಚ್ಚಿಕೊಂಡಿದ್ದಾನೆ ಸುಭಾಸ. ಅವನಿಗೆ ವಯಸ್ಸೂ ಹೆಚ್ಚಿಗಿಲ್ಲ, ಹತ್ತೇ ವರುಷ. ನನ್ನನ್ನೇ ನೆನಸುತ್ತಿರಬೇಕು "

ಅವಳು ಮೌನ ತಾಳಿದಳು. ವಿಲಾಸರಾಯ ಮಾತಿಗಾರಂಭಿಸಿದ. ಒಮ್ಮೆ ಅವನಿಗೆ ಮಾತಾಡುವ ಚಪಲ ಬಂದಮೇಲೆ ಅದನ್ನು ತಡೆಯಲು ಸಾಧ್ಯ ವಿರಲಿಲ್ಲ. ಅನೇಕ ವರುಷಗಳ ನಂತರ ಮಾತಾಡಹತ್ತಿದವರಂತೆ ಪ್ರಾರಂಭ ಮಾಡಿದ. ತನ್ನ ಹೊಲಸುತನಕ್ಕಾಗಿ ಪಶ್ಚಾತ್ತಾಪಪಟ್ಟು ತನ್ನನ್ನು ತಾನೇ ಬೈದುಕೊಂಡು ವ್ಯಸನ ಪ್ರದರ್ಶಿಸಿದ. ಸುಭಾಸನ ನೆನಪಿನಿಂದ ಅವಳ ಹೃದಯ ಭಾರವಾಗಿದ್ದರೂ, ಅದನ್ನು ಸಹಿಸಿಕೊಂಡು ಎಲ್ಲರೊಡನೆ ನಗುತ್ತ ವೇಳೆಗಳೆ ಯುವ ಅವಳ ಅದ್ಭುತ ಶಕ್ತಿಯ ಪ್ರಶಂಸೆಯನ್ನೂ ಮಾಡಿದ; ಅದಾದ ನಂತರ ತನ್ನ ಮನಸ್ಸಿನಲ್ಲಿನ ಭಾವನೆಗಳತ್ತ ಹೊರಳಿದ. ಅವುಗಳನ್ನು ಸುದೀರ್ಘವಾಗಿ ವರ್ಣಿಸಿ, ಆ ಬೆಳದಿಂಗಳನ್ನೇ ಸಾಕ್ಷಿಯಾಗಿರಿಸಿಕೊಂಡು ಅವಳೊಡನೆ ಲಗ್ನವಾಗ ಬೇಕೆಂಬುವ ತನ್ನ ಬಯಕೆಯನ್ನು ಧೈರ್ಯದಿಂದ ಹೇಳಿಬಿಟ್ಟ.

"ವಿಲಾಸರಾಯರೇ............" ಅವಳು ಅವನ ಬಾಹುಪಾಶದಲ್ಲಿ ಬಂಧಿತ ಳಾಗಿದ್ದಳು. ಸೆಲ್ಫ ಸ್ಟಾರ್ಟರ್ ಮತ್ತು ಸುಂದರ ಬಾಡಿ ಇರುವ ಹೊಸ ಮಾಡೆಲ್ ಕಾರನ್ನು ಕಂಡಷ್ಟೇ ಆನಂದವಾಯಿತವನಿಗೆ. ಈವರೆಗೆ ಅವನ ಮನಸ್ಸು ಎಲ್ಲಿಯೋ ಸುತ್ತುತ್ತಲಿತ್ತು. ಈಗ ಅವನ ಸೆಲ್ಫ ಸ್ಟಾರ್ಟರ್ ಕೆಲಸ ಕೊಡುವಂತಾಗಿತ್ತು.

"ನನ್ನ ಸುಂದರಿ............, ಸೌಂದರ್ಯದ ಗಣಿ, ಅಪ್ಸರೆ" ಎಂದು ಬಡ ಬಡಿಸಹತ್ತಿದ.

ಮನೆಯೊಳಗಿನ ಶಹಾನ ಮಾತು ಕೇಳಬರುತ್ತಿದ್ದವು. ಆತ ಕವಿತೆ ಯೊಂದನ್ನು ಬಿಡಿಸಿ ಹೇಳುತ್ತಿದ್ದ. ವಿಲಾಸರಾಯನಿಗೆ ಆ ಕವಿತೆ ರುಚಿಸಲಿಲ್ಲ.

ಆತ ಅತ್ತ ಲಕ್ಷ್ಯಕೊಡದೆ ತನ್ನ ಮದುವೆಯ ವಿಚಾರದಲ್ಲಿ ಮಗ್ನನಾದ. ಪುರೋಹಿತ, ಮಂಗಳವಾದ್ಯ, ಜನರ ಗದ್ದಲ........

ಈ ಸಮಾಚಾರವನ್ನು ರಾಜಾಸಾಹೇಬನಿಗೆ ತಿಳಿಯಪಡಿಸುವದು ಹೇಗೆ? ಎಂದು ಸುಶೀಲೆ ಚಿಂತಿಸುತ್ತಿದ್ದಳು. ಆತ ಮುಂಬಯಿಯಲ್ಲೇ ಇರುವನೆಂದು ಅವಳ ಮನಸ್ಸು ಹೇಳುತ್ತಿತ್ತು, ಆದರೆ ಅವನ ವಿಳಾಸ ಗೊತ್ತಿರಲಿಲ್ಲ. ಅವನಿಗೆ ತಿಳಿಸದೆ ಇರುವದೂ ಸಾಧ್ಯವಿರಲಿಲ್ಲ. ಒಮ್ಮೆಲೇ ಅವನು ಗೊಬ್ಬೂರಿನಲ್ಲಿ ಭೆಟ್ಟಿಯಾದರೆ........? ಅಬ್ಬ, ಆ ದೃಶ್ಯ! ಆಕೆ ವಿಲಾಸರಾಯನೊಂದಿಗೆ ಹೋಗುತ್ತಿರುವಾಗ ಎದುರಿನಿಂದ ರಾಜಾಸಾಹೇಬ್ ಬಂದು, "ಪ್ರಿಯೇ, ಸುಶೀಲಾರಾಣಿ" ಎಂದರೆ ಅವಳ ಗತಿಯೇನಾದೀತು! ವಿಲಾಸರಾಯ ಏನೆಂದು ತಿಳಿದುಕೊಳ್ಳಬಹುದು? ಭಯಂಕರ ಪ್ರಸಂಗವಾದೀತು! ಏನೇ ಆಗಲಿ, ಸಿ. ಐ. ಡಿ. ಗಳ ಸಹಾಯದಿಂದಾದರೂ ರಾಜಾಸಾಹೇಬನ ಪತ್ತೆ ಹಚ್ಚಿ, ಅವನಿಗೆ ಎಲ್ಲವನ್ನೂ ತಿಳಿಸಿ, ಆ ಹಳೆಯ ಪ್ರೇಮವನ್ನು ಬಿಸುಟು ಹೊಸ ಪ್ರೇಮಕ್ಕೆ ಅಂಟಿಕೊಳ್ಳಬೇಕೆಂದು ಆಕೆ ನಿರ್ಧರಿಸಿದಳು.

ಅವರಿಬ್ಬರೂ ಬೇರೆ ಬೇರೆ ದಾರಿಗಳಿಂದ ಮನೆಯತ್ತ ತೆರಳಿದರು. ಅವಳು ಮನೆಯ ಬಾಗಿಲ ಹತ್ತಿರ ಬಂದಾಗ ಅವಳ ಹಿಂದೆ ಕಾಲಸಪ್ಪಳ ಕೇಳಬಂತು. ಪಕ್ಕದ ಗಿಡದ ನೆರಳಿನಲ್ಲಿ ಮನುಷ್ಯಾಕೃತಿಯೊಂದು ಕಂಡಿತು. 'ಸುಶೀಲಾರಾಣಿ' ಎಂದೂ ಅದು ಕರೆದಂತಾಯಿತು. ಅವಳು ದಿಟ್ಟಿಸಿ ನೋಡಿದಳು. ಅವನು ರಾಜಾಸಾಹೇಬನಾಗಿದ್ದ.

## ೧೧

ಮನಸ್ಸಿನಲ್ಲಿನ ವಿಚಾರಗಳನ್ನು ಏಕಾಂತದಲ್ಲಿ ಯೋಚಿಸಲು ಅನುಕೂಲವಾಗುವದೆಂದು ಸುಶೀಲಳಂತೆ ರಾಜಾಸಾಹೇಬನೂ ಅಂದು ಮನೆಯಿಂದ ಹೊರಬಿದ್ದು ಬಂದಿದ್ದ. ಪ್ರಮೀಲೆಯ ಮನೆಯಲ್ಲಿನ ಆ ವಿಶಿಷ್ಟ ಜೀವನ ಅವನಿಗೆ ಬೇಸರವನ್ನೇನೂ ತಂದಿರಲಿಲ್ಲ. ಶಾರೀರಿಕ ಶ್ರಮದ ಮನೆಗೆಲಸಗಳನ್ನು ಮಾಡ

ಲೆಂದೇ ಆತನ ಶರೀರ ಹುಟ್ಟಿ ಬಂದಿದ್ದಿತೋ ಏನೋ. ಮೊದಲು ಆ ಕೆಲಸ ಗಳೆಲ್ಲ ಕಮಲಾಕಾಂತನಿಗೆ ಗುತ್ತಿಗೆಯಾಗಿದ್ದವು. ಅವು ಈಗ ತಪ್ಪಿದ್ದುದರಿಂದ ಕಮಲಾಕಾಂತನಿಗೂ ಆನಂದವಾಗಿತ್ತು. ತನ್ನಿಂದ ಬೇರೆಯವರಿಗೆ ಸುಖವಾದರೆ ಸಾಕು ಎನ್ನುವ ಸ್ವಭಾವ ರಾಜಾಸಾಹೇಬನದು. ಆ ಮನೆಯಲ್ಲಿರುವ ತನಕ ಬೇರೆ ವಿಚಾರ ಮಾಡಲು ಸಮಯವೇ ಸಿಕ್ಕುವಂತಿರಲಿಲ್ಲ. ಅಂತೆಯೇ ಆ ಬೆಳದಿಂಗಳಲ್ಲಿ ತಿರುಗುತ್ತ ಹೊರಟಿದ್ದಾಗ ಸುಶೀಲಳ ಭೇಟಿಯಾದುದು.

ಕೆಲಸ ತಪ್ಪಿದುದೊಂದೇ ಕಮಲಾಕಾಂತನ ಆನಂದಕ್ಕೆ ಕಾರಣವಾಗಿರಲಿಲ್ಲ. ರಾಜಾಸಾಹೇಬನನ್ನು ತನ್ನ ಮನೆಗೆ ಕರೆದುತಂದಾಗ ಇಷ್ಟೊಂದು ಸರಳವಾಗಿ ಕಾರ್ಯ ಸಫಲವಾಗಬಹುದೆಂದು ಆತ ನಂಬಿರಲಿಲ್ಲ. ಏನೋ ಕೊಂಚ ಅನುಕೂಲವಾದೀತೆಂದು ಮಾತ್ರ ತಿಳಿದಿದ್ದ. ಅವರ ಜೇಬು ಬರಿದಾಗಿ ಮಾಡಿ ತನ್ನದರಲ್ಲಿ ಹಣ ತುಂಬಿಕೊಂಡಿದ್ದ ರಾಜಾಸಾಹೇಬ್ ಪ್ರಮೀಲೆಯೊಡನೆ ಸಲುಗೆ ಗೆಳೆತನ ಮತ್ತು ಪ್ರೀತಿ ಬೆಳಸಬಹುದೆಂದು ಕಮಲಾಕಾಂತ ಕಲ್ಪಿಸಿಕೊಂಡಿರಲಿಲ್ಲ. ಈಗಂತೂ ಅವರಿಬ್ಬರೂ ಸದಾಕಾಲ ಕೂಡಿಯೇ ಇರುತ್ತಿದ್ದರು, ಇಬ್ಬರೂ ಸೇರಿಯೇ ಜೇನು ಬಿಡಿಸುತ್ತಿದ್ದರು. ಜೊತೆಯಾಗಿಯೇ ತೋಟದಲ್ಲಿ ಸುತ್ತುತ್ತಿದ್ದರು, ಕಟ್ಟೆಯ ಮೇಲೂ ಅಕ್ಕಪಕ್ಕದಲ್ಲಿ ಕೂತಿರುತ್ತಿದ್ದರು. ವಿಲಾಸರಾಯ ತನ್ನ ಸ್ವಂತದ ಲಗ್ನದ ಚಿತ್ರ ಕಲ್ಪಿಸಿಕೊಳ್ಳುತ್ತಿದ್ದಂತೆ ಕಮಲಾಕಾಂತ ಪ್ರಮೀಲೆ ರಾಜಾಸಾಹೇಬರ ಲಗ್ನದ ಕನಸು ಕಾಣುತ್ತಿದ್ದ.

ಕಮಲಾಕಾಂತನ ವಿಚಾರ ಪ್ರಮೀಲೆಗೆ ತಿಳಿದಿದ್ದರೆ ಅವಳು ಅಂಜಿಬಿಡಬಹುದಿತ್ತೇನೋ! ತಮ್ಮಿಬ್ಬರ ಅಲ್ಪ ಪರಿಚಯದಲ್ಲೇ ತಾನು ಇಷ್ಟು ಮುಂದುವರಿದುದಕ್ಕಾಗಿ ಅವಳು ನಾಚಿಕೊಳ್ಳಬಹುದಿತ್ತು. ತನ್ನ ಅಣ್ಣನ ರೀತಿ ನಡತೆಗಳಲ್ಲಿನ ಅಂತರವನ್ನೂ ಮಾತಿನ ವ್ಯಂಗವನ್ನೂ ಆಕೆ ಕಾಣುತ್ತಿದ್ದಳಾದರೂ ಆವನ ಮನಸ್ಸಿನ ಆಸೆಯನ್ನು ಗುರುತಿಸಿಕೊಂಡಿರಲಿಲ್ಲ.

ರಾಜಾಸಾಹೇಬ್ ಪ್ರಮೀಲೆಯ ಮನೆ ಸೇರಿದಂದಿನಿಂದ ದಿನ ದಿನವೂ ಅವನ ಮೇಲೆ ಪ್ರಮೀಲೆಯ ವರ್ಚಸ್ಸು ಬೀಳುತ್ತಿತ್ತು. ಮನೆತನದ ಹಿರಿಯಳಾದ ಪ್ರಮೀಲೆಯ ಮಾತೃಸದೃಶ ವರ್ತನೆಯನ್ನು ಅವನು ತೂಗಿನೋಡಿ ಅರ್ಥ ಮಾಡಿಕೊಂಡಿದ್ದರೆ ತನ್ನ ಭಾವನೆಗಳ ಬಗೆಗೆ ಅವನು ನಾಚಿಕೊಳ್ಳಬಹುದಿತ್ತು. ಅಂಥ ಪ್ರಮೀಲೆಯೊಡನೆ ತಾನು ವರ್ತಿಸುತ್ತಿದ್ದ ರೀತಿ, ಕಲ್ಪಿಸುತ್ತಿದ್ದ ವಿಚಾರ

ಗಳಿಗೆ ಏನೆನ್ನಬೇಕು ? ಅಲ್ಲಿಗೆ ಬಂದು ಒಂದು ವಾರ ಕಳೆದುಹೋಗಿತ್ತು. ಒಂದು ಸಂಜೆ ಹಾಸುಗೆಯಲ್ಲಿ ಬಿದ್ದುಕೊಂಡು, ಆ ಒಂದು ವಾರದಲ್ಲಿ ನಡೆದು ಹೋದ ಸಂಗತಿಗಳನ್ನೂ ಬೆಳೆದು ಬಂದ ಸಲುಗೆಯ ರೀತಿ ಮತ್ತು ಪ್ರಗತಿ ಯನ್ನೂ ನೆನಪು ಮಾಡಿಕೊಳ್ಳುತ್ತಿದ್ದ. ನಿರೀಕ್ಷೆ ಮೀರಿ ಆ ಸಂಬಂಧ ಬೆಳೆಯುತ್ತ ಲಿದ್ದುದು ಅವನಿಗೆ ಅಚ್ಚರಿಯನ್ನುಂಟು ಮಾಡಿತ್ತು.

ಪ್ರಮೀಲೆಯನ್ನು ಮೆಚ್ಚಿಕೊಂಡಿರುವದನ್ನು ಆತ ಅಲ್ಲಗಳೆಯುವಂತಿರ ಲಿಲ್ಲ. ಆತನೇನೋ ವಿಶಾಲ ದೇಹ ತಾಳಿ ಬಂದಿದ್ದ. ಅದಕ್ಕೆಂದೇ ಇರ ಬಹುದು, ಚಿಕ್ಕ ಕೋಮಲ ಶರೀರದ ಹೆಂಗಸರನ್ನು ಕಂಡರೆ ಆತನ ಮನಸ್ಸು ಕರಗಿಬಿಡುತ್ತಿತ್ತು. ಪ್ರಮೀಲೆಯ ಚಿಕ್ಕ ಆಕಾರ, ಕೋಮಲತೆ, ಪ್ರಸನ್ನ ಸ್ವಭಾವ ಗಳು ಅವನ ಮನಸ್ಸನ್ನು ಸೆಳೆದಿದ್ದವು. ಅಬ್ಬ, ಅವಳೆಷ್ಟು ಧೈರ್ಯಶಾಲಿನಿ ! ಅಂಥ ಬಡತನದಲ್ಲೂ ಅವಳು ಸುಖಿಯಾಗೇ ಇದ್ದಳು. ಯಾವ ಘಟನೆಯೂ ಅವಳ ಮನಸ್ಸನ್ನು ದುಃಖಕ್ಕೀಡು ಮಾಡಿರಲಿಲ್ಲ. ತಾನು ಅವಳನ್ನು ಸಮಾ ಧಾನ ಪಡಿಸಬೇಕಾದ ಪ್ರಮೇಯವೇ ಇರಲಿಲ್ಲ. ಅವರಿಬ್ಬರ ಮನಸ್ಸುಗಳೂ ಒಂದಕ್ಕೊಂದು ಹೊಂದಿಕೊಂಡೇ ಹೊರಟಿದ್ದವು. ತನ್ನ ಜೀವಮಾನದಲ್ಲೇ ಬೇರಾವ ಹೆಂಗಸಿನೊಡನೆಯೂ ಇಷ್ಟೊಂದು ನಿರ್ಭೀತಿಯಿಂದ ಆತ ವರ್ತಿಸಿರ ಲಿಲ್ಲ. ಸುಶೀಲೆಯನ್ನು ಪ್ರೀತಿಸಿದ್ದುದಕ್ಕಾಗಿ ತನ್ನನ್ನು ತಾನೇ ಹಳಿದುಕೊಂಡ. ಅವರಿಬ್ಬರ ಮಧ್ಯೆ ಯಾವುದೋ ಒಂದು ಶಕ್ತಿ ಅಡ್ಡ ಬರುತ್ತಿದ್ದುದನ್ನೂ ನೆನಪು ಮಾಡಿಕೊಂಡ ಸುಶೀಲೆ ಅವನೊಡನೆ ಅನೇಕ ಸಲ ಜಗಳವಾಡಿದ್ದಳು. ಪ್ರಮೀಲೆಯೊಡನೆ ನಿರ್ಭೀತಿಯಿಂದ ಮಾತಾಡುವಂತೆ ಸುಶೀಲೆಯೊಡನೆ ಮಾತಾಡಲು ಸಾಧ್ಯವಾಗಿರಲಿಲ್ಲ. ಪ್ರಮೀಲೆಯೊಡನೆ ಮಾತಾಡುವದೆಂದರೆ ಒಂದು ಸುಂದರ ಮೂರ್ತಿಯ ಎದುರಿಗೆ ಕುಳಿತು ಮಾತಾಡುವಷ್ಟು ಹಗುರವೆನ್ನಿ ಸುತ್ತಿತ್ತು. ಸುಶೀಲಳಂತೆ ಇವಳೆಲ್ಲಿ ಸಿಟ್ಟಿಗೇಳುವಳೋ ಎಂಬ ಭಯವೇ ಇರ ಲಿಲ್ಲ. ಆದರೇನು ? ಸುಶೀಲಾರಾಣಿ ಆತ ಪ್ರೀತಿಸಿದ್ದ ಹುಡುಗಿ; ಅದರಲ್ಲಿ ಸಂಶಯವೇ ಇರಲಿಲ್ಲ.

ಹೀಗೆ ಮನಸ್ಸು ಹೊಯ್ದಾಡಲು ಕಾರಣವೇನು ? ಪ್ರಮೀಲೆ ಮುಂಬ ಯಿಯ ಹುಡುಗಿ; ಅವಳ ಪ್ರಗತಿಶೀಲ ವಿಚಾರ, ನಿರ್ಭೀತಿಯ ಆಚರಣೆಗಳೇ ಅವಳು ಸಲುಗೆಯಿಂದ ವರ್ತಿಸಿದುದರ ಕಾರಣವಿರಬಹುದೆಂದು ಆತ ತರ್ಕಿಸಿದ.

ಅನೇಕ ಪುಸ್ತಕಗಳಲ್ಲೂ ಆತ ಮುಂಬಯಿಯ ಹುಡುಗಿಯರ ಬಗೆಗೆ ಓದಿದ್ದ. ಹೌದು, ಆ ಲೇಖಕರು ಇಂಥಹುಡುಗಿಯರ ಸ್ವಭಾವಗಳನ್ನೇ ವರ್ಣಿಸಿರಬಹುದು. ಆವನು ಪ್ರಮೀಲೆಯ ಸಾನ್ನಿಧ್ಯದಲ್ಲಿರುವಾಗ ಅವಳು ಸ್ತ್ರೀಯೆಂಬ ಕಲ್ಪನೆಯೂ ಅನನಿಗೆ ಬರುತ್ತಿರಲಿಲ್ಲ. ಹೀಗೆಲ್ಲ ಕಲ್ಪಿಸಿಕೊಳ್ಳುತ್ತಲೂ ಅವನಿಗೆ ತುಸು ಸಮಾಧಾನವಾಯಿತು. ಪ್ರಮೀಲೆಯಿಂದ ದೂರವಾಗಿದ್ದಾಗಲೂ ಅವಳ ಯೋಚನೆಯಿಲ್ಲದೆ ಸಮಯ ಕಳೆಯಲು ಆತ ಸಮರ್ಥನಾದ. ತಾವಿಬ್ಬರೂ ಪರಸ್ಪರರನ್ನು ಅರ್ಥ ಮಾಡಿಕೊಂಡು ವರ್ತಿಸುತ್ತಿರುವದಾಗಿ ನಂಬಿಕೊಂಡು ಆತ ನಿದ್ರೆಹೋದ.

ಭಾವನಾಶೀಲ ಮನುಷ್ಯನ ಮನಸ್ಸೂ ಬಲು ವಿಚಿತ್ರ. ಬೆಳಗಾಗಿ ಎದ್ದ ನಂತರ ಅವನಿಗೆ ಹಿಂದಿನ ರಾತ್ರಿ ತಾನು ತಾಳಿದ್ದ ನಂಬುಗೆಯ ಬಗೆಗೇ ಅವಿಶ್ವಾಸ ಹುಟ್ಟಿತು. ಮನಸ್ಸು ತನ್ನ ತಾಣವನ್ನು ಬಿಟ್ಟು ಎಲ್ಲೆಲ್ಲಿಯೋ ಅಲೆದು ಬಂದುದಕ್ಕಾಗಿ ಆತ ವ್ಯಥೆಪಡುವಂತಾಯಿತು. ತರುಣನಿಗೆ ಇದಕ್ಕೂ ಹೆಚ್ಚಿನ ವ್ಯಸನವಿರುವದೇ? ಸುಶೀಲಳಿಗೆ ಆತ ದ್ರೋಹ ಬಗೆಯುತ್ತಿರಲಿಲ್ಲವೇ? ಆ ವಿಚಾರ ಅವನ ನೆಮ್ಮದಿಯನ್ನೇ ಹಾಳು ಮಾಡುವಂತಹದಿದ್ದರೂ ಆ ಪ್ರಶ್ನೆಯಿಂದ ಆವನಿಗೆ ಬಿಡುಗಡೆಯಿರಲಿಲ್ಲ. ಸುಶೀಲಳ ಫೋಟೋ ತೆಗೆದು ನೋಡಿದೊಡನೆ ಆವನ ಮನಸ್ಸಿನ ಮೇಲೆ ನಾನಾ ಬಗೆಯ ಆಘಾತಗಳಾದವು. ಮೊದಲನೆಯದಾಗಿ: ಸುಶೀಲಳಿಗಿಂತ ಪ್ರಮೀಲೆ ಸುಂದರಿಯಾಗಿ ಕಂಡಳು. ಸುಶೀಲಳ ಫೋಟೋ ತೆಗೆದವನೇ ತಪ್ಪು ಮಾಡಿರಬಹುದೇ? ಮಂದಹಾಸ್ಯ ಬೀರಬೇಕೆಂದು ಅವನು ಸೂಚಿಸಿದ್ದರೆ ಸುಶೀಲೆ ದಿಟ್ಟಿಸಿ ನೋಡಿದ್ದಳು. ಆ ದೃಷ್ಟಿಯಲ್ಲಿ ಗಾಂಭೀರ್ಯವಿತ್ತು. ಅದು ರಾಣಿಯರಲ್ಲಿರಬೇಕಾದ ಗಾಂಭೀರ್ಯವಾದರೂ ಆದರಿಂದ ಸಾಮಾನ್ಯರಿಗೆ ಹೆದರಿಕೆಯಾಗುವಂತಿತ್ತು.

ಚಿತ್ರದಲ್ಲಿರುವವಳ ಸಜೀವ ದೇಹದೊಡನೆ ತಾನು ಪ್ರೇಮದಲ್ಲಿರುವದನ್ನು ನೆನಸಿಕೊಂಡು ಏಕಾಗ್ರ ಚಿತ್ತದಿಂದ ಆ ಚಿತ್ರವನ್ನೇ ನೋಡುತ್ತ ಕೂತಿರುವ ಪ್ರಣಯಿಯ ಮನಸ್ಸಿನ ಮೇಲಾಗುವ ಪರಿಣಾಮವನ್ನು ಅನುಭವಿಕರೇ ಕಲ್ಪಿಸಿಕೊಳ್ಳಲಿ! ಅದೇ ಬಗೆಯಾಗಿ ಸುಶೀಲಳ ಚಿತ್ರವನ್ನು ರಾಜಾಸಾಹೇಬ ನೋಡುತ್ತಿದ್ದ. ಹದಿನೈದು ನಿಮಿಷಗಳ ನಂತರ ಅವನ ವಿಚಾರಗಳು ತಿಳಿಯಾದವು. ಆರು ತಿಂಗಳ ಹಿಂದೆ ಸುಶೀಲಳ ಸೌಂದರ್ಯಕ್ಕೆ ಮನ ಸೋತುದು

ಅವಳನ್ನು ಲಗ್ನವಾಗಲು ಕೇಳಿದುದು, ಅವಳ ದೃಷ್ಟಿಯ ಮುಂದೆ ಬಂದು ನಿಂತಂತಾಯಿತು. ಅವಳು ಒಪ್ಪಿಗೆ ಸೂಚಿಸಿ ಮುಖ ಕೆಳಕ್ಕೆ ಮಾಡಿದಾಗ ಅವನು ಆಕಾಶದಲ್ಲಿ ಹಾರುತ್ತಿದ್ದ ಹಕ್ಕಿಯಂತೆ ಸ್ವರ್ಗ ಸುಖದ ಅನುಭವ ಪಡೆದಿರಲಿಲ್ಲವೆ ?

ಮುಂಜಾವನ್ನು ಅದೇ ಸವಿನೆನಪಿನಲ್ಲಿ ಕಳೆದು ಊಟದಹೊತ್ತಿಗೆ ಒಂದು ನಿರ್ಧಾರಕ್ಕೆ ಬಂದಿದ್ದ. ಸುಶೀಲಳನ್ನು ಆತ ಮನಸಾ ಪ್ರೀತಿಸಿದ್ದ; ಪ್ರಮೀಳೆಯನ್ನು ಮೆಚ್ಚಿಕೊಂಡಿದ್ದ. ತನ್ನ ಈ ಅಭಿಪ್ರಾಯದ ಪೃಥಕ್ಕರಣವನ್ನು ವಿವೇಕಕ್ಕೆ ಒಪ್ಪಿಸಿದಾಗ ಅವನ ಅಭಿಪ್ರಾಯವನ್ನೇ ವಿವೇಕ ಎತ್ತಿಹಿಡಿಯಿತು.

ಅಂದು ರವಿವಾರ; ಅದು ಅನುಕೂಲವೇ ಆಗಿತ್ತು. ಮುಂಬಯಿ ನಾಗರಿಕರಿಗೆಲ್ಲ ರವಿವಾರ ಬಿಡುವಿನ ದಿನ. ಇಡಿಯ ವಾರವೆಲ್ಲ ದುಡಿದು ಮುಂದಿನ ವಾರದ ಕುರಿತು ಯೋಚಿಸಲು ಅನುಕೂಲವಾದ ದಿನವದು. ತನ್ನ ಮೆಚ್ಚಿನ ಹುಡುಗಿಯನ್ನು ರಾಜಾಸಾಹೇಬ್ ದೂರ ಬಿಟ್ಟು ಬಂದಿದ್ದನಾದ್ದರಿಂದ ಅವಳ ಬಗೆಗೆ ವಿಚಾರಮಾಡಲು ಆ ದಿನವೂ ಅನುಕೂಲವೇ ಆಗಿತ್ತು. ರಾತ್ರಿಯೂಟದ ನಂತರವೂ ಸುಶೀಲಳ ಬಗೆಗೇ ವಿಚಾರ ಮಾಡುತ್ತ ಆತ ಸುತ್ತಿ ಬರಲು ಹೊರಟಿದ್ದ.

ಸುಶೀಲಳ ಫೋಟೋ ಅವನ ಕೈಯಲ್ಲಿಯೆ ಇತ್ತು. ಬೆಳದಿಂಗಳ ಬೆಳಕಿನಲ್ಲೇ ಅದನ್ನು ಅನೇಕ ಸಲ ನೋಡಿಕೊಂಡಿದ್ದ. ಸುಮಾರು ವೇಳೆಯ ತನಕ ಆತ ಎಲ್ಲೆಲ್ಲಿಯೋ ಸುತ್ತಿ ಒಂದು ಗಿಡದ ಸಮೀಪಕ್ಕೆ ಬಂದು ' ಸುಶೀಲಾರಾಣಿ ' ಎಂದು ಕರೆದಿದ್ದ.

ಆತನ ಪಕ್ಕದಲ್ಲಿ 'ಹಂ' ಎಂಬ ಧ್ವನಿಯೊಂದು ಪ್ರತ್ಯುತ್ತರವಿತ್ತಿತ್ತು. ಅವನಿಂದ ತುಸು ಅಂತರದ ಮೇಲೆ ಸುಶೀಲೆ ನಿಂತಿದ್ದಳು. ಗಿಡಗಳ ಟೊಂಗೆಗಳ ಸಂದುಗಳೊಳಗಿಂದ ಚಂದ್ರಪ್ರಕಾಶ ಹರಿದು ಬಂದು ಅವಳ ಮುಖವನ್ನು ಬೆಳಗಿತ್ತು.

# ೧೨

ಮಾತು ಆರಂಭಿಸುವದರಲ್ಲೂ ಓಡಾಟದ ಸ್ಪರ್ಧೆಯಲ್ಲೂ ಮೊದಲ ಹೆಜ್ಜೆ ಅಥವಾ ಪ್ರಾರಂಭವೇ ಮಹತ್ವದ್ದಲ್ಲವೆ! ಆ ಆಕಸ್ಮಿಕ ಸಂದರ್ಶನದಿಂದಾದ ಆಶ್ಚರ್ಯದಿಂದ ಸುಧಾರಿಸಿಕೊಳ್ಳುವಲ್ಲಿ ಸುಶೀಲಳೇ ಮೊದಲಿಗಳಾದಳು. ಅದಕ್ಕೆ ಕಾರಣವೂ ಇತ್ತು. ಅವನು ಮುಂಬಯಿಯಲ್ಲಿ ಇರುವದು ಅವಳಿಗೆ ತಿಳಿದ ವಿಷಯವಾಗಿತ್ತು. ಅವನು ಹೀಗೆ ಆಕಸ್ಮಿಕವಾಗಿ ಭೆಟ್ಟಿಯಾದುದಕ್ಕಾಗಿ ಅವಳಿಗೆ ಆಶ್ಚರ್ಯವಾದುದೇನೋ ಸರಿಯೆ. ಆದರೆ ಆತನ ಆಶ್ಚರ್ಯ ಅವಳಿಗಿಂತಲೂ ಹೆಚ್ಚಿನದು. ಸುಶೀಲಾರಾಣಿ ಗೊಬ್ಬೂರಿನಲ್ಲೋ, ಬೆಳಗಾವಿಯಲ್ಲೋ ಅಥವಾ ಧಾರವಾಡದಲ್ಲೋ ಇರಬಹುದೆಂದು ಆತ ತಿಳಿದಿದ್ದ. ಅವಳನ್ನೀಗ ಮುಂಬಯಿಯಲ್ಲಿ ಹೀಗೆ ಆಕಸ್ಮಿಕವಾಗಿ ನೋಡುತ್ತಿರುವಾಗ ಅವನಿಗೆಂಥ ಆಶ್ಚರ್ಯವಾಗಿರಬಹುದೆಂದು ವಾಚಕರೇ ಊಹಿಸಿಕೊಳ್ಳಬೇಕು! ಅವನಿಗೆ ದಿಂಗು ಬಡಿದಂತಾಗಿ ತೀವ್ರ ಸುಧಾರಿಸಿಕೊಳ್ಳಲು ಸಾಧ್ಯವಿರಲಿಲ್ಲ. ಅವಳು ಮಾತ್ರ ಪರಿಸ್ಥಿತಿಗೆ ಹೊಂದಿಕೊಂಡು ಮುಂದಿನ ಕಾರ್ಯಕ್ಕೆ ಸಿದ್ಧಳಾಗಿದ್ದಳು.

"ಏನು ರಾಜಾಸಾಹೇಬರೇ ?" ಈ ಪ್ರಶ್ನೆಯನ್ನವಳು ಕೇಳಿದ ರೀತಿಯ ಮೇಲಿಂದಲೇ ಮುಂದೆ ಬರಲಿರುವ ಗಂಡಾಂತರವನ್ನು ಕಲ್ಪಿಸಿಕೊಳ್ಳಬಹುದಿತ್ತು. ಪ್ರೇಮ, ಅನುರಾಗಗಳ ಸಂಬಂಧವಿರುವಾಗ ಅದೂ ಪ್ರೇಯಸಿಯು ಅನೇಕ ದಿನಗಳ ವಿರಹದ ನಂತರ ಮರಳಿ ಕೂಡುವ ಸಂದರ್ಭದಲ್ಲಿ ಹೀಗೆ ಪ್ರಶ್ನಿಸುವದಕ್ಕಿಂತ ಕೊಡಲಿಯೊಂದರಿಂದ ಆತನ ತಲೆಗೆ ಹೊಡೆದಿದ್ದರೂ ಅವನಿಗಷ್ಟು ವ್ಯಸನವಾಗುತ್ತಿರಲಿಲ್ಲ. ಮುಂಜಾನೆ ತನ್ನ ವಿವೇಕ ಒಪ್ಪಿದ್ದ ಮಾತುಗಳನ್ನು ನೆನಸಿಕೊಂಡ.

"ಸುಶೀಲಾರಾಣಿ !"

ಅವಳನ್ನು ಬಿಗಿಯಾಗಿ ಅಪ್ಪಿಕೊಳ್ಳಲೆಂದು ಆತ ಮುಂದೆ ಹೆಜ್ಜೆಯನ್ನಿರಿಸಿದ. ಅವಳು ತಕ್ಷಣ ಹಿಂದೆ ಸರಿದಳು.

"ಬೇಡ ರಾಜಾಸಾಹೇಬ್, ಅದಾಗದು."

ಈಗಂತೂ ಅವನ ಹೃದಯವನ್ನು ಕಿತ್ತು ನೆಲಕ್ಕೆ ಕುಪ್ಪಳಿಸಿದಂತಾಯಿತು. ಆಶ್ಚರ್ಯದಿಂದ ದಿಂಗುಬಡೆದವನಿಗೆ ಅವನ ಪ್ರೇಯಸಿ ಅಂಥ ಮಾತುಗಳನ್ನಾಡ

ಬೇಕೇ ! 'ಬೇಡ, ರಾಜಾಸಾಹೇಬ್' ಈ ಮಾತುಗಳಲ್ಲಿ ಪ್ರೇಮ–ಅನುರಾಗ –ಸಲುಗೆಗಳ ಲವಲೇಶವೂ ಇರಲಿಲ್ಲ! ಆ ಶಬ್ದಗಳನ್ನುಚ್ಚರಿಸಿ ಅವಳು ಹಿಂದೆ ಸರಿದುದೆಂದರೆ ಅವನ ಕಪಾಳಕ್ಕೆ ಹೊಡೆದಂತಾಗಲಿಲ್ಲವೆ ?

"ಸುಶೀಲಾರಾಣಿ, ಏನಾಗಿದೆ ನಿನಗೆ ?"

ಸುಶೀಲೆ ಅವನನ್ನೇ ನೋಡುತ್ತಿದ್ದಳು. ಅವಳ ಫೋಟೋದ ನೆನಪಾಯಿತು ಆತನಿಗೆ. ತಾನೇ ಕ್ಯಾಮರಾದ ಹಿಂದೆ ನಿಂತು ಮಂದಹಾಸ್ಯ ಬೀರಲು ಅವಳಿಗೆ ಸೂಚಿಸುತ್ತಿರುವಂತೆಯೂ ಅದಕ್ಕೆ ಪ್ರತಿಯಾಗಿ ಅವಳು ಆ 'ರಾಣಿಯರ ನೋಟ' ಬೀರುತ್ತಿದ್ದಂತೆಯೂ ಭಾಸವಾಯಿತು. ಅವಳ ಆ ಭಂಗಿಯಿಂದ ಅವನ ಹೃದಯದಲ್ಲಿ ಬಿರುಗಾಳಿಯೇ ಎದ್ದಿತು. ಅವನ ಹೃದಯದ ಯಾವದೋ ಒಂದು ಮೂಲೆಯಲ್ಲಿ 'ತಾನೇನೋ ತಪ್ಪು ಮಾಡಿರಬೇಕು, ಅಂತೆಯೇ ಅವಳು ಹಾಗೆ ದಿಟ್ಟಿಸಿ ನೋಡುತ್ತಿದ್ದಾಳೆ.' ಎಂದೂ ಅನ್ನಿಸಿತು.

"ನೀನು ಹೀಗ್ಯಾಕೆ ಮಾಡುತ್ತಿರುವಿಯೆಂಬುದೇ ನನಗೆ ತಿಳಿಯದಾಗಿದೆ." ಅದಕ್ಕೂ ಹೆಚ್ಚಿನ ಶಬ್ದಗಳು ಅವನಿಂದ ಹೊರಡಲಿಲ್ಲ.

"ಖಂಡಿತವಾಗಿ ?"

"ಅಂದರೆ ?"

"ನಾನು ನಿಮ್ಮನ್ನು ಸುಂದರ್ ರೆಸ್ಟೋರೆಂಟಿನಲ್ಲೇ ನೋಡಿದ್ದೆ."

ಈಗ ಅವನಿಗೆ ಅವಳ ವರ್ತನೆ ಅರ್ಥವಾಯಿತು. ಅವನ ತಲೆ ತಿರುಗುವ ಅನುಭವವಾಯಿತು. ಸುಶೀಲೆ ಎಡೆಬಿಡದೆ ಮಾತಾಡುತ್ತಿದ್ದಳು.

"ಲೀಲಾರಾಣಿಯೊಡನೆ ನಾನು ಅಲ್ಲಿಗೆ ಬಂದಿದ್ದೆ. ಅವಳೇ ನನ್ನನ್ನು ಮುಂಬಯಿಗೆ ಕರೆಸಿದ್ದಳು. ಅವಳ ನೃತ್ಯ ನೋಡಲೆಂದೇ ನಾನು ಬಂದಿದ್ದೆ. ಅಲ್ಲಿಯೇ ನಿಮ್ಮನ್ನು ಕಂಡಿದ್ದೆ."

ಜಾರಿ ಬಂದು ತನ್ನ ಮೇಲೆ ಬೀಳಬಹುದಾದ ಬಂಡೆಯೊಂದನ್ನು ಅತಿ ಪ್ರಯಾಸದಿಂದ ತಡೆಯುವವನಂತೆ ಅವಳ ಮಾತುಗಳನ್ನು ತಡೆದು, ತುಸು ಧೈರ್ಯ ತಂದುಕೊಂಡ ರಾಜಾಸಾಹೇಬ.

"ಇಲ್ಲಿ ಕೇಳು ಸುಶೀಲಾ........"

ಹೀಗೆ ಹೇಳುವಾಗ ಆ ದಿನದ ಘಟನೆಗಳೆಲ್ಲ ನೆನಪಿಗೆ ಬರಬಹುದೆಂದು

ನಂಬಿದ್ದ. ಅವನು ಹೇಳಿದ್ದುದು ಸರಿಯಾಗಿದ್ದರೂ ಹೇಳಿದ ರೀತಿ ಮತ್ತು ಶಬ್ದ ಸರಿಯಾಗಿರಲಿಲ್ಲ. ಅವು ನಾಟಕದ ಮಾತುಗಳಂತೆ ಕಂಡವು. ತಪ್ಪುಮಾಡುವುದರಲ್ಲಿ ತೊಡಗಿದ್ದ ಗಂಡನನ್ನು ಅವನು ತಪ್ಪು ಮಾಡುತ್ತಿದ್ದ ಸಮಯದಲ್ಲಿ ಹಿಡಿದ ಜಗಳಗಂಟಿಯಾದ ಹೆಂಡತಿಯ ಮುಂದೆ ಆ ಬಡ ಗಂಡ ಆತ್ಮಸಮರ್ಥನೆ ಮಾಡಿಕೊಳ್ಳುವಾಗಿನ ಸ್ಥಿತಿ ಅವನದಾಗಿತ್ತು.

"ನೀವು ಹೇಳಬೇಕಾದುದೇನು? ಹೇಳುವಂಥಾದ್ದು ಅದರಲ್ಲೇನಿದೆ? ನೀವು ಒಬ್ಬ ಹೆಂಗಸಿನೊಡನೆ ಆ ಹೊಲಸು ಗದ್ದಲ ಎಬ್ಬಿಸಿದ್ದುದನ್ನು ನಾನೇ ಕಂಡಿದ್ದೇನೆ. ಅವಳಾರೆಂದು ನಾನು ತಿಳಿದುಕೊಳ್ಳಬಯಸುವದಿಲ್ಲ. ನಿಮ್ಮೊಡನೆ ಅವಳ ಸಂಬಂಧದ ವಿಚಾರವೂ ಬೇಡ. ಅವಳ ಸ್ವಭಾವ ಎಂತಹದೇ ಇರಲಿ, ನೀವು ಅವಳೊಡನೆ ಸಾರ್ವಜನಿಕ ಹೋಟಲೊಂದರಲ್ಲಿ ಇದ್ದಿರಲಿಲ್ಲವೆ? ಸಾಕು. ಒಂದು ಕ್ಷುಲ್ಲಕ ವಿಷಯದಲ್ಲಿ ನಾನು ಬಹಳ ಗದ್ದಲ ಎಬ್ಬಿಸುತ್ತಿರುವೆನೆಂದು ನೀವೆನ್ನಬಹುದು. ಬೇರೆಯವರಿಗೆ ಗೊತ್ತಾಗದಂತೆ ಇಂಥ ಕಾರ್ಯದಲ್ಲಿ ತೊಡಗುವದು ಪುರುಷನ ಹಕ್ಕು ಎಂದು ನೀವು ಸಾಧಿಸಬಹುದು. ಆದರೆ ನನಗೆ ಅಷ್ಟೇ ಸಾಕು. ನಮ್ಮಿಬ್ಬರ ಸಂಬಂಧ ಮುರಿದಂತಾಯಿತು. ನಾನೇನು ದಾರಿಬಿಟ್ಟು ಮಾತಾಡುತ್ತಿಲ್ಲನಷ್ಟೆ? ನನಗಂತೂ ಹಾಗನ್ನಿಸುತ್ತಿಲ್ಲ. ನಾನು ಬೆಳಗಾವಿಯಲ್ಲೋ ಇನ್ನೆಲ್ಲೋ ಇರುವೆನೆಂದು ತಿಳಿದು ನೀವು ಮುಂಬಯಿಗೆ ಬಂದು ಹೀಗೆಲ್ಲ ಮಾಡುವದು ಯೋಗ್ಯವೆ? ನನ್ನ ಮೇಲೆ ನಿಮ್ಮ ಪ್ರೇಮವಿದ್ದರೆ ನೀವು ಹೀಗೆ ಮಾಡುತ್ತಿದ್ದಿರಾ? ನಿಮ್ಮ ಮೋಸಗಾರಿಕೆಯಿಂದ ನನಗೆ ಬಹಳ ದುಃಖವಾಗಿದೆ."

ರಾಜಾಸಾಹೇಬ್ ಅಲ್ಲಿನ ಸ್ವಚ್ಛ ಹವೆಯನ್ನು ಸೇವಿಸುತ್ತಿದ್ದನಾದರೂ ಅವನ ಉಸಿರುಗಟ್ಟಿದಂತಾಯಿತು. ಬಾಯಿಂದ ಮಾತೇ ಹೊರಡದಾದವು. ಮನೆಗೆ ಹೋಗಿ ಹಣೆಯ ಮೇಲೆ ಬರ್ಫವನ್ನಿಟ್ಟುಕೊಂಡು ಮಲಗಿ ತುಸು ವಿಶ್ರಾಂತಿ ಪಡೆದ ನಂತರ ಮಾತ್ರ ಕುಮಾರಿಯ ಕುರಿತು ವಿವರಿಸಿ ಹೇಳಲು ಅವನಿಂದ ಸಾಧ್ಯವಾಗಬಹುದಿತ್ತು.

ಸುಶೀಲೆ ಮೌನ ತಾಳಿದ್ದಳು. ಅಷ್ಟು ಮಾತಾಡಿಯಾದ ಮೇಲೆ ಮುಂದೇನು ಹೇಳಬೇಕೆಂಬುದನ್ನು ಯೋಚಿಸುತ್ತಿದ್ದಳು. ಅಂದೇ ಅವಳು ಓದಿದ್ದ ಕಾದಂಬರಿಯೊಂದರಲ್ಲಿನ ಮಾತು ನೆನಪಾದವು.

"ನಾನು ಭಾವಜೀವಿಯೆಂದು ನೀವು ಭಾವಿಸಬಹುದು. ಆದರೆ ನನ್ನಲ್ಲಿ ಪ್ರೇಮದ ಬಗ್ಗೆ ಉಚ್ಚ ಕಲ್ಪನೆಗಳಿವೆ. ಪರಸ್ಪರರಲ್ಲಿ ನಂಬುಗೆಯಿಲ್ಲದಿದ್ದರೆ ಪ್ರೇಮಕ್ಕೆ ಬೆಲೆಯೇ ಇಲ್ಲ. ವಿಶ್ವಾಸವೇ ಪ್ರೀತಿ." ಅವಳು ತಡೆದಳು. ಮುಂದಿನ ಮಾತು ನೆನಪಿಗೆ ಬಾರದಾದವು. ಆದರೂ ಸಾವರಿಸಿಕೊಂಡು,

"ಲಗ್ನವಾಗಲು ಒಪ್ಪಿಕೊಂಡಿರುವ ಪ್ರಿಯಕರನಿಂದ ಅವನ ಪ್ರೇಯಸಿ ಬಯಸುವದೇನು ಗೊತ್ತೇ? ಪ್ರತ್ಯಕ್ಷ ಅಪ್ಸರೆಯೇ ಮುಂದೆ ಬಂದುನಿಂತರೂ ತನ್ನ ಪ್ರಿಯಕರನು ತನ್ನ ಪವಿತ್ರ ಬಂಧನವನ್ನು ನೆನೆಸಿಕೊಂಡು ಧೀರನಂತೆ ನಿರ್ಲಿಪ್ತನಾಗಿರಬೇಕೆಂದು. ಆದರೆ ನಾನು ಕಂಡುದೇನು? ನೀವು ಬೇರೆಯ ವಳೊಬ್ಬಳೊಡನೆ ಸಾರ್ವಜನಿಕ ಹೋಟಲಿನಲ್ಲಿ ಹುಡುಗಾಟ ನಡಸಿರುವಾಗ ನಿಮ್ಮ ಕೈ ತಾಕಿದುದರಿಂದ ಆ ಆಳು ಬಿದ್ದು ಅವನ ತಟ್ಟೆಯಲ್ಲಿನ ಸಾರು ಅನ್ನ ಪಲ್ಯಗಳೆಲ್ಲ ನಿಮ್ಮ ಬಟ್ಟೆಯ ಮೇಲೆ ಬಿದ್ದುದನ್ನು........ "

ಸುಶೀಲ ಈ ವಿಷಯದಲ್ಲಿ ಮಾತ್ರ ತನ್ನನ್ನು ಅನ್ಯಾಯವಾಗಿ ದೂಷಿಸುತ್ತಿ ರುವಳೆಂದು ಆತನಿಗೆ ಅನ್ನಿಸಿತು. ಆ ಆಳಿಗೆ ಅವನ ಕೈ ತಾಕಿರಲೂ ಬಹುದು, ಒಂದು ಹನಿ ಸಾರು ಅವನ ಬಟ್ಟೆಯ ಮೇಲೆ ಎಲ್ಲಿಯೋ ಸಿಡಿದಿರಲೂಬಹುದು. ಅಷ್ಟುಮಾತ್ರಕ್ಕೇ ಅವನೇ ಆಳನ್ನು ಕೆಡವಿದಂತೆ, ಸಾರಿನ ಪಾತ್ರೆಯೇ ಅವನ ಮೇಲೆ ಬಿದ್ದಂತೆ ಅವಳು ದೂಷಿಸುತ್ತಿದ್ದಳಲ್ಲ!

"ನಿಮ್ಮ ಮೇಲೆ ನನಗೆ ಯಾವ ಸಿಟ್ಟೂ ಇಲ್ಲ. ನನಗೇ ಹೇಸಿಕೆಯಾಗಿದೆ. ನೀವು ನನ್ನನ್ನು ಪ್ರೀತಿಸುತ್ತಿಲ್ಲವೆಂಬುದನ್ನು ಆ ಘಟನೆ ನನಗೆ ತೋರಿಸಿ ಕೊಟ್ಟಿದೆ. ನಾವಿಬ್ಬರೂ ಒಂದೇಕಡೆಗೆ ಇರುವಾಗ ನೀವು ನನ್ನನ್ನು ಪ್ರೀತಿಸು ವದು ಮಹತ್ವದ್ದಲ್ಲ. ಪ್ರಣಯಿಗಳು ಒಬ್ಬರಿಂದ ಇನ್ನೊಬ್ಬರು ದೂರವಿರುವ ಸಂದರ್ಭಗಳಲ್ಲಿ ಪ್ರೇಮದ ನೈಜ ಪರೀಕ್ಷೆ! ಈಗ ನಡೆದು ಹೋದುದನ್ನು ನೋಡಿದರೆ ನಮ್ಮಿಬ್ಬರ ಪ್ರಣಯ ಸಂಬಂಧ ಮುಂದುವರಿಯಲಾರದೆಂದು ನನ ಗನ್ನಿಸುತ್ತದೆ. ನನ್ನಲ್ಲಿ ಇನ್ನು ಮೇಲೆ ಮೊದಲಿನ ಆ ಶುದ್ಧ ಪ್ರೇಮ ಹುಟ್ಟ ಲಾರದು. ನಾವಿಬ್ಬರೂ ಗೆಳೆಯರಾಗಿಯೇ ಇರೋಣ. ಆದರೆ ಪ್ರೇಮ ಮಾತ್ರ ಅಸಾಧ್ಯ. ಪ್ರೇಮವೆಂದರೆ ಯಂತ್ರವಲ್ಲ; ಯಂತ್ರದಂತೆ ಬೇಕಾದಾಗ ಅದನ್ನು ಬಿಚ್ಚಿ ಜೋಡಿಸಲು ಬರುವುದಿಲ್ಲ."

ಅವಳು ಅಲ್ಲಿಂದ ಮುಂದೆ ಸಾಗಿ ಬಾಗಿಲನ್ನು ಧಡಾರನೆ ಇಕ್ಕಿಕೊಂಡು ಮನೆ ಸೇರಿದಳು. ಅವಳು ಮಾಯವಾದುದನ್ನೇ ನೋಡುತ್ತಿದ್ದ. ಅಷ್ಟು ಸಮಯ ಅವಳೊಡನಿದ್ದರೂ ಆತ ಏನನ್ನೂ ಮಾತಾಡಿರಲಿಲ್ಲ. ಅವನ ಹೃದಯ ವನ್ನು ಕೊಂದು ಅದರ ಶವದ ಮೇಲೆ ನಿಧಾನವಾಗಿ ಹೆಜ್ಜೆಗಳನ್ನಿಕ್ಕುತ್ತ ಅವಳು ಹೋದಳು !

ಇಪ್ಪತ್ತು ನಿಮಿಷ ಕಳೆದುಹೋದರೂ ರಾಜಾಸಾಹೇಬ್ ಇನ್ನೂ ಅಲ್ಲಿಯೆ ನಿಂತಿದ್ದ ! ಸಿಗರೇಟೊಂದನ್ನು ನಿಧಾನವಾಗಿ ಸೇದುತ್ತ ಸುಶೀಲೆ ಹಾಡುವ ದನ್ನು ಕೇಳುವುದರಲ್ಲಿ ಮಗ್ನನಾಗಿದ್ದ. ವಿಲಾಸರಾಯ ಕಿಟಕಿಯಾಚೆ ದೃಷ್ಟಿತೂರಿ ದಾಗ ಯಾವನೋ ಒಬ್ಬ ಕತ್ತಲೆಯಲ್ಲಿ ಗೋಡೆಗೆ ಆತು ನಿಂತು ಕಿಟಕಿಯಲ್ಲಿ ಇಣಿಕಿ ಹಾಕುವದನ್ನು ಕಂಡು ಭಯಚಕಿತನಾದ. ಹೊರಗೆಹೋಗಿ ಅಲ್ಲಿ ನಿಂತಿ ರುವವನ ಬೆನ್ನು ಚಪ್ಪರಿಸಿ ಆತ ಹಾಗೆ ನೋಡುತ್ತಿರುವ ಕಾರಣ ಕೇಳಬೇಕೆಂದು ವಿಲಾಸರಾಯನಿಗೆ ಇಚ್ಛೆಯಾಯಿತು. ಆದರೆ ಬೆಳದಿಂಗಳ ಬೆಳಕಿನಲ್ಲಿ ರಾಜಾ ಸಾಹೇಬನ ಎತ್ತರ ನಿಲುವು, ಬಲವಾದ ಮೈಕಟ್ಟನ್ನು ನೋಡಿದೊಡನೆ ಹಾಗೆ ಮಾಡಲು ಅವನಿಗೆ ಧೈರ್ಯವುಳಿಯಲಿಲ್ಲ. ಸುತ್ತಲೂ ಮನೆಗಳಲ್ಲಿ ದರೋಡೆ ಖೋರರ ಹಾವಳಿಯಿದೆಯೆಂದೂ ಆತ ಕೇಳಿದ್ದ. ಅವರು ಬಂದು ಮನೆಯ ಆಳನ್ನು ಕಬ್ಬಿಣದ ಸಲಾಕೆಯಿಂದ ಹೊಡೆದುದರಿಂದ ಆಳಿನ ತಲೆಯೊಡೆದು ದನ್ನೂ ಅರಿತಿದ್ದ. ಹೀಗಿರುವಾಗ ಅಂಥ ರಾತ್ರಿಯಲ್ಲಿ ಹೊರಗಿನ ಗಿಡದಬುಡದ ಕತ್ತಲೆಯಲ್ಲಿ ನಿಂತ ಆ ಧಾಂಡಿಗನನ್ನು ಕಂಡ ಮೇಲೆ ಅವನ ಸ್ಥಿತಿಯೇನಾಗಿರ ಬೇಕು ?

"ಅಯ್ಯೋ....." ಎಂಬ ಶಬ್ದ ಅವನ ಬಾಯಿಂದ ಹೊರಬಿತ್ತು.

ತನ್ನ ವಿಚಾರಗಳಲ್ಲೇ ಮಗ್ನನಾಗಿದ್ದ ರಾಜಾಸಾಹೇಬ ಸುಶೀಲಾರಾಣಿ ಯನ್ನು ಮತ್ತೊಮ್ಮೆ ನೋಡಬೇಕೆಂದು ಆ ಮನೆಯ ಸಮೀಪಕ್ಕೆ ಬಂದಿದ್ದ. ವಿಲಾಸರಾಯನ ಶಬ್ದ ಕಿವಿಗೆ ಬಿದ್ದೊಡನೆ ನಾಲ್ಕು ಹೆಜ್ಜೆ ಹಿಂದಕ್ಕೆ ಹಾರಿ ಆ ಶಬ್ದ ಕೇಳಬಂದ ಕಿಟಕಿಯತ್ತ ಗಾಬರಿಯಿಂದ ನೋಡಿದ. ವಿಲಾಸರಾಯ ಮರೆ ಯಾಗಿದ್ದ. ತುಸು ಸಮಯದ ನಂತರ ಒಳಗಿದ್ದವನ ಬಾಯಲ್ಲಿನ ಸಿಗರೇಟಿನ ಬೆಳಕು ಕಂಡಿತು. ತಾನು ಬೇರೊಬ್ಬರ ಮನೆಯ ಕಂಪೌಂಡಿನಲ್ಲಿ ಅವರ ಅನು ಮತಿಯಿಲ್ಲದೆ ಬಂದಿದ್ದು ಸರಿಯಾದುದಲ್ಲ, ಮನೆಯವರು ತಾನು ಹಾಗೆ ಬಂದು

ದರ ಕಾರಣ ಕೇಳಿದರೆ ಅದಕ್ಕೆ ಸಮರ್ಪಕವಾದ ಉತ್ತರ ಕೊಡಲು ತನ್ನಿಂದ ಸಾಧ್ಯವಿಲ್ಲ ಎಂದು ಅವನು ಯೋಚಿಸಿ ಇನ್ನೂ ನಾಲ್ಕು ಹೆಜ್ಜೆ ಹಿಂದೆ ಸರಿದು ಓಡಿದ.

ಅದರಿಂದ ಮತ್ತಿಷ್ಟು ಹೆದರಿದ ವಿಲಾಸರಾಯ ಮನೆಯೊಳಕ್ಕೆ ಓಡಿ ಹೋಗಿ ಆಳುಗಳೆದುರಿಗೆ ತನ್ನ ಶೌರ್ಯದ ವರ್ಣನೆ ಮಾಡಿಕೊಳ್ಳಹತ್ತಿದ.

"ಒಬ್ಬ ಧಾಂಡಿಗ ಕಿಟಕಿಯಲ್ಲಿ ಇಣಿಕಿ ಹಾಕುತ್ತಿದ್ದ. ನಾನು ಗದರಿಸಿದೆ. ಆತ ಬೆಕ್ಕಿನಂತೆ ಮಾಯವಾದ."

"ಸರಿ, ಇಲ್ಲಿ ಸುತ್ತಲು ಹಾವಳಿಯನ್ನೆಬ್ಬಿಸಿರುವ 'ಗ್ಯಾಂಗ್'ನವರಿರ ಬೇಕು. ನಾಲ್ಕಾರು ಜನರಾದರೂ ಬಂದಿರಬೇಕು. ನಾಳಿನ ಪತ್ರಿಕೆಗೆ ಅದೊಂದು ಸುದ್ದಿ. ಯಾವದಾದರೂ ಮನೆಯೊಡೆಯುವರೇನೋ ನೋಡಬೇಕು." ಪ್ರಚಾರ ಕಾರ್ಯದರ್ಶಿ ಶಹಾ ಹೇಳಿದ.

"ಪೋಲಿಸರಿಗೆ ತಿಳಿಸಿಬಿಡುವದೇ ಸರಿಯಾದುದು."

"ಪೋಲೀಸರು ಬಂದರೆ ಕಳ್ಳರು ಕಳವು ಮಾಡುವದು ಹೇಗೆ ? ಸುದ್ದಿಗೆ ಮಹತ್ವ ಬರಬೇಕಾದರೆ ಅವರು ಕಳವು ಮಾಡಲಿ, ಅದರಿಂದ ಲೀಲಾರಾಣಿಗೆ ಪ್ರಚಾರ ಲಾಭ ಸಿಕ್ಕುವದು. ಅಂಥ ಸಂದರ್ಭ ಕಳೆಯ ಹೊರಟಿರುವಿರಲ್ಲ, ವಿಲಾಸರಾಯರೆ !"

ಶಹಾನ ಮಾತಿನಿಂದ ವಿಲಾಸರಾಯನಿಗೆ ಆಶ್ಚರ್ಯವಾಯಿತು, ಸಿಟ್ಟೂ ಬಂತು. ಅದೇ ವೇಳೆಗೆ, ಹಿಂದೆ ಸುಶೀಲೆಯೊಡನೆ ಶಹಾ ಸಲುಗೆಯಿಂದ ವರ್ತಿಸಿದ್ದರ ನೆನಪೂ ಬಂತು.

"ಸಾಕು ಮಾಡಿರಿ ಶಹಾ. ಈ ಕಳ್ಳರನ್ನು ಹಾಗೇ ಬಿಟ್ಟರೆ ನಾವು ಮಲಗಿಕೊಂಡಾಗ ನಮ್ಮ ಕೊಲೆಯನ್ನೂ ಮಾಡಬಹುದು."

"ಹಾಗಾದರೆ ಕೇಳುವದೇನು ! ಮೊದಲ ಪುಟದ ಮೇಲೆ ದಪ್ಪಕ್ಷರಗಳಲ್ಲಿ ಆ ಸುದ್ದಿಯನ್ನು ಪ್ರಕಟಿಸಬಹುದು."

# ೧೩

ಲೀಲಾರಾಣಿ ಪತ್ರಗಳನ್ನು ಬರೆಯುವದರಲ್ಲಿ ನಿರತಳಾಗಿದ್ದಳು. ಆ ಮನೆಯಲ್ಲಿನ ಇನ್ನುಳಿದವರೂ ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿದ್ದರು. ಲೀಲಾರಾಣಿಯ ಪ್ರಚಾರಕಾರ್ಯದ ಕುರಿತು ಶಹಾ ಯೋಚಿಸುತ್ತಿದ್ದ. ವಿಲಾಸ ರಾಯ ಸುಶೀಲಳೊಡನೆ ಮನೆಯ ಸುತ್ತಲಿನ ಬಯಲಿನಲ್ಲಿ ಸುತ್ತಿಬರಲು ಹೋಗಿದ್ದ. ದೂರದಲ್ಲಿದ್ದ ಸ್ಟುಡಿಯೋದಲ್ಲಿ 'ನಿಷ್ಪಾಪಿ' ಎಂಬ ಚಿತ್ರ ಬರೆಯು ವದರಲ್ಲಿ ಸರದಾರರು ತೊಡಗಿದ್ದರು. 'ಗೇಟ್‌ವೇ ಆಫ್ ಇಂಡಿಯಾ' ಬಳಿ ಯಲ್ಲಿ ಸರದಾರರು ಕಂಡಿದ್ದ ಬಾಲಕನೋರ್ವನ ಚಿತ್ರವದು. ಅದೇ ಮನೆಯ ಕಂಪೌಂಡಿನ ಒಂದು ಬದಿಯಲ್ಲಿ ಸ್ಟುಡಿಯೋ ತಾತ್ಪೂರ್ತಿಕವಾಗಿ ನಿಂತಿತ್ತು. ಆ ಚಿತ್ರವನ್ನು ಲೀಲಾರಾಣಿ ಅಂದೇ ನೋಡಿ ಅದಕ್ಕೆ 'ಕಪ್ಪುಕೈಗಳ ಕಪಿಚೇಷ್ಟೆ' ಎಂದು ನಾಮಕರಣ ಮಾಡಲು ಸೂಚಿಸಿದ್ದಳು. ಚಿತ್ರಕಾರನು ಇಟ್ಟ ಹೆಸರಿನ ಕಿಂತ ತಾನು ಆರಿಸಿದ ಹೆಸರೇ ಒಳ್ಳೆಯದೆಂದು ಒತ್ತಿಹೇಳಿ ಬಂದಿದ್ದಳು.

ಆ ಮನೆಯಲ್ಲಿ ಆನಂದದಲ್ಲಿರುವವರು ಯಾರೆಂದು ಯಾರಾದರೂ ಕೇಳಿ ದ್ದರೆ ತಟ್ಟನೆ ಲೀಲಾರಾಣಿಯನ್ನು ತೋರಿಸಬಹುದಿತ್ತು. ಅವಳು ಆನಂದದ ಲ್ಲಿರಬೇಕಾದರೆ ಹೆಚ್ಚಿನ ಅವಶ್ಯಕತೆಗಳಿರಲಿಲ್ಲ. ಸ್ವಚ್ಛ ಆಕಾಶ—ಸುಖಕರ ಊಟ; ಶಾಸ್ತ್ರೋಕ್ತ ನೃತ್ಯ ಪ್ರದರ್ಶನದಿಂದ ತುಸು ಬಿಡುವು ಸಿಕ್ಕರೆ ಸಾಕು. ಅವಳಿಗೆ ಸ್ವರ್ಗಸುಖ ಸಿಕ್ಕಂತೆ. ಮೇಲಾಗಿ ಸುಶೀಲೆವಿಲಾಸರಾಯರ ಸಂಬಂಧ ಅವಳಿಗೆ ಗೊತ್ತೇ ಇರಲಿಲ್ಲ. ಅಲ್ಲದೆ ವಿಲಾಸರಾಯನ ಬಗೆಗೆ ಅವ ಳಿಗೆ ಒಳ್ಳೆಯ ಅಭಿಪ್ರಾಯವಿತ್ತು. ಸುಶೀಲಳನ್ನಂತೂ ತಂಗಿಯಂತೆ ಪ್ರೀತಿಸು ತ್ತಿದ್ದಳು. ತನ್ನ ಯೋಜನೆಯಿಂದಲೇ ಅವರಿಬ್ಬರೂ ಗಂಡ-ಹೆಂಡಿರಾಗುವ ಸುಯೋಗ ಬರುತ್ತಿದ್ದುದಕ್ಕಾಗಿ ಅವಳಿಗೆ ಆನಂದವಾಗದಿರುವುದೇ ?

ಇನ್ನುಳಿದವರ ವಿಚಾರವಾಗಿ ಹೇಳುವುದಾದರೆ, ಯಾವ ವೇಳೆಗೆ ಕಳ್ಳರು ಈ ಮನೆ ಹೊಕ್ಕು ತಮ್ಮನ್ನು ಬಡಿದು ತಮ್ಮಲ್ಲಿದ್ದುದನ್ನು ಸುಲಿದೊಯ್ಯು ವರೋ ಎಂದು ವಿಲಾಸರಾಯನಿಗೆ ಹೆದರಿಕೆ. ಈ ಮನೆ ನುಗ್ಗಿ ಕಳ್ಳರು ಕಳವು ಮಾಡಲಿಲ್ಲವಲ್ಲ ? ಎಂದು ಶಹಾನಿಗೆ ವಿಷಾದ. ವಿಲಾಸರಾಯನೊಡನೆ ಲಗ್ನ ನಿಶ್ಚಿತವಾಗಿದ್ದರೂ ಏಕಾಂತದಲ್ಲಿ ಅವನೊಡನೆ ವೇಳೆ ಕಳೆಯಲು ಈ ಮನೆಯಲ್ಲಿ

ಸಾಧ್ಯವಾಗುತ್ತಿಲ್ಲವಲ್ಲ? ಎಂದು ಸುಶೀಲಳಿಗೆ ಕಳವಳ. ತನ್ನ ಕಲಾಸಾಧನೆ ಯಲ್ಲಿ ಲೀಲಾರಾಣಿಯ 'ಹನುಮ' ದುರ್ವಿಧಿಯಿದ್ದಂತೆ, ಎಂದು ಸರದಾರರ ಮನಸ್ಸಿನಲ್ಲಿ ಅಸಂತೋಷ. ಹನುಮನಿಂದಾಗಿಯೇ ಅವರು ಮನೆಯಿಂದ ದೂರ ಸ್ಟುಡಿಯೋ ಇಡಬೇಕಾಗಿ ಬಂದಿತ್ತು. ಮನೆಯಲ್ಲಿ ಕುಳಿತು ಅವರು ಚಿತ್ರ ಬರೆಯುತ್ತಿದ್ದಾಗ ಹನುಮ ಬಂದು ಚಿತ್ರವನ್ನು ನೋಡುತ್ತ ಅವರ ಹಿಂದೆ ಸುಮ್ಮನೆ ಕೂತಿದ್ದರೆ ನಡೆಯಬಹುದಿತ್ತು. ಆದರೆ, ಹನುಮ ಸರದಾರರ ಪ್ಯಾಂಟನ್ನು ಜಗ್ಗಹತ್ತಿದರೆ ಅವರ ಚಿತ್ರದ ಏಕಾಗ್ರತೆ ಉಳಿಯುವದಾದರೂ ಹೇಗೆ? ಅಂತೆಯೇ ಸ್ಟುಡಿಯೋ ಮನೆಯಿಂದ ದೂರ ಹೋದುದು.

ಪತ್ರಗಳನ್ನು ಬರೆಯುವದರಲ್ಲಿ ಲೀಲಾರಾಣಿಗೆ ಹೆಚ್ಚಿನ ಆಸ್ಥೆಯಿರಲಿಲ್ಲ. ಅನೇಕ ದಿನಗಳಿಂದ ಬರೆದಿರಲಿಲ್ಲವಾದುದರಿಂದ ಬಹಳ ಜನರಿಗೆ ಬರೆಯುವದುಳಿ ದಿತ್ತು. ಎಲ್ಲವನ್ನೂ ಮುಗಿಸಿಬಿಡುವ ನಿರ್ಧಾರದಿಂದ ಕುಳಿತು ಗೀಚುತ್ತಿದ್ದಳು. ಅಷ್ಟರಲ್ಲಿ ಅವಳ ಆಳು ಬಂದು ಅವಳ ಕೆಲಸಕ್ಕೆ ತಡೆಹಾಕಿತು.

"ರಾಣೀಸಾಹೇಬ್...."

ಲೀಲಾರಾಣಿ ಅವನತ್ತ ತಿರುಗಿದಳು. ಅವಳು ಹಿಂದೆಂದೂ ಕಂಡಿರದ ಭೀತಿ ಆಳಿನ ಮುಖದಲ್ಲಿತ್ತು. ಏನೋ ಅನಿಷ್ಟವಾದುದು ನಡೆದು ಹೋಗಿದೆ ಯೆಂದು ಖಾತ್ರಿಯಾಯಿತು.

"ರಾಣೀಸಾಹೇಬ್, ಹನುಮಂತರಾಯ........"

ಅವಳು ಸಾಕಿದ ಮಂಗ ಹನುಮನಿಗೆ ಆಳು ಸಂಬೋಧಿಸುತ್ತಿದ್ದುದು ಹನುಮಂತರಾಯನೆಂದೇ. ರಾಣೀಸಾಹೇಬರ ಪ್ರೀತಿಯ ಹನುಮನನ್ನು ಆಳು ಕರೆಯಬೇಕಾದರೂ ಏನೆಂದು? ಮಂಗ ಅಥವಾ ಹನುಮ ಎಂದರೆ ರಾಣೀ ಸಾಹೇಬರಿಗೆ ಸಿಟ್ಟು ಬರಬಹುದಲ್ಲವೆ? ಆಳು ಅಂಜುತ್ತಂಜುತ್ತ,

"ಹನುಮಂತರಾಯರು ಸಿಟ್ಟಿಗೆದ್ದಿದ್ದಾರೆ." ಎಂದ.

ಮಾನಸಿಕ ಸ್ವಾಸ್ಥ್ಯಕ್ಕೆ ಭಂಗ ತರುವ ಪ್ರಸಂಗಗಳು ಈ ಜಗತ್ತಿನಲ್ಲಿ ಪದೇ ಪದೇ ಬರುವವು ಎಂದು ಹಿರಿಯರು ಹೇಳುವದು ಸುಳ್ಳಲ್ಲ! ಒಂದೇ ಕ್ಷಣದ ಹಿಂದೆ ಲೀಲಾರಾಣಿ ಆನಂದಸಾಗರದಲ್ಲಿ ತೇಲುತ್ತಿರಲಿಲ್ಲವೆ? ಮರು ಕ್ಷಣವೇ ಈ ಅಸಮಾಧಾನಕಾರಕ ಸುದ್ದಿ. ತಾನು ಸುಖಿಯೆಂದು ಅವಳು ಭಾವಿಸಿಕೊಂಡಿದ್ದುದೇ ತಪ್ಪಲ್ಲವೆ? ಈ ವಿಶಾಲ ಜಗತ್ತಿನಲ್ಲಿ ಯಾವುದೂ ಸ್ಥಿರ

ವಾದುದಿಲ್ಲ ! ಆದರಂತೆ ಅವಳ ಸುಖವೂ ಆನಂದವೂ ಸ್ಥಿರವಾದವುಗಳಲ್ಲ. ಯಾವ ವೇಳೆಗೆ ದುಃಖ ಅಥವಾ ಸಂಕಟ ಬರಬಹುದೋ ಹೇಳಲಿಕ್ಕೆ ಬರುವದಿಲ್ಲ ಎಂದು ಅವಳು ಮೊದಲೇ ತಿಳಿದುಕೊಂಡಿರದಿದ್ದುದು ಅವಳ ಪ್ರಮಾದವಲ್ಲದೆ ಇನ್ನೇನು ?

"ಹನುಮಂತರಾಯರು ಅಡಿಗೀಮನಿ ಸೇರ್ಯಾರ. ತತ್ತಿ, ಆಲೂಗಡ್ಡೆ ಯಾವದೂ ಉಳಿಯುತ್ತಿಲ್ಲ. ಎಲ್ಲವನ್ನೂ ಕೈಗೆತ್ತಿಕೊಂಡು ಅಡುಗೆಯವಳ ಮೇಲೆ ಒಗೆಯುತ್ತಿದ್ದಾರೆ. ಆದಕ್ಕಾಗಿ ನಿಮ್ಮನ್ನು ಕರೆಯಲು ಬಂದೆ." ಹೇಳ ಬೇಕಾದುದನ್ನು ಆಳು ಹೇಳಿ ಮುಗಿಸಿದ.

"ಏನಂದೀ ? ಹನುಮ ಹಾಗೇಕೆ ಮಾಡುತ್ತಿದ್ದಾನೆ, ಕಾರಣವೇನು ? " ಎನ್ನುತ್ತ ಲೀಲಾರಾಣಿ ಎದ್ದಳು. ತನಗೇನೂ ಗೊತ್ತಿಲ್ಲವೆಂದು ಆಳು ಕೈಯಿಂದ ಸೂಚಿಸಿದ. ಆ ಮಂಗನ ತಪ್ಪುಗಳನ್ನು ಎತ್ತಿ ಹೇಳುವದು ಸಮಂಜಸವಾಗ ಲಾರದೆಂದು ಭಾವಿಸಿ ಮೌನ ತಾಳಿದ್ದ.

"ತತ್ತಿಗಳನ್ನು ತೂರುತ್ತಿರುವನೇ ?"

ಲೀಲಾರಾಣಿಯ ಈ ಪ್ರಶ್ನೆಯಿಂದ ಆಳಿನ ಅಂಜಿಕೆ ಕಡಿಮೆಯಾಯಿತು.

"ಹನುಮಂತರಾಯರು ಬೆಕ್ಕಿನೊಡನೆ ಪ್ರೀತಿಯ ಆಟ ಆಡಹೋದರು. ಬೆಕ್ಕಿಗೆ ಸಂಶಯ ಬಂದಿರಬೇಕು. ಅದು ಅವರನ್ನು ಪರಚಿಕೊಂಡಿತು. ಹನು ಮಂತರಾಯರು ಬೆಕ್ಕಿನ ಬಾಲ ಹಿಡಿದು ಎತ್ತಿ ಬಿಸಾಕಿದರು. ಅನಂತರ ಈ ಗದ್ದಲ........"

ಆ ದೃಶ್ಯವನ್ನು ದೃಷ್ಟಿಪಟಲದ ಮೇಲೆ ತಂದುಕೊಂಡು ವಿಫಲಳಾದಳು, ಲೀಲಾರಾಣಿ.

"ನಾನೇ ಬಂದು ನೋಡುವೆ" ಎನ್ನುತ್ತ ಅವಳು ಮುಂದೆ ನಡೆದಳು. ಹನುಮನ ಮೇಲೆ ಅವಳಿಗೆ ವಿಪರೀತ ಕೋಪ ಬಂದಿತ್ತು.

ಆ ಸಮರಭೂಮಿಗೆ ಕಾಲಿಕ್ಕಿ ಅಲ್ಲಿನ ಸ್ಥಿತಿಗತಿಗಳನ್ನು ಕಂಡೊಡನೆ ಅದು ಬಗೆಹರಿಯಬಹುದಾದ ಮಾತಲ್ಲವೆಂದು ಅವಳಿಗೆನ್ನಿಸಿತು. ಅಡುಗೆಮನೆಯ ತುಂಬೆಲ್ಲ ಹಳದೀ ಬಣ್ಣ ಸೂರೆಯಾದಂತಿತ್ತು. ಅದು ಅಡುಗೆಮನೆಯಾಗಿ ಕಾಣದೆ 'ಆಮ್ಲೆಟ್' ಆಗಿ ಕಂಡಿತು. ಅವಳು ಅಡುಗೆಮನೆ ಸೇರಿದುದೇ ತಡ, ಗದ್ದಲ ಮತ್ತಿಷ್ಟು ಹೆಚ್ಚಿತು. ಅಡುಗೆಯವಳು ಕಪಿರಾಯರನ್ನು ಶಪಿಸಹತ್ತಿ

ದಳು. ಇನ್ಸ್ಪೆಕ್ಟರ್ ಆಳಿಗೂ ಸ್ಫೂರ್ತಿ ಬಂದಂತಿತ್ತು. ಹನುಮ ಗುರಿ ಹೊಡೆಯುವ ಜಾಣತನವನ್ನೂ ತೀಕ್ಷ್ಣತೆಯನ್ನೂ ಆತ ಪ್ರಶಂಸಿಸುತ್ತಿದ್ದ.

ಅಡುಗೆಮನೆಯ ಶೆಲ್ಫಿನ ತುದಿಯ ಮೇಲೆ ಕುಳಿತ ಹನುಮ ಮೌನ ತಾಳಿದ್ದ. ಕೋಣೆಯಲ್ಲಿ ಅವನೊಬ್ಬನೇ ಶಾಂತನಾಗಿದ್ದುದು ಕಂಡು ಬಂತು. ಅವನಿಗೆ ಆಯುಧಗಳ ಕೊರತೆಯೆನ್ನಿಸಿರಬೇಕು, ಇಲ್ಲವೆ ಅವನ ಕೈ ನೋಯುತ್ತಿರಬೇಕು. ಅವನ ಕಣ್ಣುಗಳು ಪರೀಕ್ಷಕನಂತೆ ನೆಟ್ಟ ದೃಷ್ಟಿಯನ್ನಿರಿಸಿದ್ದವು. ತನ್ನ ಎಡಪಾದದಿಂದ ಬಲಗಿವಿಯನ್ನು ತಿಕ್ಕಿಕೊಳ್ಳುತ್ತಲಿದ್ದನಾತ.

“ಹನುಮಾ........” ಲೀಲಾರಾಣಿ ಕೂಗಿದಳು.

ಒಮ್ಮೆ ಅವಳತ್ತ, ಅನಂತರ ಅಡುಗೆಯವಳ ಮೇಲೆ, ಇನ್ನುಳಿದ ಆಳುಗಳ ಮೇಲೆ ಕ್ರಮವಾಗಿ ದೃಷ್ಟಿ ತೂರಿದ ಹನುಮ.

“ರಾಣಿಸಾಹೇಬ್, ಪ್ಲೇಟ್ ಒಗೆಯಬಹುದು, ಜೋಕೆ.” ಅಡುಗೆಯವಳು ಎಚ್ಚರಿಸಿದಳು.

ಹನುಮ ಕುಳಿತಿದ್ದ ಸೆಲ್ಫಿನ ಪಕ್ಕದ ಇನ್ನೊಂದು ಸೆಲ್ಫಿನ ಮೇಲೆ ಚೀನಾ ಮಣ್ಣಿನ ಪ್ಲೇಟುಗಳೂ ಕಪ್ಪು ಬಸಿಗಳೂ ಇದ್ದುದನ್ನು ಬೇರೆಯವರು ನೋಡಿರಲಿಲ್ಲ. ಆದರೆ ಅವು ತನ್ನ ಆಳತೆಯಲ್ಲಿರುವದು ಹನುಮನ ಲಕ್ಷ್ಯದಲ್ಲಿತ್ತು. ಅಡುಗೆಯವಳು ಮಾತಾಡಿದುದೊಂದೇ ತಡ, ಪಕ್ಕದ ಸೆಲ್ಫಿಗೆ ಹನುಮ ಹಾರಿ ಒಂದು ಪ್ಲೇಟನ್ನೆತ್ತಿ ಅವಳತ್ತ ತೂರಿದ. ತನ್ನನ್ನೆದುರಿಸುವ ವೈರಿಗಳಲ್ಲಿ ಅವಳೇ ಅಗ್ರುಗಣ್ಯಳೆಂದು ಆತ ಭಾವಿಸಿರಬೇಕು. ಆ ಪ್ಲೇಟು ಬಾಣದಂತೆ ವೇಗವಾಗಿ ಬಂದು ಗೋಡೆಗೆ ಅಪ್ಪಳಿಸಿತು. ಅವಳ ತಲೆಗೆಂದೇ ಹನುಮ ಗುರಿ ಹಿಡಿದಿದ್ದರೂ ಕೇವಲ ಒಂದೇ ಇಂಚಿನಲ್ಲಿ ತಪ್ಪಿತು.

“ಶಹಬ್ಬಾಸ್........” ಎಂದು ಇನ್ನೊಬ್ಬ ಆಳು ಕೂಗಿದೊಡನೆ ಲೀಲಾರಾಣಿ ಅವನ ಮೇಲೇರಿ ಹೋದಳು. ಚಿಲ್ಲರೆ ಕೆಲಸದ ಆಳು ಅವನು. ಹನುಮನನ್ನು ಅಂಕಿತದಲ್ಲಿರಿಸುವದೂ, ಹಿಡಿದು ಕಟ್ಟಿಹಾಕುವದೂ ಆ ಆಳಿಗೆ ಸಂಬಂಧಿಸಿದ ಚಿಲ್ಲರೆ ಕೆಲಸಗಳಲ್ಲೇ ಸಮಾವೇಶವಾಗುತ್ತಿತ್ತು. ಅದಕ್ಕಾಗಿಯೇ ಅವನಿಗೆ ಸಂಬಳವನ್ನೂ ಕೊಡಲಾಗುತ್ತಿತ್ತು. ತನ್ನ ಕರ್ತವ್ಯವನ್ನು ಮರೆತು ಹನುಮನಿಗೆ ಹುರುಪು ಕೊಡುತ್ತಿರಲಿಲ್ಲವೇ ಅವನು ?

"ನೀನು ಹನುಮನನ್ನು ಯಾಕೆ ಹಿಡಿಯಲೊಲ್ಲೆ ?" ಅವನನ್ನುದ್ದೇಶಿಸಿ ಸಿಟ್ಟಿನಿಂದ ಲೀಲಾರಾಣಿ ಕೇಳಿದಳು.

ಆಗ ಮಾತ್ರ ಅವನಿಗೆ ತನ್ನ ಕರ್ತವ್ಯದ ಅರಿವು ಬಂದಿತು. ಜೀವವು ಎಲ್ಲಕ್ಕೂ ಪ್ರೀತಿಯ ವಸ್ತು ! ಅದರ ಮೇಲೆ ಗಂಡಾಂತರ ತಂದುಕೊಳ್ಳುವದು ಹೇಗೆ ತಾನೆ ಸಾಧ್ಯ ? ಎಲ್ಲರ ಆಶಾದೃಷ್ಟಿಗಳು ಅವನತ್ತ ಹೊರಳಿದವು. ಅವನು ಏನನ್ನಾದರೂ ತೀವ್ರ ಮಾಡಬೇಕಾದ ಅವಶ್ಯಕತೆ ತೋರಿಬಂತು. ಸಮೀಪದ ಗೂಟದ ಮೇಲೆ ಲಂಗವೊಂದು ನೇತಾಡುತ್ತಿತ್ತು. ತಾನು ಮಾಡುವ ಕಾರ್ಯದಲ್ಲಿ ತನಗೆ ಯಶ ಸಿಗುವ ಭರವಸೆಯಂತೂ ಆತನಿಗೆ ಇರಲಿಲ್ಲ. ಏನಾ ದರೂ ಮಾಡದಿದ್ದರೆ ನಡೆಯುವಂತೆಯೂ ಇರಲಿಲ್ಲ. ಆತ ಆ ಲಂಗವನ್ನು ಜಗ್ಗಿದವನೇ ಏನಾದರೂ ಆಗಲಿ ಎಂದುಕೊಂಡು ಹನುಮನ ಮುಖದ ಮೇಲೆ ತೂರಿದ. ಅವನ ದೈವ ಅವನ ಕೈ ಬಿಡಲಿಲ್ಲ. ಹನುಮ ಇನ್ನೊಂದು ಪ್ಲೇಟು ಎತ್ತಿ ಬಿಸಾಡಲು ಕೈ ಎತ್ತಿದುದಕ್ಕೂ ಲಂಗದೊಡನೆ ನೆಲಕ್ಕೆ ಬಿದ್ದ. ಲಂಗ ಅವ ನನ್ನು ಸುತ್ತುಗಟ್ಟಿತು. ಲಂಗಕ್ಕೆ ಜೀವ ಬಂದು ಕುಣಿಯುತ್ತಿರುವಂತೆ ಕಂಡಿತು. ಚಿಲ್ಲರೆ ಕೆಲಸದ ಆಳು ಜಿಗಿದು ಬಂದು ಅದೇ ಲಂಗದಲ್ಲಿ ಹನುಮನನ್ನು ಸುತ್ತಿದ. ದಿಗ್ವಿಜಯ ಗಳಿಸಿ ಹಿಂದಿರುಗುವ ಸೇನಾನಿಯಂತೆ ಆತ ಎದೆ ಸೆಟೆಸಿದ್ದ. ಪ್ರಾಣಿ ಗಳ ಪೈಶಾಚಿಕ ಬುದ್ಧಿಗಿಂತಲೂ ಮನುಷ್ಯನ ಯುಕ್ತಿ ಮಿಗಿಲಾದದ್ದು ಎಂಬ ತತ್ವ ಎತ್ತಿ ತೋರಿಸಿದ್ದ.

ಎಲ್ಲರೂ ತಮಗುಚಿತವೆನ್ನಿಸಿದ ಕ್ರಮಗಳನ್ನು ಸೂಚಿಸಹತ್ತಿದರು. ಅಡುಗೆ ಯವಳಂತೂ ಹನುಮನನ್ನು ಸಮುದ್ರದಲ್ಲಿ ಚೆಲ್ಲಬೇಕೆಂದು ಹೇಳಿದಳು. ಇನ್ನೊಬ್ಬ ಆಳು ಕಸಬರಿಗೆಯಿಂದ ಹೊಡೆಯಬೇಕೆಂದ. ಈ ಸುದ್ದಿ ತಂದ ಆಳು ಅದೇ ದಿನ ಸರದಾರರು ಕೊಂಡು ತಂದಿದ್ದ ಪಿಸ್ತೂಲಿನ ನೆನಪನ್ನೂ ಮಾಡಿದ.

"ಅವನನ್ನು ಕಟ್ಟಿಗೆಯ ಗುದಾಮದಲ್ಲಿ ಚೆಲ್ಲಿರಿ." ಲೀಲಾರಾಣಿ ಆಜ್ಞೆ ಯಿತ್ತಳು.

"ಅಲ್ಲಿ ಮಾತ್ರ ಬೇಡ ರಾಣೀಸಾಹೇಬ್, ಬಂದೂಕುಗಳನ್ನೇ ನೋಡಿ ದಂತೆನ್ನಿಸಿ ಹನುಮ ಮತ್ತೆ ಗದ್ದಲ ಸುರುವು ಮಾಡಬಹುದು........" ಎಂದು ಆಳು ಸೂಚಿಸಿದ.

"ಹಾಗಿದ್ದರೆ ಗ್ಯಾರೇಜಿನಲ್ಲಿ ಹಾಕಿರಿ." ಎಂದು ಲೀಲಾರಾಣಿ ಸೂಚಿಸಿ ತನ್ನ ಪತ್ರಗಳನ್ನು ಬರೆದು ಮುಗಿಸಲು ಹೋದಳು. ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾದರು. ಎಲ್ಲರೂ ಹೋದನಂತರ ಸುಮಾರು ಒಂದು ತಾಸಿನ ಬಳಿಕ ಹೊಗೆಕಿಂಡಿಯೊಳಗಿಂದ ಬೆಕ್ಕು ಹೊರಬಂದಿತು. ಪಾಪ! ಮೈತುಂಬ ಹೊಗೆಯ ಧೂಳು. ಸ್ಫೂರ್ತಿದಾಯಕ ಪಾನೀಯವಿಲ್ಲದೆ ಅದು ಸುಧಾರಿಸಿಕೊಳ್ಳುವಂತಿರಲಿಲ್ಲ.

ಲೀಲಾರಾಣಿಗೆ ಪತ್ರ ಬರೆಯುವ ಮನಸ್ಸಾಗಲಿಲ್ಲ. ಹನುಮ ಅವಳ ಸ್ಫೂರ್ತಿಯಲ್ಲಿ ಮಣ್ಣನ್ನೆರಚಿದ್ದ. ಹಜಾರದಲ್ಲಿ ಬಂದಳು. ಶಹಾ ಏನನ್ನೋ ಯೋಚಿಸುತ್ತಿದ್ದ. ಅವನನ್ನುದ್ದೇಶಿಸಿ,

"ಹನುಮ ಕ್ರಾಂತಿಯನ್ನೆಬ್ಬಿಸಿದ್ದ." ಎಂದಳು.

ಉತ್ತೇಜಿತನಾದ ಶಹಾ, "ಏನು ಮಾಡಿದ ?" ಎಂದು ಕೇಳಿದ.

"ತಟ್ಟೆ, ಪ್ಲೇಟು ಒಂದೂ ಉಳಿದಿಲ್ಲ. ಅಡುಗೆಮನೆ ತುಂಬಾ ಅವುಗಳ ತುಂಡುಗಳೇ...."

ಏನಾದರೂ ರೋಮಾಂಚಕಾರಿಯಾದ ಘಟನೆನಡೆದಿರಬೇಕೆಂದು ಹಿಗ್ಗಿದ್ದ ಶಹಾನಿಗೆ ನಿರಾಶೆಯಾಯಿತು.

"ಅದೇನು ದೊಡ್ಡ ಸುದ್ದಿಯಲ್ಲ. ಕೊನೆಯ ಪುಟದ ಒಂದು ಮೂಲೆಯಲ್ಲಿ ಪ್ರಸಿದ್ಧಿಸಬಹುದು." ಎನ್ನುತ್ತ ಉಸಿರ್ಗರೆದು, "ನಿಜವಾಗಿ ಹನುಮನ ಬಗೆಗೆ ನನಗೆ ನಿರಾಶೆಯಾಗಿದೆ. ಅವನಿಂದ ಭಯಂಕರವಾದದ್ದೇನೂ ಘಟಿಸುತ್ತಿಲ್ಲ. ಅವನಿಗೆ ಇನ್ನೂ ತುಸು ಸಮಯ ಕೊಟ್ಟು ನೋಡೋಣ. ಅಷ್ಟರಲ್ಲಿ ಅವನು ಈ ಮನೆಗೆ ಬೆಂಕಿ ಹಚ್ಚಬಹುದು ಅಥವಾ ಅದಕ್ಕೂ ಭಯಂಕರವಾದುದನ್ನಾದರೂ ಮಾಡಬಹುದು. ನೀವೇನೂ ಹನುಮನ ವಿಷಯದಲ್ಲಿ ನಿರಾಶರಾಗಬೇಡಿರಿ. ನಿಮಗೆ ಗೊತ್ತೇ ? ನಾನು ಬೇರೊಬ್ಬ ನಟಿಗೆ ಹುಲಿಮರಿ ಸಾಕಲು ಹೇಳಿದ್ದೆ. ಅದೂ ಹಾಗೆಯೇ ನಾಲ್ಕು ತಿಂಗಳ ತನಕ ಚಿಕ್ಕ ಮಕ್ಕಳೊಡನೆ ಚೆಲ್ಲಾಟವಾಡುತ್ತಿತ್ತು. ಆ ನಟಿಗೆ ಸಮಾಧಾನವಾಗದೆ ನನ್ನನ್ನು ಕೇಳಿದಳು. ಇನ್ನೂ ಕೆಲ ದಿನ ತಡೆಯಲು ತಿಳಿಸಿದೆ. ಮುಂದೆ ಒಂದೇ ತಿಂಗಳಿನಲ್ಲಿ ಆ ನಟಿಯ ಆಳಿಗೆ ಗಾಯ ಮಾಡಿ ಮನೆಯಿಂದ ಹೊರಗೋಡಿತು. ದಾರಿಯಲ್ಲೂ ಇಬ್ಬರ ಮೇಲೆ ಹಾರಿತು. ಅದರಿಂದ ಹಾಹಾಕಾರವೆದ್ದು ರಹ

ದಾರಿಯೇ ಬಂದಾಗಿ ಬಿಟ್ಟಿತು. ಕೊನೆಗೆ ಪೋಲೀಸರು ಹುಲಿಮರಿಯನ್ನು ಗುಂಡಿಕ್ಕಿ ಕೊಂದರು. ಎಂಟು ದಿನಗಳ ತನಕ ಎಲ್ಲ ಪತ್ರಿಕೆಗಳಲ್ಲೂ ಅದೇ ಸುದ್ದಿ. ನಟಿಯ ಹೆಸರಂತೂ ಎಲ್ಲರಿಗೂ ಪರಿಚಿತವಾಯಿತು. ಅವಳ ಆಳಿನ ದೈವದ ಮುಂದೆ ದೈವವೇ ಇಲ್ಲ. ಹುಲಿಯೊಡನೆ ಕಾದಿದ ವೀರನೆಂದು ಪ್ರಚಾರ ಮಾಡಿದೆ. ಈಗ ಆವನು ಸ್ಟಂಟ್ ಚಿತ್ರಪಟಗಳಲ್ಲಿ 'ಹೀರೋ'. ನಾನು ಈಗಾಗಲೇ ಹನುಮನ ಹೆಸರನ್ನು ನಿಮ್ಮೊಂದಿಗೆ ಸೇರಿಸುತ್ತಿರುವೆನು. ಅವನಿಂದಲೂ ಅಂಥ ಕಾರ್ಯ ನೆರವೇರಿಯೇ ತೀರುವದು. ತತ್ತಿ ಪ್ಲೇಟ್ ತೂರಿದ್ದುದು ಅದರ ಪೂರ್ವಪೀಠಿಕೆಯಿದ್ದಂತೆ."

ಅಷ್ಟರಲ್ಲಿ ಬಾಗಿಲು ತೆರೆಯಿತು; ಸರದಾರರು ಪ್ರವೇಶಿಸಿದರು. ಆವರು ದಣಿದವರಂತಿದ್ದರು. ಕುರ್ಚಿಯೊಂದರಲ್ಲಿ ಒರಗಿ ಉಸಿರೊಂದನ್ನು ಬಿಡುತ್ತ,

"ಅಸಾಧ್ಯ, ನನ್ನಿಂದ ಅಸಾಧ್ಯ " ಎಂದರು.

"ಏನದು, ಅಸಾಧ್ಯವಾದುದು ?" ಲೀಲಾರಾಣಿ ಉತ್ಸುಕಳಾಗಿ ಕೇಳಿದಳು.

"ಅದೇ, ನನ್ನ ಚಿತ್ರದಲ್ಲಿ ಬರುವ ಬಾಲಕನ ಮುಖಭಂಗಿ...."

"ಏಕೆ ಸಾಧ್ಯವಾಗುತ್ತಿಲ್ಲ ?"

"ನಿಷ್ಪಾಪಿ, ಆ ಭಾವನೆ....ಛೆ...."

"ಅದೆಲ್ಲಾ ಬಂದಿದೆಯಲ್ಲ ?"

"ಇಲ್ಲ. ನೀನು ಚೇಷ್ಟೆ ಮಾಡುತ್ತಿರುವಿ. ನನಗೊಂದು ಸಜೀವ ಚಿತ್ರ ಬೇಕು. ಈ ಬಾಲಕನೇ ಬೇಕು." ಸರದಾರರು ವ್ಯಸನದಿಂದ ನುಡಿದರು.

"ಅವನು ಇಲ್ಲಿ ಬಂದರೆ ನಾನು ಅವನನ್ನು ನೋಡಲು ಸಾಧ್ಯವೇ ಇಲ್ಲ." ಲೀಲಾರಾಣಿ ಖಂಡಿತವಾಗಿ ಉತ್ತರಿಸಿದಳು.

"ಬಾಲಕನು ಬೇಡ. ಮಂಗ ಮಾತ್ರ ಬೇಕಲ್ಲವೆ ?"

"ಅದರ ನಿರ್ಣಯವಾಗಿ ಹೋಗಿದೆ. ಹನುಮನನ್ನು ನೋಡಿಕೊಳ್ಳಲು ಚಿಲ್ಲರೆ ಕೆಲಸದ ಆಳನ್ನಿಡಲಾಗಿದೆ. ಮಿಸ್ಟರ್ ಶಹಾ ಮತ್ತು ನಾನು ಅದನ್ನೇ ಮಾತಾಡುತ್ತಿದ್ದೆವು. ಹನುಮನಿಂದ ಯಾರಿಗೂ ಅಪಾಯವಾಗುವಂತಿಲ್ಲ.... ಆದರೆ...."

ಅವಳು ತನ್ನ ಮಾತನ್ನು ಅರ್ಧಕ್ಕೇ ನಿಲ್ಲಿಸಬೇಕಾಯಿತು. ಸುಶೀಲೆ ಪ್ರವೇಶಿಸಿ,

"ಲೀಲಾರಾಣಿ, ನಿಮ್ಮ ಮಂಗನನ್ನು ಗ್ಯಾರೇಜಿನಲ್ಲಿ ಹಾಕಿದ್ದೀರಾ ?" ಎಂದಳು.

"ಮುಂದೆ........?" ಸರದಾರರೆಂದರು.

"ನಾನೂ ವಿಲಾಸರಾಯರೂ ಗ್ಯಾರೇಜಿನಲ್ಲಿ ಕಾರು ನೋಡಲು ಹೋಗಿದ್ದೆವು. ಕಾರಿನ ಭಾಗವೊಂದನ್ನು ನನಗೆ ತೋರಿಸಲು ಅವರು ಬಾಗಿಲು ತೆಗೆದುದೇ ತಡ, ಆ ಮಂಗ ಅವರ ಮೇಲೆ ಜಿಗಿದು ಅವರ ಕಾಲಿಗೆ ಕಚ್ಚಿತು. ವಿಲಾಸರಾಯರು ಗಾಬರಿಯಾಗಿದ್ದಾರೆ."

ಶಹಾ ಯೋಚಿಸಹತ್ತಿದ:

"ಅರ್ಧ ಕಾಲಂನಷ್ಟು ಸುದ್ದಿಯೇನೋ ನಿಜ. ಆದರೇನು ? ವಿಲಾಸರಾಯ ಪ್ರಸಿದ್ಧ ವ್ಯಕ್ತಿಯಲ್ಲ. ದಿಲೀಪ ಕುಮಾರನೋ, ರಾಜಕಪೂರನೋ ಅಥವಾ ಅಶೋಕ ಕುಮಾರನೋ ಆಗಿದ್ದರೆ ಕೆಲಪತ್ರಿಕೆಗಳು ವಿಶೇಷ ಲೇಖನಗಳನ್ನು ಹಾಕಬಹುದಿತ್ತು. ದಿಲೀಪ ಕುಮಾರನ ಕಾಲಿಗೆ ಮಂಗ ಕಚ್ಚಿದೆಯೆಂದರೆ ವಾಚಕರಿಗೆ ಹೇಗೆನ್ನಿಸಲಿಕ್ಕಿಲ್ಲ ? ಅವರ ಹೃದಯಕ್ಕೆ ಬರೆ ಕೊಟ್ಟಂತಾದೀತು ! ವಿಲಾಸರಾಯನ ಕಾಲಿಗೆ ಮಂಗ ಕಚ್ಚಿತು, ಎಂಬ ಸುದ್ದಿ ಯಾರ ಮನಸ್ಸನ್ನು ಕೆರಳಿಸಬಹುದು ? ಈ ಮಂಗ ಟೇಬಲ್ ಕಾಲನ್ನು ಕಚ್ಚಿದ್ದರೂ ಹೆಚ್ಚು ಸ್ವಾರಸ್ಯಮಯವಾಗುತ್ತಿತ್ತು.

"ಈ ಕಪಿ ಎಲ್ಲರಿಗೂ ಬೇಡವಾಗಿದೆ." ಸರದಾರರೆಂದರು.

"ಹನುಮ ಅಂಥವನಲ್ಲ. ಅದೇಕೋ ಇಂದು ಮಾತ್ರ ಅವನ ತಲೆ ಕೆಟ್ಟಂತಿದೆ." ಲೀಲಾರಾಣಿ ಮಂಗನ ಬೆನ್ನು ಕಟ್ಟಿ ಮಾತನಾಡಿದಳು.

"ಇಷ್ಟಾದರೂ ಅದನ್ನು ಹೊರಗಟ್ಟುವಂತಿಲ್ಲವೇ ಲೀಲಾರಾಣಿ ?"

"ಇಲ್ಲ ಸರದಾರರೆ..........." ಎನ್ನುತ್ತ ಲೀಲಾರಾಣಿ ಸುಶೀಲೆಯತ್ತ ಹೊರಳಿ,

"ಮುಂದೇನಾಯಿತು ? ಬಾಗಿಲ ಹಾಕಿ ಹನುಮನನ್ನು ಒಳಕ್ಕೆ ಬಿಟ್ಟಿರಲ್ಲವೇ ?" ಎಂದು ಕೇಳಿದಳು.

"ಬಾಗಿಲವನ್ನೇನೋ ಹಾಕಿದೆವು. ಆದರೆ ಅಷ್ಟರಲ್ಲಿ ಆ ಮಂಗ ಹೊರಗೆ

ಹೋಗಿತ್ತು."

ಅಷ್ಟರಲ್ಲಿ ಕುಂಟುತ್ತ ಕುಂಟುತ್ತ ವಿಲಾಸರಾಯ ಬಂದ.

"ಮಂಗನ ಕಥೆಯನ್ನೆಲ್ಲಾ ಹೇಳಿದೆ, ವಿಲಾಸರಾಯರೆ" ಅವನು ಮಾತಾಡುವ ಸ್ಥಿತಿಯಲ್ಲಿಲ್ಲವೆಂದು ಭಾವಿಸಿ, "ಆ ಮಂಗನಿಗೆ ಹುಚ್ಚು ಹಿಡಿದಿರಬೇಕು" ಎಂದಳು ಸುಶೀಲೆ.

"ಸಾಕು, ಪದೇ ಪದೇ ಅದೇ ಮಾತು............" ಶಹಾ ಅವಳನ್ನು ತಡೆಯುತ್ತ, "ಮುಂಬಯಿಯ ಉಪನಗರದಲ್ಲಿ ಕಪಿರಾಯರ ಹಾವಳಿ. ಉಪನಗರದ ರಹಿವಾಸಿಗಳಲ್ಲಿ ಕೋಲಾಹಲ. ಒಂದು ಹುಚ್ಚು ಮಂಗ ಓರ್ವರನ್ನು ಕಚ್ಚಿತು." ವಿಲಾಸರಾಯನ ಮೈಮೇಲೆ ಮುಳ್ಳುಗಳೆದ್ದುದನ್ನು ನೋಡಿದ ಶಹಾ, "ಹುಚ್ಚು ಮಂಗವೊಂದು ಎಲ್ಲರ ಭಯಕ್ಕೂ ಕಾರಣವಾಗಿದೆ. ಅದರ ಕಡಿತದಿಂದಾಗಿ ಓರ್ವರ ಮರಣ........ ವಿಲಾಸರಾಯರೆ, ನಿಮಗೆ ಬಹಳ ನೋವಾಗಿದೆಯೆ? ಗುಂಡಿನೇಟಿನಷ್ಟು ಗಾಯವಾಗಿದೆಯೇ? ಲೀಲಾರಾಣಿ, ನಾನು ಕೆಲವು ಪತ್ರಿಕೆಗಳಿಗೆ ಸುದ್ದಿ ಕಳಿಸುವೆ. ಇದೇನು ಸಣ್ಣ ಸುದ್ದಿಯೆ?" ಎನ್ನುತ್ತ ಆತ ಟೆಲಿಫೋನಿನತ್ತ ಧಾವಿಸಿದ. ಅದೇ ಫೋನಿನಿಂದ ವಿಲಾಸರಾಯ ನಗರದ ಡಾಕ್ಟರರೊಬ್ಬರೊಡನೆ ಮಾತಾಡುತ್ತಿದ್ದ.

## ೧೪

ಊಟವಾದೊಡನೆ ಕಮಲಾಕಾಂತ ಮಲಗುವ ಕೊಠಡಿ ಸೇರುವದು ರೂಢಿಯಾಗಿತ್ತು. ಅಲ್ಲಿ ಹೋಗಿ ಅವನೇನು ಮಾಡುತ್ತಿದ್ದನೆಂಬುದು ಪ್ರಮೀಲೆಗೆ ಗೊತ್ತಿರಲಿಲ್ಲ. ಏನಾದರೂ ಓದುತ್ತಿರಬೇಕು ಇಲ್ಲವೆ ಏನನ್ನಾದರೂ ಯೋಚಿಸುತ್ತಿರಬೇಕು ಎಂದು ಅವಳ ತರ್ಕ. ಅವಳ ಎರಡೂ ತರ್ಕಗಳು ತಪ್ಪು. ಅವನು ಎಂದೂ ಓದುತ್ತಿರಲಿಲ್ಲ. ವೃತ್ತಪತ್ರಿಕೆಗಳಿಂದ ಅವನಿಗೆ ಬೇಸರವಾದರೆ ಪುಸ್ತಕಗಳಿಂದ ತಲೆನೋವೇ ಬರುತ್ತಿತ್ತು. ಅವನು ವಿಚಾರ ಮಾಡುತ್ತಿರಬೇಕು ಎನ್ನುವುದಾದರೆ; ಅವನ ತಲೆಯಲ್ಲಿ ಯಾವುದೋ ಒಂದು

ದೋಷವಿರಬೇಕು, ಅವನಲ್ಲಿ ವಿಚಾರಗಳೇ ಬರುತ್ತಿರಲಿಲ್ಲ. ಎಂದೋ ಒಮ್ಮೆ ಅವನು ಯೋಚಿಸಲು ಕುಳಿತರೆ ಅವನ ಮೆದುಳು ಕಟ್ಟಿಗೆಯ ತುಂಡಿನಂತೆ ನೀರ ಮೇಲೆ ತೇಲುತ್ತಿರುವಂತೆ ಭಾಸವಾಗುತ್ತಿತ್ತು. ಅವನು ಮಲಗುವ ಕೊಠಡಿಯನ್ನು ಸೇರುತ್ತಿದ್ದುದರ ಕಾರಣವನ್ನು ವಿಷಾದದಿಂದ ಹೇಳಬೇಕಾಗುವದು. ಒಂದೆರಡು ಸೋಡಾ, ಒಂದಿಷ್ಟು ವಿಸ್ಕಿ ಕುಡಿಯಲು ಅಷ್ಟು ಲಗುಬಗೆಯಿಂದ ಆತ ಓಡುತ್ತಿದ್ದ.

ಪ್ರಮೀಲೆಗೆ ವ್ಯಸನವಾಗಬಾರದೆಂದು ಅವಳಿಗೆ ಗೊತ್ತಾಗದಂತೆ ತಾನು ಹಾಗೆ ಕದ್ದು ಕುಡಿಯುತ್ತಿರುವದಾಗಿ ತಾನೇ ಅಂದುಕೊಳ್ಳುತ್ತಿದ್ದ. ಅವನಾದರೂ ಏನು ಮಾಡಬೇಕು ? ಅವನು ಕುಡಿತವನ್ನು ಸಂಪೂರ್ಣವಾಗಿ ತ್ಯಜಿಸಬೇಕೆಂದು ಓರ್ವ ಮೂರ್ಖ ಡಾಕ್ಟರ ಹೇಳಿದ್ದ. ಅದು ಪ್ರಮೀಲೆಗೂ ಗೊತ್ತಿತ್ತು. ವಿಸ್ಕಿ–ಬ್ರ್ಯಾಂಡಿ ಒತ್ತಟ್ಟಿಗಿರಲಿ, ಅತಿ ಸೌಮ್ಯ ಮದ್ಯ ಆತ ಕುಡಿದುದನ್ನು ಅವಳು ಕಂಡಿದ್ದರೆ ತಲೆ ಕೆಡಿಸಿಕೊಳ್ಳಬಹುದಿತ್ತು. ಅವನ ಪ್ರಕೃತಿಯ ಬಗ್ಗೆ ಅವಳು ಭಯಪಡಬಹುದಿತ್ತು. ಅಂಥ ಸ್ಥಿತಿ ಅವಳಿಗೆ ಬಾರದಿರಲಿ ಎಂದೇ ಅವಳಿಗೆ ಗೊತ್ತಾಗದಂತೆ ಆತ ವಿಸ್ಕಿ ಕುಡಿಯುತ್ತಿದ್ದುದು. ಅವಳಿಗೆ ಅಸಮಾಧಾನವಾಗದಂತೆ ವರ್ತಿಸುತ್ತಿರುವೆನಲ್ಲಾ ಎಂದು ತನ್ನಷ್ಟಕ್ಕೆ ತಾನೇ ಹೆಮ್ಮೆಪಟ್ಟುಕೊಳ್ಳುತ್ತಿದ್ದ.

ಕದ್ದು ಕುಡಿಯುವದು ತೊಂದರೆಯ ಕೆಲಸವೇನೋ ಹೌದು. ಅವನು ಕದ್ದು ಕುಡಿಯುವದು ಆಕಸ್ಮಾತ್ತಾಗಿ ಒಮ್ಮೆಲೇ ಅವಳ ದೃಷ್ಟಿಗೆ ಬಿದ್ದರೆ, ಆಕೆಯ ದೃಷ್ಟಿಯಲ್ಲಿ ಅವನೋರ್ವ ದರೋಡೆಖೋರನಂತೆ ಕಾಣಬಹುದಿತ್ತು; ಅವಳ ಹೃದಯಕ್ಕೆ ಅದರಿಂದ ಬಲವಾದ ಪೆಟ್ಟೂ ಬೀಳಬಹುದಿತ್ತು. ಅದನ್ನು ತಪ್ಪಿಸಬೇಕಾದರೆ ಅವನು ಕುಡಿಯುವ ವಿಷಯ ಅವಳಿಗೆ ಗೊತ್ತಿರುವದೇ ಒಳಿತು. ಅದೇ ಯೋಚನೆಯಲ್ಲಿ ಅವಳು ನೋಡಿದರೆ ನೋಡಲಿ, ಬಾಗಿಲು ಇಕ್ಕಿ ಕುಡಿಯುವದು ಬೇಡ ಎಂದುಕೊಂಡು ಇಂದು ಬಾಗಿಲ ತೆರೆದೇ ಇಟ್ಟ. ತನ್ನ ಸಾಮುಗ್ರಿಗಳನ್ನು ಕಪಾಟಿನಿಂದ ಹೊರಕ್ಕೆ ತೆಗೆದು ಮೇಜಿನ ಮೇಲೆ ಇಟ್ಟ. ಪ್ರಮೀಲೆ ಮನೆಯ ಹೊರಬಾಗಿಲಿನಲ್ಲಿ ನಿಂತಿದ್ದಳು. ಈಗಲೇ ಅವಳು ಒಳಕ್ಕೆ ಬರುವಂತಿರಲಿಲ್ಲ. ರಾಜಾಸಾಹೇಬನಂತೂ ಮನೆಯ ಸುತ್ತಲಿನ ಬಯಲಿನಲ್ಲಿ ಸುತ್ತುತ್ತಿದ್ದ. ಒಂದೆರಡು ನಿಮಿಷಗಳ ನಂತರ ಅವನು ಬಂದು ಪ್ರಮೀಲೆಯ

ಜೊತೆ ಹರಟುತ್ತ ನಿಲ್ಲಬಹುದಾಗಿತ್ತು. ಇವೆಲ್ಲವನ್ನೂ ತಿಳಿದಿದ್ದ ಕಮಲಾ ಕಾಂತನಿಗೆ ಯಾರ ಅಂಜಿಕೆಯೂ ಇರಲಿಲ್ಲ, ಆ ಮಾತು ಬೇರೆ.

ಗ್ಲಾಸಿನಲ್ಲಿ ವಿಸ್ಕಿ-ಸೋಡಾ ಹಾಕಿ ಏಕಾಗ್ರಚಿತ್ತನಾಗಿ ಕುಳಿತೊಡನೆ ಕುಡಿಯಕೂಡದು ಎಂದು ಡಾಕ್ಟರು ಹೇಳಿದುದು ನೆನಪಾಯಿತು. ಡಾಕ್ಟರರು ಹೇಳುವದು ಯಾವಾಗಲೂ ಹಾಗೆಯೇ, ಪುಕ್ಕ ಜನರು ಮತ್ತಿಷ್ಟು ಹೆದರಿಬಿಡು ವಂತೆ! ಡಾಕ್ಟರು ಹಾಗೆ ಹೇಳಿದ್ದಾಗ ಅವನ ದೇಹಸ್ಥಿತಿ ನಾಜೂಕಾಗಿತ್ತು. ಅಂತೆಯೇ ಅವನು ತನ್ನ ಕೆಲಸ ಬಿಟ್ಟುಕೊಟ್ಟುದು. ಅವನಿಗೆ ವಿಶ್ರಾಂತಿಯ ಅವಶ್ಯಕತೆಯಿದ್ದುದರಿಂದ ಒಂದು ಹಳ್ಳಿಗೆ ಹೋಗಿದ್ದ. ಅಲ್ಲಿನ ಸ್ವಚ್ಛ ಹವೆ ಯಿಂದ ಆತ ತುಸು ಚೇತರಿಸಿಕೊಂಡಿದ್ದ. ಹೀಗೆ ಸುಧಾರಿಸಿದ ದೇಹಸ್ಥಿತಿ ಯಿರುವಾಗ, ಅದೂ ಎಷ್ಟೋ ತಿಂಗಳುಗಳ ನಂತರ ಸೌಮ್ಯ ಸ್ವರೂಪದ ತುಸು ಮದ್ಯ ಸೇವಿಸಿದರೆ ಅಪಾಯವಾದೀತೆಂದು ಭಾವಿಸುವದು ಮೂರ್ಖತನವೇ ಸರಿ!

ಕುಡಿತದಿಂದ ಸದ್ಯಕ್ಕಂತೂ ಅವನ ಮೇಲೆ ಯಾವ ದುಷ್ಪರಿಣಾಮವೂ ಆಗಿರಲಿಲ್ಲ. ಡಾಕ್ಟರು ಹೇಳಿದ್ದುದರಲ್ಲಿ ಸತ್ಯವಿಲ್ಲವೆಂದೇ ಆತ ನಿರ್ಣಯಿಸಿ ಕೊಂಡಿದ್ದ. ಹಿಂದಿನ ಮೂರು ದಿನಗಳನ್ನು ನಗರದಲ್ಲಿ ಕಳೆದಿದ್ದಾಗ ಅವನು ಎಷ್ಟೊಂದು ಮದ್ಯ ಸೇವಿಸಿರಲಿಲ್ಲ? ಅವನಿಗೆ ಯಾವ ಅಪಾಯವಾಗಿತ್ತು? ಅವನ ದೃಷ್ಟಿಯಲ್ಲಿ ಈಗ ಆ ಡಾಕ್ಟರನೊಬ್ಬ ಮೋಸಗಾರ! ಅಯೋಗ್ಯ! ಈ ನಂಬುಗೆಯ ಬಲದ ಮೇಲೇ ಆತ ಮತ್ತೊಂದು ಗ್ಲಾಸ್ ತುಂಬಿಕೊಂಡ. ಅಟ್ಟದ ಮೇಲೆ ಯಾರಾದರೂ ಬರುತ್ತಿರುವರೋ ಏನೋ ನೋಡೋಣವೆಂದು ಕೊಂಡು ಎದ್ದುಹೋಗಿ ಪಾವಟಿಗೆಗಳಿಗೆ ಕಿವಿ ಹಚ್ಚಿ ಕೇಳಿದ, ಸಪ್ಪಳವಿರಲಿಲ್ಲ. ತಿರುಗಿ ಬಂದು ತನ್ನ ಸ್ಥಾನದಲ್ಲಿ ಕುಳಿತ.

ಹೌದು, ಆ ಡಾಕ್ಟರು ಮೋಸಗಾರನೆಂಬುದರಲ್ಲಿ ಸಂಶಯವೇ ಇಲ್ಲ. ಅವನು ಸೇವಿಸಿದ್ದ ಆ ಪಾನೀಯಗಳು ಅಪಾಯವನ್ನೇನೂ ಮಾಡಿರಲಿಲ್ಲ. ಪ್ರತಿಯಾಗಿ ಅವನಲ್ಲಿ ಧೈರ್ಯವನ್ನೇ ಹೆಚ್ಚಿಸಿದ್ದವು. ಆ ದರಿದ್ರ ಮನೆಯಲ್ಲಿನ ಜೀವನವನ್ನು ತಡೆದುಕೊಳ್ಳುವ ಶಕ್ತಿಯನ್ನೂ ತಂದಿದ್ದವು. ಡಾಕ್ಟರರ ಬಗೆಗೆ ತಿರಸ್ಕಾರದ ನಗೆ ನಕ್ಕ. "ಹಣ ಗಳಿಸಬೇಕಾದರೆ ಪಾಪ, ಡಾಕ್ಟರರು ಹಾಗೆ ಹೇಳಲೇಬೇಕಲ್ಲವೆ?" ಎಂದುಕೊಂಡ.

ಬಾಟಲಿಗಾಗಿ ಕೈಚಾಚಿ ಮತ್ತೊಮ್ಮೆ ಅದನ್ನು ಹಿಡಿಯುತ್ತಿದ್ದಂತೆ ಅವನ ದೃಷ್ಟಿ ನೆಲದ ಮೇಲೆ ಬಿತ್ತು, ಏನೋ ಕುಳಿತಿರುವಂತೆ ಕಂಡಿತು. ಬೂದಿ ಬಣ್ಣದ ಮಂಗವೊಂದು ಅವನನ್ನೇ ನೋಡುತ್ತಿತ್ತು. ಅವನ ಕಣ್ಣುಗಳ ಮುಂದೆ ಕ್ಷಣಕಾಲ ಕತ್ತಲು ಕವಿದಂತಾಯಿತು. ಮತ್ತೊಮ್ಮೆ ಆ ಕಡೆ ನೋಡಿದ, ಮಂಗ ಅವನನ್ನೇ ನೋಡುತ್ತಿತ್ತು. ತನ್ನನ್ನೇ ನಂಬಲಾರದವನಾಗಿ ಕಮಲಾ ಕಾಂತ ಕಣ್ಣು ಮುಚ್ಚಿ ಕುಳಿತು ಒಂದರಿಂದ ಹತ್ತರ ವರೆಗೆ ಮನಸ್ಸಿನಲ್ಲೇ ಅಂಕಿಗಳನ್ನು ಎಣಿಸಿ ಕಣ್ಣು ತೆರೆದ, ಮಂಗ ಇನ್ನೂ ಅಲ್ಲಿಯೇ ಕುಳಿತಿತ್ತು.

"ಅವ್ವಾ........" ಗಾಬರಿಯ ಧ್ವನಿಯಲ್ಲಿ ಅವನ ಬಾಯಿಯಿಂದ ಶಬ್ದ ಹೊರಬಿತ್ತು.

ಮಂಗನ ದೃಷ್ಟಿ ಅವನ ಮೇಲೆ ಕೇಂದ್ರೀಕೃತವಾಗಿತ್ತು. ಅವನು ಪುನಃ ಕಣ್ಣು ಮುಚ್ಚಿದ, ಈ ಸಲ ಅರವತ್ತರ ವರೆಗೆ ಎಣಿಸಹತ್ತಿದ. ಹೃದಯ ತಣ್ಣಗಾಗುವಂತೆ ಭಾಸವಾಯಿತು. ಹೀಗಾಗುವದನ್ನು ತಿಳಿದೇ ಡಾಕ್ಟರರು ಕುಡಿಯಕೂಡದೆಂದು ಸೂಚಿಸಿರಬೇಕು. ಪಾಪ! ಡಾಕ್ಟರನು ಮೋಸಗಾರನಲ್ಲ!

ಅವನು ಅರವತ್ತರ ವರೆಗೆ ಎಣಿಸುತ್ತಿದ್ದಂತೆ ಎದೆಯ ಮೇಲೆ ಹೆಚ್ಚಿನ ಭಾರ ಬೀಳುತ್ತಿರುವ ಅನುಭವವಾಗಿತ್ತು, ಬಾಯಿ ಒಣಗಿತ್ತು. ತಾನು ಈಗ ನಿರೋಗಿಯಾಗಿದ್ದೇನೆಂದು ಆತ ಸಾರಿ ಹೇಳಲು ಸಿದ್ಧನಾಗಿರುವ ಸಮಯದಲ್ಲೇ ಇಂಥ ಘಟನೆ ನಡೆಯಬೇಕೇ? ನಗರದಲ್ಲಿ, ಮೂರು ದಿನಗಳ ತನಕ ಸ್ಪಂಜು ನೀರನ್ನೆಳೆದುಕೊಳ್ಳುವಂತೆ ಒಂದೇ ಸಮನೆ ಮದ್ಯವನ್ನು ಹೊಟ್ಟೆಗೆ ಸೇರಿಸುತ್ತಿರುಗುವ ಪೂರ್ವದಲ್ಲಿ ಈ ಅನುಭವ ಆಗಬಾರದಿತ್ತೇ? ಎಂದೂ ವಿಷಾದಪಟ್ಟುಕೊಂಡ. ತಾನು ಪೂರ್ತಿ ಗುಣ ಹೊಂದುತ್ತಿರುವಾಗ, ರಾತ್ರಿಯಲ್ಲಿ ಆಕಸ್ಮಿಕವಾಗಿ ಮನೆ ಹೊಗುವ ಕಳ್ಳನಂತೆ ಈ ಅನುಭವ ಬರಬೇಕೇ! ಇದೇ ಬಗೆಯಾಗಿ ತೊಂದರೆಗಳು ಬರಹತ್ತಿದರೆ ದೇಹಸ್ಥಿತಿ ಸುಧಾರಿಸುವದಾದರೂ ಹೇಗೆ?

ಐವತ್ತೊಂಬತ್ತು....ಅರವತ್ತು....; ಕಣ್ಣು ತೆರೆದು ನೋಡಿದ. ಮಂಗ ಅಲ್ಲಿಯೇ ಇತ್ತು. ಫೋಟೋ ತೆಗೆಯಿಸಲು ಕುಳಿತವರಂತೆ ಮೊದಲಿನ ಭಂಗಿಯಲ್ಲೇ ಕುಳಿತಿತ್ತು. ಗಟ್ಟಿಯಾಗಿ ಕೂಗಿ ಬಾಟಲು ಎತ್ತಿ ಆ ಭೂತ

ದತ್ತ ಬಿಸಾಕಿದ. ಆ ಹೊಡೆತ ತಪ್ಪಿಸಿಕೊಂಡು ಮಂಗ ಕಪಾಟಿನ ಮೇಲೆ ಏರಿ ಕೂತಿತು. ಸಂಕಟದ ಸಮಯದಲ್ಲಿ ಎತ್ತರ ಸ್ಥಳ ಹುಡುಕಿಕೊಂಡು ಕೂಡ್ರು ವದು ಆ ಮಂಗನ ಚಟವಾಗಿತ್ತು. ಆ ಕೂಗು ಕೇಳಿದ ಪ್ರಮಿಲೆ ಕೋಣೆ ಯನ್ನು ಪ್ರವೇಶಿಸಿದಳು.

ಹೊರಬಾಗಿಲ ಹತ್ತಿರವಿದ್ದ ಕೋಚ್ ಮೇಲೆ ಪ್ರಮಿಲೆ ಅಡ್ಡಾಗಿದ್ದಾಗ ಆವಳ ಅಣ್ಣ ಕೂಗಿದುದು ಕೇಳಿಸಿತ್ತು. ಆಕಾಶದ ಸೌಂದರ್ಯ ನೋಡುತ್ತ ಕನಸಿನಲ್ಲಿದ್ದವಳಿಗೆ ಆ ಕೂಗಿನಿಂದ ಎಚ್ಚರವಾಗಿತ್ತು. ಗಾಬರಿಯಾಗಿ ಅಟ್ಟವ ನ್ನೇರಿ ಬಂದಳು. ಕಮಲಾಕಾಂತ ಹಾಸುಗೆಯ ಮೇಲೆ ವಿಷಣ್ಣವದನನಾಗಿ ಕುಳಿತಿದ್ದುದನ್ನು ಕಂಡು,

"ಏನಾಯಿತು ಕಮಲಾಕಾಂತ...." ಎಂದು ಸುತ್ತಲೆಲ್ಲ ದೃಷ್ಟಿ ತೂರಿ ದಳು. ಅಲ್ಲಿನ ದೃಶ್ಯ ನಡೆದುದರ ಅರ್ಥ ಮಾಡಿಕೊಟ್ಟಿತು. ಕಮಲಾಕಾಂತ ಮಂಗನನ್ನು ಹೊಡೆಯಲು ತೂರಿದ ಬಾಟಲು ಗೋಡೆಗೆ ಅಪ್ಪಳಿಸಿದ್ದುದರಿಂದ ಕೋಣೆಯ ತುಂಬ ಗಾಜಿನ ಚೂರುಗಳು, ವಿಸ್ಕಿಯ ವಾಸನೆ ಹರಡಿದ್ದವು. ಆ ತುಂಡುಗಳು ತನ್ನನ್ನು ನೋಡಿ ಅಣಕಿಸುತ್ತಿರುವಂತೆ ಪ್ರಮಿಲೆಗೆ ಕಂಡಿತು. ಕೋಪದ ಗಾಳಿಯೊಂದು ಅವಳ ಶರೀರವನ್ನು ಪ್ರವೇಶಿಸಿತು. ಕಮಲಾಕಾಂತನ ಶುಶ್ರೂಷೆಯಲ್ಲಿ ಪ್ರಮಿಲೆ ತಾಯಿಯಂತೆ ದುಡಿಯುತ್ತಿದ್ದಳು. ಅದೇ ಅಧಿಕಾರ ದಿಂದ ಒಂದೇಟು ಆತನ ಕಪಾಳಕ್ಕೆ ಬಿಗಿಯುವ ಮನಸ್ಸಾಯಿತು.

"ಕಮಲಾಕಾಂತ........"

"ಅಯ್ಯೋ ಮಂಗ........" ಕಮಲಾಕಾಂತ ಬಡಬಡಿಸುತಿದ್ದ: "ನಾನು ಅಲ್ಲಿ ನಿಂತಿದ್ದೆ, ಒಂದು ಮಂಗ ಬಂದಿತ್ತು. ಇತ್ತೋ ಇಲ್ಲೋ ಹೇಳಲಾರೆ. ಬಾಟಲು ಮಾತ್ರ ಬಿಸಾಕಿದೆ. ಮಂಗ ಕಪಾಟಿನ ಮೇಲೆ ಏರಿದುದನ್ನು ನೋಡಿದೆ........"

"ಇದೇ ಕಪಾಟವಲ್ಲವೆ ?"

"ಹೌದು....."

ಪ್ರಮಿಲೆ ಕಪಾಟನ್ನು ಗುದ್ದಿದಳು. ಹಿಂದೆ ಅಡಗಿದ್ದ ಮಂಗ ಮುಖ ಮೇಲೆ ಮಾಡಿ ನೋಡಿತು.

"ನೋಡು ಪ್ರಮಿಲಾ, ಅಲ್ಲಿ ನೋಡು. ನಿನಗೂ ಕಾಣುವದಿಲ್ಲವೆ ?"

ಪ್ರಮಿಲೆ ಮಾತಾಡಲಿಲ್ಲ. ಅದೊಂದು ವಿಚಿತ್ರವಾದ ಸಂದರ್ಭವಾಗಿತ್ತು. ಅದನ್ನು ಹೇಗೆ ಬಗೆಹರಿಸಬೇಕೆಂದು ಆಕೆ ಯೋಚಿಸುತ್ತಿದ್ದಳು. ಕಮಲಾ ಕಾಂತನ ವರ್ತನೆಯ ಬಗೆಗೂ ಅವನ ಮನಸ್ಸಿನಲ್ಲಿ ಮೂಡಿದ್ದ ಬೆದರಿಕೆಯ ಬಗೆಗೂ ಅವಳಿಗೆ ವಿಷಾದವಾಯಿತು. ಆದರೂ ದೇವರೇ ತಾನಾಗಿ ಕಳಿಸಿದ ಆ ಮಂಗನ ಸಹಾಯ ಪಡೆದುಕೊಳ್ಳದೆ ಬಿಡಲಾದೀತೇ ? ಡಾಕ್ಟರು ರೋಗಿ ಯನ್ನು ಕಾಣುವ ದೃಷ್ಟಿ ಅವಳದಾಗಬೇಕು. ಅದರಿಂದ ಕಮಲಾಕಾಂತನಿಗೇ ಲಾಭ. ಸುಳ್ಳು ಹೇಳುವದಕ್ಕೂ ಅವಳು ಸಿದ್ಧಳಿರಲಿಲ್ಲ. ಕ್ಷಣಹೊತ್ತು ಯೋಚಿಸಿ ಕಮಲಾಕಾಂತನನ್ನು ಪ್ರಶ್ನಿಸಿದಳು.

"ಈಗಲೂ ಕಾಣುತ್ತಿದೆಯೆ ?"

"ಕಪಾಟಿನ ಮೇಲೆ ಮಂಗ ಕೂತಿರುವದು ನಿನಗೂ ಕಾಣುತ್ತಿರ ಬೇಕಲ್ಲ ?"

"ಛೇ, ಅದೆಲ್ಲಿಯ ಮಂಗ ? ಅದೊಂದು ಕಟ್ಟಿಗೆ, ಮಂಗನಂತೆ ಕಾಣು ತ್ತದೆ, ಅಷ್ಟೆ."

"ಛೆ, ಅದೆಲ್ಲ ಸುಳ್ಳು. ನೀನು ನೋಡಿರಲಿಕ್ಕಿಲ್ಲ."

"ನಡೆದುದೆಲ್ಲವನ್ನೂ ಹೇಳು."

ಕಮಲಾಕಾಂತ ಸುಳ್ಳು ಹೇಳಲು ಬಯಸಲಿಲ್ಲ. ಎಲ್ಲವನ್ನೂ ವಿವರ ವಾಗಿ ಹೇಳಿದ.

"ಕಮಲಾಕಾಂತ, ನಿನ್ನದು ಎಂಥ ಮೂರ್ಖತನ !"

"ಹೌದು...."

"ಡಾಕ್ಟರು ಹೇಳಿದುದೂ ನೆನಪಿನಲ್ಲಿಲ್ಲವೆ ?"

"ನೆನಪಿದೆ........"

"ಎಂದೂ ವಿಸ್ಕಿ ಮುಟ್ಟುವದಿಲ್ಲವೆಂದು ನೀನು ಹೇಳಿದುದು ನೆನಪಿಲ್ಲ ವೇನು ?"

"ನೆನಪಿದೆ, ಇನ್ನು ಮುಂದೆ ಎಂದೂ ಮುಟ್ಟುವದಿಲ್ಲ."

"ನೀನೆಂದರೆ ಜಾಣ ಮಗು. ವಚನ ಕೊಡು...." ಎಂದಳು.

"ಇಕಾ, ವಚನ ಕೊಡುತ್ತೇನೆ."

"ನೀನು ಕುಡಿಯುವದನ್ನು ಬಿಟ್ಟರೆ ಖಂಡಿತ ನೆಟ್ಟಗಾಗುವಿ, ಕಮಲಾ ಕಾಂತ."

"ಪ್ರಮೀಲಾ, ನನಗೆ ಎಚ್ಚರಿಗೆ ಬಂತು. ಅದಿರಲಿ, ನಿನಗೆ ಆ ಮಂಗ ಕಾಣಿಸಲೇ ಇಲ್ಲವೆ ?"

"ಎಲ್ಲಿಯ ಮಂಗ.... ?"

"ಇರಬಹುದು. ನನ್ನ ಕಲ್ಪನೆಯ ಕಣ್ಣಿಗೆ ಮಂಗ ಕಂಡಿರಬೇಕು. ಅಕೋ, ಈಗಲೂ ನೋಡು. ಮಂಗ ಕಪಾಟನಿಂದ ಕೆಳಕ್ಕಿಳಿಯುತ್ತಿದೆ."

"ನನಗಂತೂ ಅದು ನೆಲದಿಂದ ಮೇಲೆ ಹೋಗುತ್ತಿರುವಂತೆ ಕಾಣುತ್ತಿದೆ. ವ್ಯಂಗವಾಗಿ ನುಡಿದಳು: "ಇನ್ನು ತುಸು ಮಲಗಿರು, ಕಮಲಾಕಾಂತ. ಮನಸ್ಸಿಗೆ ಸಮಾಧಾನವಾದೀತು."

"ಇಲ್ಲ. ಪ್ರಮೀಲಾ, ನಾನು ದೂರ ಹೋಗಿ ತಿರುಗಾಡಿ ಬರುವೆ."

"ಬೆಳದಿಂಗಳಿನಲ್ಲಿ ಅದೂ ಒಳ್ಳೆಯದೇ...."

ಅವನು ಎದ್ದು ಅಟ್ಟವನ್ನಿಳಿದು ಬಾಗಿಲ ಹತ್ತಿರ ಬಂದೊಡನೆ ಎದುರಿಗಿನ ಕಟ್ಟೆಯನ್ನು ದಿಟ್ಟಿಸಿ ನೋಡಿ ತುಸು ಹಿಂದೆ ಸರಿದ.

"ಏನದು ಕಮಲಾಕಾಂತ ?"

"ಅಲ್ಲಿಯೂ ಮಂಗ ಕೂತಿರುವಂತೆ ಕಂಡಿತು."

ಅವನು ಮುಂದೆ ಸಾಗಿ ಕಾಣದಂತಾದ. ಅವನು ಹೋದೊಡನೆ ಪ್ರಮೀಲೆ ಮನೆಯೊಳಗಿನಿಂದ ಒಂದು ಬಾಳೆಯ ಹಣ್ಣನ್ನು ತಂದಳು. ಮಂಗಗಳ ಸ್ವಭಾವ ಅವಳಿಗೆ ಗೊತ್ತಿತ್ತು. ಹನುಮನನ್ನು ಪಳಗಿಸಿಕೊಳ್ಳಬೇಕೆಂದು ಅವಳು ಯೋಚಿಸಿ ಹಣ್ಣು ತೋರಿಸಿದೊಡನೆ ಹನುಮ ಬಂದು ಅವಳ ಪಕ್ಕದಲ್ಲಿ ಕುಳಿತಿತು.

ಲೀಲಾರಾಣಿ ಎಂಬ ಪ್ರಖ್ಯಾತ ನರ್ತಕಿ ಮತ್ತು ನಟಿ ಮಂಗಗಳನ್ನು ಸಾಕಿದ್ದುದನ್ನೂ ಅವುಗಳ ಪಾಲನೆಯ ರೀತಿಯನ್ನೂ ಅವಳು ಓದಿದ್ದಳು. ಲೀಲಾರಾಣಿ ಅಲ್ಲಿಯೇ ಸಮೀಪ ಬಂಗಲೆಯೊಂದನ್ನು ಬಾಡಿಗೆಗೆ ಹಿಡಿದು ವಾಸಿಸುತ್ತಿದ್ದುದನ್ನೂ ಕಿರಾಣಿಯಂಗಡಿಯವನಿಂದ ಕೇಳಿದ್ದಳು. ಈ ಮಂಗನ ಗುರುತು ಅವಳಿಗೆ ಹತ್ತಿದಂತಾಯಿತು. ಇದು ಲೀಲಾರಾಣಿಯ ಸಾಕುಮಂಗವೆಂದು ಖಾತ್ರಿಯೆನ್ನಿಸಿತು. ಮಂಗನ ಮುಂದಿನ ಕಾರ್ಯಕ್ರಮುಗಳನ್ನೂ

ಅವಳು ನಿಶ್ಚಯಿಸಿದಳು. ಅದರ ಊಟ ವಸತಿಗಳ ಏರ್ಪಾಡು ಮೊದಲು ಮಾಡುವದು. ಕಮಲಾಕಾಂತನ ಮನಸ್ಸಿನಲ್ಲಿ ಈಗ ಹುಟ್ಟಿದ ಭಯ ತೀವ್ರ ಇಲ್ಲವಾಗಬಹುದು. ಆಗ ಅವನನ್ನು ಹಾದಿಗೆ ತರಲು ಮತ್ತೊಮ್ಮೆ ಮಂಗನ ಉಪಯೋಗವಾಗಬಹುದು. ಅದನ್ನು ಔಷಧದಂತೆ ಉಪಯೋಗಿಸಬಹುದು ! ಅವಳು ಮಂಗನಿಗೆ ಮತ್ತೊಂದು ಬಾಳೆಯ ಹಣ್ಣನ್ನು ಕೊಟ್ಟಳು.

ಕಟ್ಟೆಯ ಮೇಲೆ ಕುಳಿತಿದ್ದ ಮಂಗ ತನ್ನ ಪ್ರಾಣದ ಮೇಲೆ ಬರುತ್ತಲಿದ್ದ ಗಂಡಾಂತರಗಳನ್ನು ಕುರಿತು ಚಿಂತಿಸುತ್ತಿರಬೇಕು. ಪ್ರಮಿಲೆ ತನ್ನ ಹತ್ತಿರ ಬಂದುದನ್ನು ಮೊದಲು ಅದು ಕಂಡಿರಲಿಲ್ಲ. ಅವಳನ್ನು ನೋಡಿದೊಡನೆ ಓಡಿ ಹೋಗುವುದರಲ್ಲಿತ್ತು. ಆದರೆ ಆಕೆಯ ಕೈಯಲ್ಲಿನ ಬಹುಮಾನ ಕಂಡು ತೆಪ್ಪಗೆ ಕೂತಿತ್ತು. ಸ್ವಚ್ಛ ಹವೆಯಿಂದ ಅದರ ದೇಹದಲ್ಲಿ ಚೈತನ್ಯ ತುಂಬಿ ಬಂದಿತ್ತು. ಸಾಕಷ್ಟು ಶ್ರಮ ವಹಿಸಿದ್ದುದರಿಂದ ಹಸಿವೂ ಆಗಿತ್ತು. ಅದು ಆಕೆಯ ಕೈಯ್ಯಲ್ಲಿನ ಹಣ್ಣು ಕಸಿದುಕೊಂಡಿತು. ಅದು ರುಚಿಯೆನ್ನಿಸಿದ್ದರಿಂದ ಇನ್ನೊಂದಕ್ಕಾಗಿ ಕೈ ಮುಂದೆ ಮಾಡಿತು. ಅವಳು ಪಕ್ಕದಲ್ಲಿ ಕುಳಿತರೂ ಅದು ಲಕ್ಷಕ್ಕೆ ತಂದುಕೊಳ್ಳಲಿಲ್ಲ. ಅವಳ ಹೃದಯದ ಪರಿಚಯವಾಗಿರಬೇಕು! ಅದೇ ಸಮಯಕ್ಕೆ ರಾಜಾಸಾಹೇಬ್ ಅಲ್ಲಿಗೆ ಬಂದ:

"ನಿಮ್ಮ ಅಣ್ಣ ಎಲ್ಲಿಗೆ ಹೋದ ? ಎಂಟು ಮೈಲಿನ ವೇಗದಲ್ಲಿದ್ದನಲ್ಲ?" ಎಂದು ರಾಜಾಸಾಹೇಬ ಕೇಳಿದ.

"ಇದನ್ನು ಕಂಡೆನೆಂದು ಕಲ್ಪಿಸಿಕೊಂಡಿದ್ದಾನೆ. ಮನಸ್ಸು ತಿಳಿಯಾಗಲೆಂದು ವಾಕಿಂಗ್ ಹೋದ."

"ಈ ಮಂಗವನ್ನೇ ? ಅದನ್ನು ಪ್ರತ್ಯಕ್ಷ ಕಂಡರೂ ಅದು ಕಲ್ಪನೆಮಾತ್ರವೆಂದು ತಿಳಿದಿರುವನೇ ?"

"ಅವನು ನೋಡಿದುದು ಸತ್ಯವಾದರೂ ಅವನ ಕಲ್ಪನೆಯಲ್ಲಿ ಈ ಮಂಗಕ್ಕೆ ಅಸ್ತಿತ್ವವಿಲ್ಲ, ಅಣ್ಣಾಸಾಹೇಬ್" ಎನ್ನುತ್ತ ಪ್ರಮಿಲೆ ನಡೆದುದನ್ನೆಲ್ಲ ವಿವರಿಸಿ ಹೇಳಿದಳು.

"ಅದೆಲ್ಲಾ ಸರಿಯಾಯಿತು. ಮಂಗವನ್ನು ಇಡುವದೆಲ್ಲಿ ?" ರಾಜಾಸಾಹೇಬ್ ಕೇಳಿದ.

"ಜೇಟ್ ಹೌಸಿನಲ್ಲಿಡೋಣ. ಅಲ್ಲಿ ಜೇನು ಹುಟ್ಟುಗಳಿರುವದರಿಂದ

ಕಮಲಾಕಾಂತ ಅತ್ತ ಹೋಗುವದಿಲ್ಲ. ಇದರ ಮಾಲಿಕರ ಹೆಸರು ಗೊತ್ತೇ ನಿಮಗೆ ?"

"ಹೌದು, ಗೊತ್ತಿದೆ. ನಟಿ ಲೀಲಾರಾಣಿಯದಿರಬೇಕು."

"ನಾನೂ ಪತ್ರಿಕೆಗಳಲ್ಲಿ ಓದಿರುವೆ. ಅವಳು ಈಗ ಇಲ್ಲಿಯೇ ಇರಹತ್ತಿದ್ದಾಳೆ. ಅವಳದೇ ಇರಬೇಕು."

ರಾಜಾಸಾಹೇಬನ ಮನಸ್ಸಿಗೆ ಒಂದು ಒಳ್ಳೆಯ ಉಪಾಯ ಹೊಳೆಯಿತು. ಲೀಲಾರಾಣಿಯ ಮನೆಗೆ ಮತ್ತೊಮ್ಮೆ ಹೋಗಿ ಬರಬೇಕೆಂದು ಆತ ಯೋಚಿಸುತ್ತಿದ್ದ. ಅಲ್ಲಿಗೆ ಹೋಗುವದರಿಂದ ಸುಶೀಲಾರಾಣಿಯನ್ನು ಇನ್ನೊಮ್ಮೆ ನೋಡುವ ಸುಯೋಗ ಸಿಗಬಹುದಿತ್ತು. ಮಂಗನ ನೆಪದಿಂದ ಆ ಮನೆಗೆ ಹೋಗುವುದರಿಂದ ಪ್ರಮಿಲೆಯ ಯೋಜನೆ ಕೆಡುವ ಸಂಭವವೂ ಇತ್ತು. ತಾನು ಲೀಲಾರಾಣಿಯ ಮಂಗವನ್ನು ಕಂಡುದಾಗಿಯೂ ಅದು ಮುಂದೆ ಎಲ್ಲಿಗೆ ಹೋಯಿತೆಂಬುದು ತನಗೆ ಗೊತ್ತಿಲ್ಲವೆಂದೂ ಹೇಳಿದರೆ ಸರಿಯಾಗುವದು, ಎಂದು ನಿಶ್ಚಯಿಸಿದ.

"ನೀವೇನು ಯೋಚಿಸುತ್ತಿರುವಿರಿ, ಅಣ್ಣಾಸಾಹೇಬ್ ?"

"ಏನೂ ಇಲ್ಲ."

"ಈಗಲೇ ಈ ಅತಿಥಿಯನ್ನು ಬಚ್ಚಿಡಬೇಕು—ಕಮಲಾಕಾಂತ ಬರುವ ಮೊದಲೇ........"

ಎರಡು ಗಂಟೆ ಕಳೆದರೂ ಕಮಲಾಕಾಂತ ಬರಲಿಲ್ಲ. ತಿರುಗಿ ಬಂದಾಗ ಮೈತುಂಬ ಧೂಳ ಹರಡಿತ್ತಾದರೂ ಅವನು ಉಲ್ಲಸಿತನಾಗಿದ್ದ.

"ಪ್ರಮಿಲಾ, ದಾರಿಯಲ್ಲಿ ಆ ಕಪಿ ಎಲ್ಲಿಯೂ ಕಾಣಲಿಲ್ಲ." ಎಂದ.

ಅವಳಿಗೆ ಆನಂದವಾಯಿತು. ಸ್ನಾನಕ್ಕಾಗಿ ಬಿಸಿನೀರು ಕಾಯಿಸಿಕೊಡುವೆನೆಂದು ಆಕೆ ಹೇಳಿದರೂ ಕಮಲಾಕಾಂತ ಬೇಡವೆಂದು ಹೇಳಿ ತಣ್ಣೀರಿನ ಸ್ನಾನ ಮಾಡುವದಾಗಿ ಹೇಳಿದ. ಇನ್ನು ಮುಂದೆ ಯಾವಾಗಲೂ ತಣ್ಣೀರನ್ನೇ ಉಪಯೋಗಿಸುವ ನಿರ್ಧಾರ ಮಾಡಿದ್ದ. ಪಾಪಮಾಡಿ ಪಶ್ಚಾತ್ತಾಪ ಪಡುವವರ ಭಾವ ಅವನಲ್ಲಿತ್ತು. ಮಲಗುವ ಮುಂಚೆ ರಾಜಾಸಾಹೇಬನ ಬಳಿ ಬಂದು,

"ಅಣ್ಣಾಸಾಹೇಬ್, ಇನ್ನು ಮೇಲೆ ಹೆಚ್ಚಾಗಿ ಹಣ್ಣು ಹಂಪಲು ತಿನ್ನುವೆ.

ತುಸು ದಪ್ಪವಾಗಬಯಸುವೆ.” ಎಂದು ಹೇಳಿದ.

“ಹೌದೇ ?”

“ಖಂಡಿತವಾಗಿ. ಇಂದು ನಾನು ಒಂದು ಮಂಗವನ್ನು ಕಂಡಂತಾಯಿತು, ಅದು ಇರಲಿಲ್ಲ. ಅದಕ್ಕಾಗಿ ಪ್ರಕೃತಿ ಸುಧಾರಿಸಿಕೊಳ್ಳಬೇಕು.” ಎನ್ನುತ್ತ ಆತ ಮಲಗಲು ಹೋದ.

ರಾಜಾಸಾಹೇಬ್ ಅಸ್ವಸ್ಥತೆಯಿಂದಲೇ ರಾತ್ರಿ ಕಳೆದ. ನಾಳಿನ ದಿನದ ಕಾರ್ಯಕ್ರಮ ನಿಶ್ಚಿತಗೊಳಿಸುತ್ತಲಿದ್ದನಾತ.

## ೧೫

ಲೀಲಾರಾಣಿಯ ಮನಸ್ಸೂ ಅಸ್ವಸ್ಥವಾಗಿತ್ತು. ಹನುಮ ಫರಾರಿಯಾದ. ರಾತ್ರಿ ಶಹಾ ಪತ್ರಿಕಾ ಕಚೇರಿಯವರೊಡನೆ ಟೆಲಿಫೋನಿನಲ್ಲಿ ಅರ್ಧ ತಾಸು ಮಾತಾಡಿದ್ದನಾದರೂ ಪ್ರಚಾರ ಕಾರ್ಯದಲ್ಲಿ ಆತ ಎಷ್ಟರಮಟ್ಟಿಗೆ ಯಶಸ್ವಿಯಾಗಬಹುದೆಂಬುದರ ಬಗೆಗೆ ಸಂಶಯವಿತ್ತು. ಇಳಿಹೊತ್ತಿನ ಸಮಯ ಬೇರೆ.

ಶಹಾನ ಮಾತಿನ ಮೇಲಿಂದ ವೃತ್ತಪತ್ರಿಕೆಗಳ ಸಂಪಾದಕರ ಮೇಲೂ ಪರಿಣಾಮವಾಗಿತ್ತು. ಕಳೆದ ಕೆಲವು ತಿಂಗಳುಗಳಲ್ಲಿ ರೋಮಾಂಚಕಾರಿಯಾದ ಯಾವ ಘಟನೆಯೂ ನಡೆದಿರಲಿಲ್ಲ. ಯಾರೂ ಯಾರನ್ನೂ ಹೊಡೆದಿರಲಿಲ್ಲ, ಕೊಲೆಗಳಾಗಿರಲಿಲ್ಲ. ಆದೇಕೆ ತುಸುವಾದರೂ ರಕ್ತ ಬರುವ ಬಡಿದಾಟಗಳೂ ಆಗಿರಲಿಲ್ಲ. ಜಗತ್ತಿನಲ್ಲಿನ ಚಟುವಟಿಕೆಗಳೆಲ್ಲ ತಟಸ್ಥವಾಗಿ ನಿಂತಂತೆ ಆಗಿದ್ದವು. ಇಂಥ ಪರಿಸ್ಥಿತಿಯಿರುವಾಗ ಹನುಮನ ಪಲಾಯನವೂ ವಾಚಕರ ಉತ್ಸುಕತೆಯನ್ನು ತುಸು ಕೆರಳಿಸಬಹುದಿತ್ತು. ಎಂತಲೇ ಅಲ್ಲಿಗೆ ಸುದ್ದಿಗಾರರನ್ನೂ ರವಾನಿಸಲಾಗಿತ್ತು. ಆ ಮನೆಯಲ್ಲೇ ಮೂವರು ಬಿಡಾರ ಬಿಟ್ಟಿದ್ದರು. ಅವರ ಬಗೆಗೆ ಮನೆಯಾಳು ಗೊಣಗುತ್ತಲೇ ಇದ್ದ. ಇವೆಲ್ಲ ಕಾರಣಗಳಿಂದ ಲೀಲಾರಾಣಿಯ ಮನಸ್ಸು ಅಸ್ವಸ್ಥವಾಗಿತ್ತು. ಗಾಳಿಯಲ್ಲೂ ಒಂದು ಬಗೆಯ ನಿರಾಶೆ ತುಂಬಿ

ದಂತಿತ್ತು. ಮೋಜಿನಲ್ಲಿ ದಿನಗಳೆಯಲು ಬಂದವಳಿಗೆ ಇಂಥ ಅಸಮಾಧಾನವೆ? ಇಂಥ ಮಾನಸಿಕಸ್ಥಿತಿಯಲ್ಲಿದ್ದಾಗಲೇ ಆಳು ಬಂದು,

"ರಾಣೀಸಾಹೇಬ್, ಯಾರೋ ಸದ್ಗೃಹಸ್ಥರೊಬ್ಬರು ಭೆಟ್ಟಿಯಾಗಲು ಬಂದಿದ್ದಾರೆ." ಎಂದ. ತಾನು ಚಿಲ್ಲರೆ ನಟಿಯಿದ್ದಾಗ ಯಾರಾದರೂ ಇಂಥ ಸಂದರ್ಭದಲ್ಲಿ ಬಂದಿದ್ದರೆ ಯಾವದಾದರೂ ಕಾರಣವನ್ನು ಮುಂದೆ ಮಾಡಿ ಜಾರಿಕೊಳ್ಳಬಹುದಿತ್ತು. ಆದರೆ ಈಗ ಹಾಗೆ ಮಾಡಲು ಬರುವಂತಿರಲಿಲ್ಲ. ತನ್ನ ಹೆಸರಿಗೇ ಕಲಂಕ.

"ಯಾವುದಾದರೂ ಹಾಳು ಪತ್ರಿಕೆಯವನಿರಬೇಕು." ಎಂದು ಅಸಮಾಧಾನದಿಂದ ನುಡಿದಳು.

"ಹಾಗಿರಲಾರದು ರಾಣೀಸಾಹೇಬ್."

ಆಳಿನ ಮಾತಿನಲ್ಲಿ ನಿಶ್ಚಯದ ಭಾವವಿತ್ತು. ಬಂದವನು ಆಳಿನ ಮೇಲೆ ಪ್ರಭಾವ ಬೀರುವ ವ್ಯಕ್ತಿಯಾಗಿದ್ದನೆಂದು ಅವಳಿಗೆ ಹೇಗೆ ಗೊತ್ತಾಗಬೇಕು ?

"ಎಲ್ಲಿರುವರು ?"

"ದಿವಾಣಖಾನೆಯಲ್ಲಿ ಕೂಡ್ರಿಸಿದ್ದೇನೆ."

ಲೀಲಾರಾಣಿ ದಿವಾಣಖಾನೆಗೆ ಬಂದು ಎತ್ತರವಾದ ನಿಲುವಿನ ಸುಂದರವಾದ ಮೈಕಟ್ಟಿನ ತರುಣನೊಬ್ಬನನ್ನು ಕಂಡಳು.

ರಾಜಾಸಾಹೇಬನಿಗೆ ಅಧೈರ್ಯವೆನಿಸಹತ್ತಿತ್ತು. ತಾನು ಮಾತಾಡುವದಾದರೂ ಏನಿದೆ? ಎಂದು ಯೋಚಿಸುತ್ತಿದ್ದ. ಅವಳೆದುರು ತಾನೊಬ್ಬ ಮೂರ್ಖನಾಗಿ ಕಾಣಬಹುದೆಂದು ಭಾವಿಸಿದ್ದ. ಲೀಲಾರಾಣಿಯನ್ನು ಕಂಡೊಡನೆ ಆತನ ಭೀತಿ ಮಾಯವಾಯಿತು. ಕ್ಷಣಾರ್ಧದಲ್ಲಿ ಅವಳ ಮುಖದಲ್ಲಿ ಅಸಮಾಧಾನದ ಬದಲು ನಗುವೊಂದು ಮೂಡಿ ಬಂದಿತು.

"ನಿಮ್ಮ ಮಂಗನ ವಿಚಾರವಾಗಿ ನಾನು ಬಂದೆ." ಎನ್ನುತ್ತಾ ನೇರವಾಗಿ ಆತ ವಿಷಯವನ್ನೇ ಪ್ರಸ್ತಾಪಿಸಿದ. ಲೀಲಾರಾಣಿಯ ಮುಖ ಹರ್ಷದಿಂದ ಅರಳಿತು.

"ನೀವು ಕಂಡಿರುವಿರಾ ?" ಅವಳು ಕೇಳಿದಳು.

ಅವಳು ಹರ್ಷಭರಿತಳಾದುದನ್ನು ಕಂಡ ರಾಜಾಸಾಹೇಬ್ ಉತ್ತೇಜಿತನಾಗಿ,

"ಹೌದು, ನಿನ್ನೆಯ ರಾತ್ರಿ ನಮ್ಮ ಮನೆಗೆ ಬಂದಿತ್ತು." ಎಂದ.

"ನಿಮ್ಮ ಮನೆಯೆಲ್ಲಿ ?"

"ಸಮೀಪದಲ್ಲೇ ಇದೆ. ದೇಶಪಾಂಡೆ ಮಹಲ್ ಎಂದು ಅದಕ್ಕನ್ನುವರು. ನಿಮ್ಮ ಮಂಗ ನಮ್ಮ ಮನೆಯ ಒಂದು ಕೋಣೆಗೆ ಬಂದಿತ್ತು."

"ಮುಂದೆ ?"

"ಮುಂದೆ ಅದು ಎಲ್ಲಿಯೋ ಹೋಯಿತು."

"ಹಾಗಿದ್ದರೆ ಈಗೆಲ್ಲಿರುವದೋ ?"

ಆ ಪ್ರಶ್ನೆಗೆ ಉತ್ತರ ಕೊಡದಿರುವದೇ ಯೋಗ್ಯವೆಂದು ಭಾವಿಸಿ ಆತ ಮೌನ ತಾಳಿದ.

"ಏನೇ ಇರಲಿ, ಇಲ್ಲಿಯ ತನಕ ಬಂದು ಆದರ ಚಲನವಲನದ ವಿವರ ತಿಳಿಸಿ ಉಪಕಾರ ಮಾಡಿದಿರಿ. ಅದು ಹೋದ ದಿಕ್ಕಾದರೂ ತಿಳಿಯಿತು."

ಸ್ವಲ್ಪ ಸಮಯ ಮೌನ ನೆಲಸಿತು. ಮಾತು ಮುಗಿಯಿತೆಂದು ರಾಜಾ ಸಾಹೇಬ್ ತರ್ಕಿಸಿದ. ಆತ ಕೇಳಬೇಕಾದುದನ್ನೇ ಇನ್ನೂ ಪ್ರಾರಂಭಿಸಿರಲಿಲ್ಲ. ಅಷ್ಟರಲ್ಲೇ ತೆರಳಬೇಕಾಯಿತಲ್ಲಾ ಎಂದು ಅಸಮಾಧಾನಪಡುತ್ತ ಮತ್ತೆ ಮಾತು ಪ್ರಾರಂಭಿಸುವ ರೀತಿಯನ್ನು ಹುಡುಕುತ್ತಲಿದ್ದ. ಸುಶೀಲಳ ವಿಚಾರ ವಾಗಿ ಹಾಗೆ ಗಡಿಬಿಡಿಯಿಂದ ಕೇಳುವದೂ ಅವನಿಗೆ ಸರಿಯಾಗಿ ತೋರಲಿಲ್ಲ.

"ಆದರೆ........" ಎಂದ.

"ಏನು ?" ಲೀಲಾರಾಣಿ ಕೇಳಿದಳು.

"ಏನೂ ಇಲ್ಲ........" ಆತ ತೊದಲಿದ.

"ಹೇಳಿರಿ, ನಿಮಗೇನು ಹೇಳಬೇಕಾಗಿದೆಯೋ ತೀವ್ರ ಹೇಳಿರಿ."

ತಾನು ಹಾಗೆ ಮಾತಾಡಿದ್ದುದು ಸರಿಯಾಗಲಿಲ್ಲವೆಂದು ಅವಳಿಗೆನ್ನಿಸದಿರ ಲಿಲ್ಲ. ಇತ್ತಿತ್ತಲಾಗಿ ಅವಳಿಗೆ ಸಿಡುಕು ಸ್ವಭಾವ ಅಂಟಿಕೊಂಡಿತ್ತು. ಅದರಿಂದ ತಪ್ಪಿಸಿಕೊಳ್ಳಲೂ ಪ್ರಯತ್ನಿಸಿ ವಿಫಲಳಾಗುತ್ತಿದ್ದಳು. ತನ್ನ ಮನಸ್ಸಿನಲ್ಲಿದ್ದು ದನ್ನು ರಾಜಾಸಾಹೇಬ್ ಮನಬಿಚ್ಚಿ ಹೇಳಬೇಕೆಂಬ ಇಚ್ಛೆ ಅವಳಿಗಿದ್ದಿದ್ದರೆ ಅಂಥ ಶಬ್ದಗಳನ್ನು ಅವಳು ಉಪಯೋಗಿಸುತ್ತಿದ್ದಳೇ ?"

"ನಿಮ್ಮಲ್ಲಿ ಸುಶೀಲಾ ಎಂಬವರು ಇರುವರೇ ?"

ಲೀಲಾರಾಣಿಯ ಮುಖ ಮತ್ತೊಮ್ಮೆ ಬೆಳಗಿತು.

"ನಿಮಗೆ ಸುಶೀಲಳ ಪರಿಚಯವಿದೆಯೆ ?"

"ತುಸು ಮಟ್ಟಿಗೆ...."

"ನನಗಂತೂ ಜೀವದ ಗೆಳತಿ. ನಾವಿಬ್ಬರೂ ಗೊಬ್ಬೂರಿನಲ್ಲೂ ಕೂಡಿ ಇದ್ದೆವು."

"ಹೌದು, ಅವಳು ನನ್ನ ಮುಂದೆ ಹೇಳಿದ್ದಾಳೆ."

"ನಾನು ಕಾಮನೂರಿನ ಸರದಾರರನ್ನು ಲಗ್ನವಾದಾಗ ಅವಳು ಬೀಗತ್ತಿಯ ಕೆಲಸ ಮಾಡಿದ್ದಳು."

"ಸರಿ........"

ಈಗ ಮಾತ್ರ ಲೀಲಾರಾಣಿಗೆ ನಿಜವಾಗಿಯೂ ಹರ್ಷವಾಯಿತು. ಅವಳ ಮಾತಿಗೆ ಇನ್ನು ತಡೆಯೆಲ್ಲಿಯದು ! ಅವಳ ಸ್ವಭಾವವೇ ವಿಚಿತ್ರ. ಐದೇ ನಿಮಿಷಗಳ ಸಹವಾಸದಿಂದ ಯಾರನ್ನೂ ಅಪರಿಚಿತರನ್ನಾಗಿ ತಿಳಿಯದೆ ಕೇವಲ ಆತ್ಮೀಯರಂತೆ ವರ್ತಿಸುವ ಕೆಲವೇ ಜನರಲ್ಲಿ ಅವಳೊಬ್ಬಳಾಗಿದ್ದಳು. ರಾಜಾ ಸಾಹೇಬ್ ತಮ್ಮ ಮನೆಯವನೆಂದೇ ತಿಳಿದುಕೊಂಡಳಾಕೆ.

"ಅಬ್ಬ, ಎಂಥ ಆನಂದಮಯ ದಿನಗಳವು ! ನಮ್ಮಿಬ್ಬರ ಲಗ್ನವಾದ ದಿನ ನಾವೊಂದು ಹೋಟಲಿಗೆ ಮೇಜವಾನಿಗೆ ಹೋಗಿದ್ದೆವು. ಊಟಮುಗಿದು ಆಳು ಹಣಕ್ಕಾಗಿ ಬರಲು ಸರದಾರರು ಭುಜ ಎತ್ತಿದರು. ಪಾಪ ! ಅವರು ಆ ದಿನ ಕ್ಲಬ್ಬಿನಲ್ಲಿ ಬಹಳ ಕಳೆದುಕೊಂಡಿದ್ದರು. ನನ್ನನ್ನು ಹಣಕ್ಕಾಗಿ ಕೇಳುವವರಿದ್ದರು. ನಾನು ಜಾರಿದೆ. ಅನಂತರ ಅವರು ತಮ್ಮ ಸ್ನೇಹಿತನೊಬ್ಬ ನನ್ನು ಕೇಳಿದರು. ಅವನು ತೊಟ್ಟಿದ್ದ ಸೂಟಿನ ಹೊರತಾಗಿ ಅವನ ಹತ್ತಿರ ಇನ್ನೇನೂ ಇರಲಿಲ್ಲ. ಜೇಬುಗಳಿದ್ದರೂ ಅವೆಲ್ಲಾ ಖಾಲಿ. ಕೊನೆಗೆ ನನ್ನ ವಾಚ್ ಮತ್ತು ಲಗ್ನದ ಉಂಗುರ ಒತ್ತೀ ಇಟ್ಟು ಬಿಲ್ಲನ್ನು ತೀರಿಸಬೇಕಾಯಿತು."

ಅವಳ ನಗೆ ಕೋಣೆಯ ತುಂಬಾ ಹರಡಿ ಪ್ರತಿಧ್ವನಿಗೈದಿತು. ರಾಜಾ ಸಾಹೇಬನ ಸೌಮ್ಯ ನಗುವೂ ಅದರೊಂದಿಗೆ ಸೇರಿಕೊಂಡಿತು. ಅವನಿಗೂ ಆನಂದವಾಗಿತ್ತು. ಲೀಲಾರಾಣಿ ಇಷ್ಟು ಒಳ್ಳೆಯವಳೆಂದು ಆತ ಭಾವಿಸಿರಲಿಲ್ಲ. ಅವಳ ಮಾತು ನಿಲ್ಲದಂತೆ ಎಚ್ಚರ ವಹಿಸಿದರೆ ಸಾಕು, ಅವಳೇ ಎಲ್ಲವನ್ನೂ ಹೇಳಿಬಿಡುವಳು ಎಂದು ಅವನು ನಂಬಿಕೊಂಡು,

"ಸುಶೀಲಾದೇವಿ ಮನೆಯಲ್ಲಿದ್ದಂತೆ ಕಾಣುವದಿಲ್ಲ....?" ಎಂದ.

"ಇಲ್ಲ. ಅವಳು ವಿಲಾಸರಾಯನೊಂದಿಗೆ ಹೊರಗೆ ಹೋಗಿದ್ದಾಳೆ. ಅವನ ಪರಿಚಯವಿದೆಯೇ, ನಿಮಗೆ ?"

"ಇಲ್ಲ...."

"ಅವನೊಡನೆ ಆವಳ ಲಗ್ನದ ಮಾತು ನಿಶ್ಚಿತವಾಗಿದೆ."

ಅಸಮಾಧಾನ ಅಥವಾ ದುಃಖವನ್ನುಂಟು ಮಾಡುವ ವಿಷಯಗಳನ್ನು ಇನ್ನೊಬ್ಬರಿಗೆ ತಿಳಿಸುವಾಗ ಅವಳು ಬಹು ಎಚ್ಚರಿಕೆ ವಹಿಸುತ್ತಿದ್ದುದು ಅವಳ ಸ್ವಭಾವ ಸಹಜ ಪದ್ಧತಿಯಾಗಿತ್ತು. ಅವಳ ಹೃದಯ ವಿಶಾಲವೂ ದಯೆ ಯಿಂದ ತುಂಬಿದುದೂ ಆಗಿತ್ತು. ಬೇರೆಯವರಿಗೆ ನೋವಾದರೆ ಅವಳಿಗೆ ತಾಪವಾಗುತ್ತಿತ್ತು. ಅಂತೆಯೇ ದುಃಖದ ಸುದ್ದಿ ಹೇಳುವಾಗ ಮೊದಲು ದುಃಖದ ಕೇವಲ ಕಲ್ಪನಾಸೃಷ್ಟಿಯನ್ನು ಅವರ ಮುಂದೆ ನಿಲ್ಲಿಸಿ ಬಿಡುವಳು. ದುಃಖದ ಪ್ರಭಾವ ಅವರ ಮೇಲೆ ಆಗಿ ಹೋದ ನಂತರ ಆ ಸುದ್ದಿಯನ್ನು ತಿಳಿ ಸುತ್ತಿದ್ದಳು. ಅಷ್ಟರಲ್ಲೇ ಆ ವ್ಯಕ್ತಿ ಅದನ್ನು ತಡೆದುಕೊಳ್ಳುವಷ್ಟು ಬಲಶಾಲಿ ಯಾಗಿರುತ್ತಿದ್ದ. ಆದರೆ ಈ ಸಂದರ್ಭದಲ್ಲಿ ಮಾತ್ರ ಅವಳು ನಿಜ ಸಂಗತಿಗಳ ಅರಿವಿಲ್ಲದೆ ನೇರವಾಗಿ ಸುಶೀಲಳ ಲಗ್ನದ ಸುದ್ದಿ ಹೇಳಿ ರಾಜಾಸಾಹೇಬನ ಹೃದಯಕ್ಕೆ ಬಲವಾದ ಪೆಟ್ಟು ಕೊಟ್ಟಳು.

"ಈ ಸಂಬಂಧದಿಂದ ನನಗೆ ಬಹಳ ಆನಂದವಾಗಿದೆ. ನಾನೇ ಅವರ ಆ ಸಂಬಂಧಕ್ಕೆ ಕಾರಣವೆನ್ನಬಹುದು ವಿಲಾಸರಾಯ ಬರುವ ಗಾಡಿಯಿಂದಲೇ ಅವಳನ್ನೂ ಇಲ್ಲಿಗೆ ಬರಮಾಡಿಕೊಂಡೆ. ಅವರಿಬ್ಬರಿಗೂ ಆ ಸಂಗತಿಯನ್ನು ಪ್ರತ್ಯೇಕವಾಗಿ ತಿಳಿಸಿದ್ದೆ. ವಿಲಾಸರಾಯ ಅವಳನ್ನು ಕಂಡ ತಕ್ಷಣ ಮೋಹಿತ ನಾದ. ಅವಳಿಗೂ ಹಾಗೇ ಆಗಿರಬಹುದು. ಆವರಿಬ್ಬರೂ ಪರಸ್ಪರರ ಸಹವಾಸ ದಲ್ಲಿ ಕೆಲ ದಿನ ಕಳೆದು ಈ ಸುದ್ದಿಯನ್ನು ನನಗೆ ತಿಳಿಸಿದರು. ಅದೂ ಕಳೆದ ರವಿವಾರ."

"ನಿನ್ನೆಯ ರವಿವಾರವೇ ?"

ತನ್ನಿಂದ ಮುಂದೆ ಮಾತುಗಳೇ ಹೊರಡಲಾರವೆಂದು ಒಂದೆರಡು ನಿಮಿಷ ಗಳ ಹಿಂದೆ ಅವನಿಗೆನ್ನಿಸಿತ್ತು. 'ಹೋದ ರವಿವಾರ' ಎಂಬ ಆಕೆಯ ಶಬ್ದಗಳು

ಅವನ ಆ ನಂಬುಗೆಯನ್ನು ಬದಿಗೊತ್ತಿ ಅವನ ಬಾಯಿಂದಲೂ 'ನಿನ್ನೆಯ ರವಿವಾರ' ಎಂದು ನುಡಿಸಿದ್ದವು. ನಿನ್ನೆಯ ರವಿವಾರ! ತನ್ನೊಡನೆ ಆಗಿದ್ದ ಲಗ್ನದ ನಿಶ್ಚಯವನ್ನೂ ಅವಳು ಮುರಿದುಕೊಂಡುದು ಹೋದ ರವಿವಾರವೇ. ಹೌದು, ಆಗ ಆಕಾಶದಲ್ಲಿ ಚಂದ್ರ ಶೋಭಾಯಮಾನನಾಗಿದ್ದ. ಕರ್ಣಮಧುರವಾದ ಸಂಗೀತವೂ ಕೇಳಬರುತ್ತಿತ್ತು. ಅದೇ ರವಿವಾರ ರಾತ್ರಿಯ ಒಂಬತ್ತು ಗಂಟೆ!

ರಾಜಾಸಾಹೇಬನ ಹೃದಯದಲ್ಲಿ ಕತ್ತಲು ಸೇರಿದಂತಾಯಿತು. ಹಿಂದಿನ ಸಂಗತಿಗಳನ್ನು ಆ ಕತ್ತಲೆಯಲ್ಲೂ ನೆನಪು ಮಾಡಿಕೊಳ್ಳತೊಡಗಿದ: ಎಂಟು ಗಂಟೆಗೆ ಆತ ಊಟ ತೀರಿಸಿ ತಿರುಗಲು ಹೊರಟಿದ್ದ. ಇಂದಿನ ಜಗತ್ತಿನಲ್ಲಿ ರಾತ್ರಿ ತಿರುಗುವ ಈ ರೂಢಿ ಬಳಕೆಯಲ್ಲಿ ಏಕೆ ಬಂದಿದೆಯೊ? ಯಾವುದನ್ನೂ ನಿಶ್ಚಿತವಾಗಿ ಹೇಳಲು ಸಾಧ್ಯವಿರಲಿಲ್ಲವಾದರೂ, ತನಗೆ ಭೆಟ್ಟಿಯಾಗುವ ಮುಂಚೆ ಸುಶೀಲ ವಿಲಾಸರಾಯರೊಡನೆ ಲಗ್ನವಾಗಲು ಮಾತು ಕೊಟ್ಟಿರಬೇಕೆಂದು ಆತ ಊಹಿಸಿದ.

"ಸುಶೀಲಳಿಗೆ ಯೋಗ್ಯನಾದ ಗಂಡ ವಿಲಾಸರಾಯ" ಲೀಲಾರಾಣಿ ಮಾತು ಬೆಳೆಸಿದಳು. ಹದನವಾದ ಚೂರಿಯೊಂದನ್ನು ಹೃದಯದಲ್ಲಿ ಚುಚ್ಚಿದಾಗಿನ ನೋವನ್ನು ರಾಜಾಸಾಹೇಬ ಅನುಭವಿಸುತ್ತಿದ್ದ. "ಯೋಗ್ಯ ಪುರುಷನಷ್ಟೇ ಅಲ್ಲ, ಲಕ್ಷಾಂತರ ರೂಪಾಯಿಗಳೂ ಇವೆ ಅವನಲ್ಲಿ. ಕೈಯಲ್ಲಿ ಲಾಭದಾಯಕ ಉದ್ಯೋಗ ಬೇರೆ; ವಿಲಾಸ್ ಮೋಟರ್ ಕಂಪನಿ ಬಗೆಗೆ ನೀವು ಕೇಳಿಲ್ಲವೆ?"

ರಾಜಾಸಾಹೇಬ್ ಕುರ್ಚಿಯಲ್ಲಿ ತುಸು ಸೆಟೆದು ಕುಳಿತ. ಕ್ರಿಕೆಟ್ ಆಟ ನೋಡುತ್ತ ಕುಳಿತಾಗಲೂ ಆತ ಒಮ್ಮೊಮ್ಮೆ ಹೀಗೆ ಕುರ್ಚಿಯ ಮೇಲೆ ಸೆಟೆದು ಕತ್ತು ಎತ್ತರಿಸಿ ನೋಡುತ್ತಿದ್ದುದಿತ್ತು.

"ಅತ್ಯುತ್ತಮ ಜೋಡಿ........ನನಗಿನ್ನು ಅಪ್ಪಣೆ ಕೊಡಿರಿ" ಅವನೆಂದ.

"ಹೊರಗೆ ಕಾರಿನ ಸದ್ದಾದಂತೆ ಕಾಣುತ್ತಿದೆ. ಸುಶೀಲಾ ಮತ್ತು ವಿಲಾಸರಾಯ ಬಂದಿರಬೇಕು. ತುಸು ತಡೆದು ಅವಳನ್ನು ಕಂಡು ಹೋಗಲಾರಿರಾ?" ಲೀಲಾರಾಣಿ ನಗುತ್ತ ಕೇಳಿದಳು. ಅವನು ಬೇಡವೆಂದು ತಲೆಯನ್ನಲ್ಲಾಡಿಸಿದ. ಲೀಲಾರಾಣಿಯೇ,

"ಆಗಲಿ, ಹಾಗಿದ್ದರೆ ಸದ್ಯಕ್ಕಂತೂ ನಮಸ್ಕಾರ. ಇನ್ನೊಮ್ಮೆ ಎಂದಾದರೂ ಬನ್ನಿ. ಸುಶೀಲಳ ಪರಿಚಿತರಿಗೆ ಇಲ್ಲಿ ಯಾವಾಗಲೂ ಸ್ವಾಗತವಿದೆ. ಆದರೆ ಮಂಗನ ನೆಪ ಹೂಡಿ ನೀವು ಇಲ್ಲಿಗೆ ಬಂದುದು ತುಸು ನಗೆಯ ಮಾತಲ್ಲವೇ ?" ಎಂದು ಕೇಳಿದಳು.

ರಾಜಾಸಾಹೇಬ್ ಬಾಗಿಲ ತಲುಪಿ ಅದರ ಹಿಡಿಕೆಯನ್ನು ತಿರುವುತ್ತಲಿದ್ದ. ಆ ಕಡೆಯಿಂದಲೂ ಬೇರೆಯವರು ಅದನ್ನೇ ತಿರುವುತ್ತಿದ್ದಂತೆ ಕಂಡಿತು.

"ಇವರೇ ವಿಲಾಸರಾಯರು. ವಿಲಾಸರಾಯರೇ, ಇವರು ಸುಶೀಲಳ ಪರಿಚಿತರು." ಲೀಲಾರಾಣಿ ಅವರಿಬ್ಬರ ಪರಿಚಯ ಮಾಡಿಕೊಟ್ಟಳು.

ಪರಿಚಯ ಮಾಡಿಕೊಳ್ಳುವದೂ ಒಂದು ಗಂಭೀರ ಕಾರ್ಯವೆಂದೇ ನಂಬಿದ್ದವರಲ್ಲಿ ವಿಲಾಸರಾಯನೂ ಒಬ್ಬ. ತನ್ನೊಡನೆ ಪರಿಚಯವಾಗಲಿರುವ ವ್ಯಕ್ತಿಯ ಕೈಯನ್ನು ಬಿಗಿಯಾಗಿ ತನ್ನದರಲ್ಲಿ ಸೇರಿಸಿ, ಅವನನ್ನು ಪೂಜ್ಯ ಭಾವದಿಂದ ನೋಡುತ್ತಿದ್ದು, ಒಳ್ಳೆಯ ಸಲುಗೆಯ ಅರ್ಥಪೂರ್ಣ ಶಬ್ದಗಳನ್ನು ನುಡಿಯುತ್ತಿದ್ದ. ಅದೇ ಪ್ರಾರಂಭದ ಕಾರ್ಯವನ್ನು ಆಚರಿಸುತ್ತಿದ್ದ. ಕೈಯಲ್ಲಿ ಕೈ ಕೂಡಿಸಿ ಎದುರಿನವನ ಕಣ್ಣುಗಳಲ್ಲಿ ದೃಷ್ಟಿ ಸೇರಿಸಿ ನೋಡುತ್ತಿದ್ದ. ಅದಾದ ನಂತರ ನಿತ್ಯವೂ ಈ ಸಂದರ್ಭಗಳಲ್ಲಿ ಬಳಸುತ್ತಿದ್ದ ಶಬ್ದಗಳನ್ನು ಉಚ್ಚರಿಸ ಹೋದ. ಆದರೆ ಅವನ ಬಾಯಿಂದ ಒಂದು ಶಬ್ದ ಕೂಡ ಹೊರಡಲಿಲ್ಲ. ರಾಜಾಸಾಹೇಬನ ಕೈ ಬಿಟ್ಟು ಅವನ ಮುಖವನ್ನು ಮತ್ತೊಮ್ಮೆ ದಿಟ್ಟಿಸಿ ನೋಡಿದ. ಆಶ್ಚರ್ಯ–ಭಯ ಎರಡೂ ಏಕಕಾಲಕ್ಕೆ ಅನ್ನಿಸಿದವು.

ರಾಜಾಸಾಹೇಬನೂ ಮಾತಾಡಲಿಲ್ಲ. ಅದು ಸುಖದಾಯಕ ಭೇಟಿಯಾಗಿರಲಿಲ್ಲ. ಅವರಿಬ್ಬರೂ ಮಾತಾಡುವದರಲ್ಲಿ ಹಿಂಜರಿದಿದ್ದರೂ ಒಬ್ಬರನ್ನೊಬ್ಬರು ನೋಡುವದರಲ್ಲಿ ಮುಂದುವರಿದಿದ್ದರು. ಪರಸ್ಪರರನ್ನು ದಿಟ್ಟಿಸಿ ನೋಡುತ್ತ ನಿಂತಿದ್ದರು.

ರಾಜಾಸಾಹೇಬ್ ವಿಲಾಸರಾಯನನ್ನು ನೋಟದಿಂದ ತಿಂದುಬಿಡುತ್ತಿರುವಂತಿದ್ದ. ವಿಲಾಸರಾಯನ ಪ್ರೌಢ ಶರೀರ, ಅಪ್ರಸನ್ನ ಮುಖ, ಶರೀರದ ಬೊಜ್ಜುಗಳನ್ನೆಲ್ಲ ಆರಗಿಸಿಕೊಳ್ಳುತ್ತಾ ಒಂದು ಬಗೆಯ ವಿಚಿತ್ರ ಅನುಭವ ಪಡೆಯುತ್ತಿದ್ದ.

ವಿಲಾಸರಾಯನೂ ರಾಜಾಸಾಹೇಬನನ್ನು ನುಂಗಿಬಿಡಹತ್ತಿದ್ದ; ರಾಜಾ ಸಾಹೇಬನ ಎತ್ತರವಾದ ದೃಷ್ಟಪುಷ್ಟ ಶರೀರ, ಗೊಂದಲಕ್ಕೀಡಾದ ಮುಖಮುದ್ರೆ, ರಾಜಾಸಾಹೇಬನ ಹೃದಯದಲ್ಲಿ ಅಡಗಿರಬಹುದಾದ ದುಷ್ಟ ಕಲ್ಪನೆಗಳೆಲ್ಲವನ್ನೂ ಅರಗಿಸಿಕೊಳ್ಳಹತ್ತಿದ್ದ. ಅವನಿಗೂ ಒಂದು ಬಗೆಯ ವಿಚಿತ್ರ ಅನುಭವ ವಾಗುತ್ತಿತ್ತು.

ರಾಜಾಸಾಹೇಬನನ್ನು ನೋಡಿದ ತಕ್ಷಣ, ಆ ದಿನ ರಾತ್ರಿ ಗಿಡದ ನೆರಳಿ ನಲ್ಲಿ ಮನೆಯ ಹೊರಗೆ ಅಡಗಿ ನಿಂತಿದ್ದ ವ್ಯಕ್ತಿಯೇ ಈತನೆಂದು ವಿಲಾಸರಾಯ ಗುರುತಿಸಿದ್ದ.

"ಸುಶೀಲ ಬರಲಿಲ್ಲವೇ, ವಿಲಾಸರಾಯ ?" ಲೀಲಾರಾಣಿ ಕೇಳಿದಳು.

"ಅವಳು ತನ್ನ ಕೋಣೆಗೆ ಹೋದಳು."

"ನೀವು ಬಂದಿರುವದನ್ನು ಅವಳಿಗೆ ತಿಳಿಸುವೆ, ಮಿಸ್ಟರ್........ ನೀವು ನಿಮ್ಮ ಹೆಸರನ್ನೇ ಹೇಳಲಿಲ್ಲವಲ್ಲ ?"

ಅವನು ಸ್ಥೈರ್ಯ ತಂದುಕೊಂಡು, ಮನಸ್ಸಿನಲ್ಲಿ ಬಿರುಗಾಳಿ ತುಂಬಿ ಕೊಂಡಿರುವಾಗ ಸುಶೀಲಳನ್ನು ಕಾಣುವದು ಯೋಗ್ಯವಲ್ಲವೆಂದು ತಿಳಿದು,

"ಈಗ ಬೇಡ, ನನಗೆ ವೇಳೆಯಿಲ್ಲ, ನಮುಸ್ಕಾರ........" ಎನ್ನುತ್ತ ಹೊರಬಿದ್ದು ಹೋದ.

ವಿಲಾಸರಾಯ ನಡುಗುತ್ತಿದ್ದುದನ್ನು ನೋಡಿದರೆ ಅವನು ಬಹಳವಾಗಿ ಹೆದರಿದ್ದಾನೆ ಎಂದು ಹೇಳಬಹುದಾಗಿತ್ತು.

"ಲೀಲಾರಾಣಿ, ಅವನಾರು ? ಅವನೇ ಆ ಮನುಷ್ಯ...."

" ಆ ಮನುಷ್ಯ ಅಂದರೆ ಯಾವ ಮನುಷ್ಯ, ವಿಲಾಸರಾಯರೆ ?"

"ಆ ರಾತ್ರಿ ಈ ಮನೆಯ ಕಿಟಕಿಯಲ್ಲಿ ಇಣಿಕಿ ನೋಡುತ್ತಿದ್ದವ."

"ಛೆ, ನೀವು ತಪ್ಪು ತಿಳಿದಿರಬೇಕು. ಸುಶೀಲಳ ಪರಿಚಯವೂ ಅವನಿಗೆ ಇದೆ."

"ಇಲ್ಲ, ಖಂಡಿತ ಅವನೇ. ಅದಿರಲಿ, ಅವಳನ್ನು ನೀವು ಕರೆಯಲು ಸಿದ್ಧ ರಾದೊಡನೆ ಅವನೇಕೆ ಓಡಿಹೋಗಬೇಕು ?"

ಈ ಅಂಶ ಲೀಲಾರಾಣಿಗೆ ಹೊಳೆದಿರಲಿಲ್ಲ. ಸುಶೀಲಳ ಪರಿಚಯದ ಬಗೆಗೂ ಅವನು ಹೆಚ್ಚಿಗಿನ್ನೇನೂ ಹೇಳಿರಲಿಲ್ಲ. ಮೇಲಾಗಿ ಅವನಿಗೆ ಮಾತಾ

ಡಲು ಅವಕಾಶವನ್ನೇ ಲೀಲಾರಾಣಿ ಕೊಟ್ಟಿರಲಿಲ್ಲ. ವಿಲಾಸರಾಯ ಮನಸ್ಸಿನಲ್ಲೇ ಆ ಮನುಷ್ಯನ ಉದ್ದೇಶಗಳ ಬಗೆಗೆ ಕಲ್ಪಿಸಿಕೊಂಡು,

"ಅದೊಂದು ಅವನ ನೆಪವಾಗಿರಬೇಕು. ಶಹಾ ಹೇಳಿದುದು ನೆನಪಿಲ್ಲವೇ ? ದರೋಡೆಯ ಪ್ರಥಮ ಹಂತವಾಗಿ ಆ ಮನುಷ್ಯ ಈ ಮನೆಯನ್ನು ಪರೀಕ್ಷಿಸಲು ಬಂದಿರಬೇಕು. ಇಂದಂತೂ ಮನೆಯೊಳಗೇ ಬಂದಿದ್ದ, ಅದೂ ಸುಶೀಲಳ ನೆಪ ಮಾಡಿ. ಅವನೇನಾದರೂ ಕೋಣೆಗಳಲ್ಲಿ ಇಬ್ಬನೇ ಇದ್ದನೇ ?"

"ಹೌದು, ದಿವಾಣಖಾನೆಯಲ್ಲಿ ಅವನನ್ನು ಕೂಡ್ರಿಸಿ ಆಳು ನನಗೆ ಸುದ್ದಿ ತಿಳಿಸಿದ."

"ಹಾಗಿದ್ದರೆ ಅವನು ತನ್ನ ಉದ್ದೇಶ ಸಾಧಿಸಿಕೊಂಡಂತೆಯೇ !"

"ತುಸು ಶಾಂತರಾಗಿರಿ ವಿಲಾಸರಾಯರೇ, ಕಳ್ಳರೂ ಸಭ್ಯ ಗೃಹಸ್ಥರಂತೆ ಒಳ್ಳೆಯ ಬಟ್ಟೆಗಳನ್ನು ತೊಡುವರೆಂದು ಕೇಳಿದ್ದೇವೆ. ಆದರೆ ಅಂಥ ಬಟ್ಟೆಗಳನ್ನು ತೊಟ್ಟವರೆಲ್ಲ ಕಳ್ಳರೆಂದೇ ಮಾತ್ರ ಭಾವಿಸಬಾರದು. ಆ ರಾತ್ರಿ ನೀವು ಕಂಡಿದ್ದವ ಇವನೇ ಎಂಬ ಕಲ್ಪನೆ ನಿಮ್ಮಲ್ಲಿ ಬಂದಿರುವದರಿಂದ ನೀವು ಹಾಗೆ ಅರ್ಥಮಾಡಿಕೊಳ್ಳುತ್ತಿರುವಿರಿ. ಏನೇ ಇರಲಿ, ಸುಶೀಲಳನ್ನೇ ಕೇಳಿಬಿಡೋಣ. ಅಗೋ, ಅವಳೂ ಬಂದಳು."

ಸುಶೀಲ ಬಂದು ಬಾಗಿಲ ಹತ್ತಿರ ನಿಂತಳು. ಅವರಿಬ್ಬರ ಮುಖಮುದ್ರೆ ಕಂಡು ಆಕೆಗೆ ತುಸು ಯೋಚನೆಗಿಟ್ಟುಕೊಂಡಿತು.

"ಏನಾಗಿದೆ ವಿಲಾಸರಾಯರೇ ?" ಎನ್ನುತ್ತ ಆಕೆ ಲೀಲಾರಾಣಿಯ ಕಡೆಗೂ ಪ್ರಶ್ನಾರ್ಥಕ ದೃಷ್ಟಿ ಬೀರಿದಳು.

"ನಿನ್ನ ವಿಲಾಸರಾಯರ ಮಿದುಳು ಕಲ್ಪನಾ ಸಾಮ್ರಾಜ್ಯದಲ್ಲಿ ವಾಕಿಂಗಿಗೆ ಹೋಗಿದೆ. ಅಲ್ಲಾ, ನಿನ್ನ ಒಬ್ಬ ಸ್ನೇಹಿತ ಬಂದು ನಮ್ಮ ಹನುಮನನ್ನು ಕಂಡಿರುವದಾಗಿ ತಿಳಿಸಿ ಹೋದ. ಅವನ ಹೆಸರನ್ನಂತೂ ನಾನು ಕೇಳಲಿಲ್ಲ. ಆದರೆ...........ಎತ್ತರವಾದ ನಿಲುವು, ಬಲಶಾಲಿಯಾದ ಮೈಕಟ್ಟು, ಗೋದಿ ವರ್ಣದ ಮುಖ, ನೆಟ್ಟಗಿನ ಮೂಗು, ವಿಶಾಲ ಕಣ್ಣು ಹಣೆ ಇವೆ. ಚೆನ್ನಾಗಿ ಕ್ರಾಪ್ ಬಾಚಿ ಕೂದಲು ಹಿಂದೆ ತಿರುವಿಕೊಂಡಿದ್ದಾನೆ. ಬಟ್ಟೆಗಳೂ ಒಳ್ಳೆಯವು. ಹನುಮನನ್ನು ನೋಡಿದುದಾಗಿ ತಿಳಿಸಿದ...."

ಅವಳನ್ನು ಅರ್ಧಕ್ಕೆ ತಡೆಯುತ್ತ ವಿಲಾಸರಾಯನೆಂದ:

"ಆದೆಲ್ಲ ಅವನ ನೆಪ. ಹನುಮ ಈಗೆಲ್ಲಿರುವನಂತೆ ?"

"ಅದನ್ನಾತ ಅರಿತಿಲ್ಲ."

"ಹಾಂ........ ಆದೇ, ಕೇವಲ ನೆಪ."

"ಸುಶೀಲಾ, ನಾನು ವರ್ಣಿಸಿದ ಮನುಷ್ಯನ ಪರಿಚಯ ನಿನಗಿದೆಯೆ ? ಆತ ಕನ್ನಡದಲ್ಲೇ ಮಾತನಾಡಿದ."

"ಲೀಲಾರಾಣಿ, ನೀವು ತಪ್ಪುತ್ತಿರುವಿರಿ, ಮುಂಬಯಿಯ ಕೆಲ ಪ್ರಸಿದ್ಧ ಕಳ್ಳರು ಇಲ್ಲಿಂದ ತಲೆ ತಪ್ಪಿಸಿಕೊಂಡು ಕರ್ನಾಟಕಕ್ಕೆ ಹೋಗಿ ನಾಲ್ಕಾರು ವರ್ಷ ಅಲ್ಲಿ ಇದ್ದು ಕನ್ನಡ ಕಲಿತು, ಕನ್ನಡಿಗರಾಗಿಯೇ ಬಂದು ಇಲ್ಲಿ ಇರಹತ್ತಿದ್ದಾರೆ." ವಿಲಾಸರಾಯ ತನ್ನ ಬುದ್ಧಿಮತ್ತೆ ಪ್ರದರ್ಶಿಸುತ್ತ, "ಇಪ್ಪತ್ತೈದು ವರ್ಷಗಳಿಂದ ಮುಂಬಯಿಯಲ್ಲಿ ವಾಸಿಸುವ ನನ್ನನ್ನು ಇನ್ನೂ ಕನ್ನಡಿಗನೆಂದು ಕರೆಯುವದಾದರೆ ನಾಲ್ಕಾರು ವರ್ಷ ಕರ್ನಾಟದಲ್ಲಿ ಇದ್ದು ಬಂದಿರುವ ಆತನೂ ಕನ್ನಡಿಗ ಹೌದು." ಎಂದ.

"ಸುಶೀಲಾ, ವಿಲಾಸರಾಯರು ಅಮೇರಿಕಾದ ಚಿತ್ರಪಟ ನೋಡುವದೇ ಹೆಚ್ಚು. ಅದರಲ್ಲಿನ ಪ್ರಸಿದ್ಧ ಮೋಸಗಾರರು, ದರೋಡೆಖೋರರು, ಕೊಲೆ ಪಾತಕಿಗಳು ಬೆಲೆ ಬಾಳುವ ಸೂಟು ತೊಟ್ಟಿರುವದನ್ನು ಕಂಡಿದ್ದಾರೆ. ಅದಕ್ಕಾಗಿ ಹೀಗೆ ಅವರ ದೃಷ್ಟಿ. ಅವನಂತೂ ಶುದ್ಧ ಕನ್ನಡಿಗನೆಂಬುದರಲ್ಲಿ ಸಂಶಯವಿಲ್ಲ" ಎನ್ನುತ್ತ ಅವನು ನಡೆದುಕೊಂಡ ರೀತಿ, ಮಾತಿನ ವೈಖರಿ, ಅವನಲ್ಲಿದ್ದ ನಯ ವಿನಯಗಳೆಲ್ಲವನ್ನೂ ಲೀಲಾರಾಣಿ ವಿವರಿಸಿದಳು.

"ಅಂಥ ಮನುಷ್ಯನ ಗುರುತು ನನಗಿಲ್ಲ." ಎಂದು ಸುಶೀಲೆ ಉತ್ತರಿಸಿದಳು.

ಅವಳ ಮನಸ್ಸು ಗೊಂದಲದಲ್ಲಿತ್ತು. ರಾಜಾಸಾಹೇಬ ಇಲ್ಲಿಗೆ ಬಂದುದರ ಉದ್ದೇಶವೇನು? ಅವನು ಏನೆಲ್ಲ ಹೇಳಿದನೋ ? ವಿಲಾಸರಾಯನಿಗೂ ಏನಾದರೂ ತಿಳಿಸಿದನೋ ಏನೋ ? ಎಂದೆಲ್ಲ ಸುಶೀಲೆ ಯೋಚಿಸಹತ್ತಿದಳು.

"ನನಗಂತೂ ಆ ಮನುಷ್ಯನ ಪರಿಚಯವೇ ಇಲ್ಲ." ನಿಶ್ಚಯಾತ್ಮಕ ಧ್ವನಿಯಲ್ಲಿ ನುಡಿದಳಾಕೆ.

"ಶಹಬ್ಬಾಸ್...." ಗೆದ್ದವರಂತೆ ವಿಲಾಸರಾಯನೆಂದ.

"ನಿಜವಾಗಿಯೂ ಆ ಮನುಷ್ಯನ ಪರಿಚಯ ನಿನಗಿಲ್ಲವೇ ಸುಶೀಲಾ? ವಿಚಿತ್ರ!" ಲೀಲಾರಾಣಿ ಆಶ್ಚರ್ಯದಿಂದ ಕೇಳಿದಳು.

"ಇಲ್ಲ. ಖಂಡಿತವಾಗಿ ಅವನ ವಿಷಯ ನನಗೆ ಗೊತ್ತಿಲ್ಲ."

"ಅವನು ದೇಶಪಾಂಡೆ ಮಹಲ್‌ನಲ್ಲಿರುವದಾಗಿ ಹೇಳಿದ."

"ನನಗೆ ಆ ಮನೆ ಗೊತ್ತಿದೆ, ಹಾಳು ಮನೆ. ಒಂದೇ ಇಟ್ಟಂಗಿಯ ಥರದ ಗೋಡೆಗಳು. ದರೋಡೆಖೋರರ ಗುಂಪು ವಾಸಿಸಲು ಯೋಗ್ಯವಾಗಿದೆ."

"ವಿಲಾಸರಾಯರೆ, ಅದೊಂದು ಜೇನುಹುಳುಗಳ ತೋಟವೆಂದು ಕೇಳಿದ್ದೇನೆ. ಅಲ್ಲಿ ಪ್ರಮಿಲಾ ಸರಕಾರ್ ಎಂಬ ಸುಂದರ ಹುಡುಗಿಯೊಬ್ಬಳು ಇರುತ್ತಿದ್ದು ಇದೇ ದಾರಿಯಿಂದ ಪ್ರತಿ ದಿನ ಮುಂಜಾನೆ ಅವಳು ಸೈಕಲ್ ಏರಿ ಹೋಗುವದನ್ನೂ ಕಂಡಿದ್ದೇನೆ." ಲೀಲಾರಾಣಿ ತನಗೆ ಗೊತ್ತಿದ್ದುದನ್ನು ವಿವರಿಸಿದಳು.

"ಅದೆಲ್ಲ ನಟನೆ! ಆ ಹುಡುಗಿ ಈ ಮನುಷ್ಯನ ಸಹಾಯಕಳಾಗಿರಬೇಕು. ಅವಳು ಇಂಥ ಭಾಗಗಳಲ್ಲಿ ಮನೆ ಹಿಡಿದು ವಾಸಿಸಿ ಪಕ್ಕದವರ ಪರಿಚಯ ಮಾಡಿಕೊಳ್ಳುವಳು. ಅದರಿಂದಾಗಿ ಅವಳ ಕಾಯಕದ ವಿಷಯವಾಗಿ ಯಾರೂ ಸಂಶಯ ತಾಳಲಾರರು. ಅವಳಾದರೋ ಆ ಮನೆಗಳವರ ಸ್ಥಿತಿಗತಿಗಳನ್ನು ಅವನಿಗೆ ತಿಳಿಸುತ್ತಿರಬೇಕು. ಆ ಆಧಾರದ ಮೇಲೆ ಆ ಮನುಷ್ಯ ಈಗ ನಮ್ಮ ಮನೆಗೆ ಬಂದಂತೆ ಬೇರೆ ಮನೆಗಳಿಗೆ ಹೋಗಿ ಬಂದು, ಸಮಯ ಸಿಕ್ಕಿದೊಡನೆ ಇದ್ದು ಬಿದ್ದುದನ್ನು ಸುಲಿದುಕೊಂಡೊಯ್ಯುತ್ತಿರಬಹುದು. ಈ ಬೇಸಿಗೆ ಕಾಲದಲ್ಲಿ ನೂರಾರು ಕಳವು ದರೋಡೆಗಳಾಗಿದ್ದರೂ ಪತ್ತೆಯಾಗಿಲ್ಲ."

"ವಿಲಾಸರಾಯರೇ, ನಮ್ಮನ್ನಂತೂ ಹೆದರಿಸಿಯೇ ಬಿಟ್ಟಿರಿ. ಮುಂದೇನು ಮಾಡುವಿರಿ?" ಅಂಜಿಕೆಯಿಂದಲೇ ಲೀಲಾರಾಣಿ ಕೇಳಿದಳು.

"ಅವಶ್ಯ ಕ್ರಮ ಕೈಕೊಳ್ಳುವೆ." ಎನ್ನುತ್ತ ವಿಲಾಸರಾಯ ಅಲ್ಲಿಂದ ಹೊರಗೆ ಹೋದ.

"ದೇವರು ಅವನನ್ನು ರಕ್ಷಿಸಲಿ. ನಿನ್ನ ವಿಲಾಸರಾಯನಲ್ಲಿ ಇಂಥ ಕಲ್ಪನಾ ಶಕ್ತಿಯಿದೆ ಎಂದು ನಾನು ಅರಿತಿರಲಿಲ್ಲ. ಆಟಂ ಬಾಂಬಿಗಿಂತಲೂ ಭಯಂಕರ ಕಲ್ಪನಾ ಶಕ್ತಿ!"

ಎದೆಗುಂದಿದವಳಾದ ಸುಶೀಲೆ ನಗು ಬೀರಿದಳು.

"ಅದೇನೇ ಇರಲಿ ಸುಶೀಲಾ, ನಿನಗೆ ಆತನ ಪರಿಚಯವೇ ಇಲ್ಲದಿರುವಾಗ ಅವನೇಕೆ ಹಾಗೆ ಹೇಳಿದನೋ ಅರ್ಥವೇ ಆಗಲಿಲ್ಲ." ಲೀಲಾರಾಣಿ ಗಂಭೀರವಾಗಿ ಮಾತಾಡುತ್ತಿದ್ದುದನ್ನು ತಡೆಯುತ್ತ ಸುಶೀಲೆ,

"ಲೀಲಾರಾಣಿ, ನಾನು ಕೆಲ ವಿಷಯಗಳನ್ನು ನಿನ್ನ ಮುಂದೆ ಈಗ ಹೇಳಲೇ ಬೇಕಾಗಿದೆ. ನೀನು ಅವನ್ನು ವಿಲಾಸರಾಯನ ಮುಂದೆ ಹೇಳ ಕೂಡದು. ಈವರೆಗೆ ನಾನು ಹೇಳಿದುದೆಲ್ಲ ಅಸತ್ಯ. ಆ ಮನುಷ್ಯನನ್ನು ನಾನು ಬಲ್ಲೆ. ಅವನೊಡನೆ ನನ್ನ ಲಗ್ನವಾಗುವದು ನಿಶ್ಚಿತವಾಗಿತ್ತು." ಎಂದಳು.

"ಏನೆನ್ನುತ್ತಿರುವಿ ಸುಶೀಲಾ?"

"ಹೌದು, ಲೀಲಾರಾಣಿ. ಆದರೆ ವಿಲಾಸರಾಯರ ಮುಂದೆ ಮಾತ್ರ ಹೇಳಬೇಡ. ಈಗ ಆ ಸಂಬಂಧ ಮುರಿದುಹೋಗಿದೆ."

"ನಾನು ಗೊಬ್ಬೂರಿನಲ್ಲಿದ್ದಾಗ ಅದೇನೂ ಇರಲಿಲ್ಲ?"

"ಇಲ್ಲ, ನೀನು ಮುಂಬಯಿಗೆ ಬಂದನಂತರ........"

"ಹಾಗಿದ್ದರೆ ನೀನು ವಿಲಾಸರಾಯರನ್ನು ಲಗ್ನವಾಗಲಿರುವ ವಿಷಯ ಅವನಿಗೆ ಗೊತ್ತಿಲ್ಲವೇನು?"

"ಇಲ್ಲ, ನಾನು ಅವನಿಗೆ ಬಹಳ ದಿನಗಳಿಂದ ಭೆಟ್ಟಿಯಾಗಿಲ್ಲ."

"ಪಾಪ! ನಾನು ಈ ಸುದ್ದಿಯನ್ನು ಅವನಿಗೆ ತಿಳಿಸಿದಾಗ ಅವನ ಹೃದಯ ತತ್ತರಿಸಿ ಹೋಗಿರಬೇಕು! ನೀನೇಕೆ ಈ ಸಂಗತಿ ಬಚ್ಚಿಟ್ಟೆ, ಸುಶೀಲಾ?"

"ಏನೇ ಇರಲಿ. ವಿಲಾಸರಾಯರಿಗೆ ಹೇಳುವದಿಲ್ಲವಷ್ಟೆ?"

"ಇಲ್ಲ, ನಾನೇಕೆ ಹೇಳಲಿ? ಅದು ನಿನ್ನ ಖಾಸಗಿ ವಿಷಯ ತಾನೆ? ಈಗಾದರೂ ಹೇಳಿದಿ, ಸಾಕು. ವಿಲಾಸರಾಯನಂತೂ ಆತನೊಬ್ಬ ಕಳ್ಳನೆಂದೇ ಭಾವಿಸಿದ್ದಾನೆ. ಎಲ್ಲಿಗೆ ಹೋದನೋ ದೇವರೇ ಬಲ್ಲ."

ವಿಲಾಸರಾಯ ತನ್ನ ಕೋಣೆಗೆ ಹೋಗಿ ಪಿಸ್ತೂಲು ಕೈಗೆತ್ತಿಕೊಂಡು ಅದನ್ನು ಸೂಕ್ಷ್ಮವಾಗಿಯೂ ಎಚ್ಚರಿಕೆಯಿಂದಲೂ ಪರೀಕ್ಷಿಸಿ ನೋಡಿ ಸಿದ್ಧನಾಗಿದ್ದ. ಆಗ ಆತ ಅಮೆರಿಕನ್ ಚಿತ್ರಪಟಗಳಲ್ಲಿನ ನಾಯಕನಂತೆ ಕಂಡುಬರುತ್ತಿದ್ದ.

೧೬

ನಮ್ಮ ವಿಶಾಲ ಭಾರತದಲ್ಲಿ ಸೃಷ್ಟಿ ಸೊಬಗಿಗೂ ಅನೇಕ ಬಗೆಯ ಚಮತ್ಕೃತಿಗಳಿಗೂ ಕೊರತೆಯಿಲ್ಲದಿರುವಂತೆ ಹಾವು ಚೇಳುಗಳೂ ವಿಪುಲವೇ ಆಗಿವೆ. ಅವು ಯಾರಿಗಾದರೂ ಕಚ್ಚಿದರೆ ಆ ವಿಷ ತೆಗೆಯಿಸಲೆಂದು ಓಡುತ್ತ ಹೋಗುವವರನ್ನು ಓಣಿ ಓಣಿಗಳಲ್ಲಿ ಕಾಣಬಹುದು. ಅವರು ತಮಗಾದ ವಿಷದ ಕುರಿತು ಬೇರೆಯವರಿಗೆ ಹೇಳಲು ಕೂಡ ನಿಲ್ಲುವದಿಲ್ಲ. ವಿಷ ತೆಗೆಯುವವರ ಮನೆತನಕ ಓಡುವದೇ ಅವರ ಕೆಲಸ. ತಮ್ಮ ಮೇಲೆ ಬಂದೊದಗಿದ ವಿಪತ್ತಿನ ಪರಿಣಾಮದ ಕುರಿತಾದರೂ ಯೋಚಿಸುವರೋ ಇಲ್ಲವೋ ? ಒಮ್ಮೆ ವಿಷ ತೆಗೆಯುವವನ ಮನೆಯ ಹೊಸ್ತಿಲಲ್ಲಿ ಕಾಲಿರಿಸಿದಾಗಲೇ ಆ ಎಲ್ಲ ಯೋಚನೆಗಳು ಬರುತ್ತವೆ. ರಾಜಾಸಾಹೇಬನಿಗೆ ಇಂಥ ದೃಶ್ಯಗಳ ನೆನಪು ಆಗ ಬರದಿದ್ದರೂ ಆತ ತನ್ನ ನಿವಾಸಸ್ಥಾನದತ್ತ ಓಡುತ್ತಿದ್ದ ರೀತಿಯೂ ಇದೇ ಬಗೆಯಾಗಿತ್ತು. ಆತನಿಗೆ ಬೇರೊಂದು ವಿಷದ ಪ್ರಯೋಗವಾಗಿರಲಿಲ್ಲವೆ ? ಓಡುವುದರಿಂದ ಅವನಿಗೆ ಉಸಿರುಗಟ್ಟಿದಂತಾಗಿ ತುಸು ನಿಂತೊಡನೆ ವಿಷದ ಕಲ್ಪನೆ ಬಂದು ಭಯಂಕರವಾಗಿ ಕಂಡಿತು.

ರಾಜಾಸಾಹೇಬ್ ಸರಳ ಜೀವಿ; ಸದ್ಗುಣಗಳ ಬಗೆಗೂ ಆತನಿಗೆ ಒಳ್ಳೆಯ ಗೌರವ. ತನ್ನ ಗೆಳೆಯರು ತನ್ನೊಡನೆ ಹೃದಯ ಬಿಚ್ಚಿ ಮಾತಾಡಬೇಕು, ಕಪಟವಿಲ್ಲದೆ ವರ್ತಿಸಬೇಕು ಎಂದು ಆತ ಅಪೇಕ್ಷಿಸುತ್ತಿದ್ದ. ಅದೇ ಮಾನವ ಹೃದಯದ ಸೌಂದರ್ಯವೆಂದೂ ನಂಬಿಕೊಂಡಿದ್ದ. ಕಳ್ಳರಾರೂ ಅವನ ಗೆಳೆಯರಾಗಿರಲಿಲ್ಲವಾದರೂ ಅಂಥವರ ಸ್ನೇಹ-ಪ್ರೀತಿ ಸಂಪಾದಿಸಲು ಆತ ಪ್ರಯತ್ನಿಸಿದ್ದರೆ ಯಶಸ್ವಿಯಾಗಬಹುದಿತ್ತು. ಕಳ್ಳರ ಬಗೆಗೂ ಅವನ ವಿಶಿಷ್ಟ ಅಭಿಪ್ರಾಯವಿತ್ತು. ಆ ಜನರ ಕೃತಿಗಳಿಂದ ಬೇರೆಯವರಿಗೆ ಅನ್ಯಾಯ, ಹಾನಿ ಅಥವಾ ನಷ್ಟವಾಗದಿದ್ದರೆ ಮಾತ್ರ ಅವರ ಸ್ನೇಹ ಸಂಪಾದಿಸುವದರಲ್ಲಿ ಆತ ಲಕ್ಷ ಹಾಕಬಹುದಿತ್ತು. ರಾವರಾಜೆಯವರು ಕೋರ್ಟಿನಲ್ಲಿ ನಿರಪರಾಧಿಯೆಂದು ಬಿಡುಗಡೆಯಾಗಿದ್ದರೂ ಅವರಿಂದ ಅನ್ಯಾಯ ಮೋಸ ನಡೆದುದರಬಗ್ಗೆ ರಾಜಾಸಾಹೇಬನಿಗೆ ಖಾತ್ರಿಯಾದುದರಿಂದಲೇ ಅವರ ಬಗೆಗೆ ಅವನಿಗೆ ತಿರಸ್ಕಾರವಿತ್ತು. ಸರಳತನವಿಲ್ಲದವರ ಹತ್ತಿರ ಅವನೆಂದೂ ಸುಳಿಯುತ್ತಿರಲಿಲ್ಲ.

ಸುಶೀಲಳಲ್ಲಿ ಸರಳತನ ಕಂಡುಬಂದಿರಲಿಲ್ಲ. ಅವನು ಹೀಗೆ ಓಡಲು ಕಾರಣವೆಂದರೆ ಲೀಲಾರಾಣಿ ಹೇಳಿದ್ದ ಸುದ್ದಿ. ಸುಶೀಲಳೊಡನೆ ಹಿಂದೆ ತನ್ನ ಭೆಟ್ಟಿಯಾದ ಚಿತ್ರವೂ ಅವನ ಕಣ್ಣಿನ ಮುಂದೆ ಬಂದು ಅವನ ಓಟದ ವೇಗ ವನ್ನು ಹೆಚ್ಚಿಸಿತ್ತು. ಶರೀರದಲ್ಲಿನ ಶಕ್ತಿ ಅಡಗಿದ ಅನುಭವವಾಗುತ್ತಿತ್ತು. ಮನಸ್ಸು ಇನ್ನೂ ತಿಳಿಯಾಗಿರಲಿಲ್ಲ. ಹಾವು ಕಡಿದವನು ಹಿಂದುಮುಂದಿನ ವಿಚಾರವಿಲ್ಲದೆ ವೈದ್ಯನ ಮನೆಯತ್ತ ಓಡುವಂತೆ ಆತ ಸಾಗಿದ್ದ. ಅವನ ಮುಖ ದಿಂದ ಬೆವರು ನೀರಾಗಿ ಹರಿಯುತ್ತಿತ್ತು. ಆ ನೀರಿನ ಸ್ಪರ್ಶದಿಂದಲೇ ಆತ ತುಸು ಎಚ್ಚತ್ತನೆನ್ನಬಹುದು. ಅವನ ವಿಚಾರಶಕ್ತಿಯೂ ನಿಧಾನವಾಗಿ ಚೇತ ರಿಸಿಕೊಳ್ಳಹತ್ತಿತು.

ಆಗತಾನೇ ಆಗಿದ್ದ ಆಘಾತದಿಂದಾಗಿ ಅವನಿಗೆ ತನ್ನ ಭಾವನೆಗಳ ಸ್ಪಷ್ಟ ಕಲ್ಪನೆಯೇ ಬಾರದಂತಾಗಿತ್ತು. ಅದೂ ಅವನ ಸ್ವಭಾವ ವೈಶಿಷ್ಟ್ಯವೇ! ಒಂದರ ಹಿಂದೊಂದರಂತೆ ಅನೇಕ ವ್ಯಸನಕರ ನೆನಪುಗಳು ಬಂದು ಗೊಂದಲ ವನ್ನೇ ಎಬ್ಬಿಸಿದ್ದುವು. ಆ ಗೊಂದಲದಲ್ಲಿ ಏನೂ ತಿಳಿಯದಂತಾಗಿತ್ತು. ಏಕ ಕಾಲಕ್ಕೆ ಬೆನ್ನು, ಕಾಲು, ಕೈ, ಎದೆ, ಹೊಟ್ಟೆಗಳಿಗೆಲ್ಲ ಗಾಯವಾದವನು ತನಗೆ ಎಲ್ಲಿ ಹೆಚ್ಚು ನೋವಾಗಿದೆಯೆಂಬುದನ್ನು ಹೇಳಲು ಹೇಗೆ ಅಸಮರ್ಥನಾ ಗುವನೋ ಹಾಗೆಯೇ ಅವನ ಸ್ಥಿತಿಯಾಗಿತ್ತು. ಗಾಯಗೊಂಡ ಆ ಮನುಷ್ಯ ಬಹಳವಾದರೆ 'ನನಗೆ ಸಂಕಟವಾಗುತ್ತಿದೆ' ಎನ್ನಬಹುದು. ರಾಜಾಸಾಹೇಬನೂ ಅಷ್ಟು ಮಾತ್ರ ಹೇಳಬಹುದಿತ್ತು.

ಅವನ ಮನಸ್ಸಿಗೆ ಇಷ್ಟೊಂದು ನೋವೆನಿಸಿದ್ದರೂ ಅವನ ಆತ್ಮ ನಿರ್ಲಿಪ್ತ ವಿದ್ದಂತಿತ್ತು. ಅದೂ ವಿಚಿತ್ರವೇ ಸರಿ!

ಅವನ ಆತ್ಮ ಸುಶೀಲಳ ನೆನಪು ತಂದುಕೊಟ್ಟಿತು; ಅವಳು ಬಹಳ ಸರಳಜೀವಿಯೆಂದೇ ಆತ ಭಾವಿಸಿರಲಿಲ್ಲವೆ? ಹಿಂದಿನ ರಾತ್ರಿ ಅವಳೊಡನೆ ಆದ ಭೆಟ್ಟಿ, ಅವಳು ಏನೇನೋ ಹೇಳಿದ್ದುದು, ಅವಳು ವಿಲಾಸರಾಯನೊಡನೆ ಲಗ್ನದ ಮಾತು ನಡೆದುದನ್ನು ಬಚ್ಚಿಟ್ಟದ್ದು, ಎಲ್ಲವೂ ನೆನಪಾದವು. ಆ ವಿಲಾಸರಾಯ! ಅವನ ಸ್ಥೂಲ ದೇಹ, ಬೋಳು ತಲೆ, ಮತ್ತು ಮೂರ್ಖ ತನಗಳಲ್ಲಿ ಅವಳಿಗೆ ಯಾವ ರುಚಿ ಕಂಡಿತೋ ಏನೋ? ಅವನಲ್ಲಿ ಹಣವಿರ ಬೇಕು........"

ರಾಜಾಸಾಹೇಬ್ ಓಡುವದನ್ನು ನಿಲ್ಲಿಸಿ ನಿದಾನವಾಗಿ ನಡೆಯುತ್ತ ಹೊರಟಿದ್ದ. ತುಸು ದೂರ ರಾಜಮಾರ್ಗಗಳ ಮೇಲೆ ಮೋಟರುಗಳು ಓಡಾಡುತ್ತಿದ್ದವು. ಅಲ್ಲಲ್ಲಿ ನಾಯಿಗಳೂ ಚೆಲ್ಲಾಟ ನಡಸಿದ್ದವು. ಆದರೇನು? ಅವನಿಗೆ ಹಾವಿನಂಥ ವಿಷ ಏರಿರಲಿಲ್ಲವೇ? ಅವನು ವೇಗ ಹೆಚ್ಚಿಸಿದ, ಥಟ್ಟನೆ ಆವನಿಗೊಂದು ವಿಚಾರ ಹೊಳೆಯಿತು; ಇಂಥ ಸ್ಥಿತಿಯಲ್ಲಿ ಮನೆ ಸೇರುವದು ಯೋಗ್ಯವಾಗಲಾರದು. ದಾರಿಯ ಮೇಲಿದ್ದ ಹೋಟಲಿನಲ್ಲಿ ಅರ್ಧ ಗಂಟೆ ಕಳೆದು ಮುಂದೆ ಹೋದರೆ ನೆಟ್ಟಗೆಂದು ಆತ ಯೋಚಿಸಿದೊಡನೆ ಅವನ ಶರೀರದಲ್ಲಿನ ವಿಷವೆಲ್ಲ ಇಳಿದು ಹೋದಂತೆನ್ನಿಸಿತು. ಹೋಟಲಿನಲ್ಲಿ ಸುಮಾರು ವೇಳೆ ಕಳೆದು ಅಲ್ಲಿಂದೆದ್ದು ದಾರಿಗೆ ಬಂದು, ಮನೆಯತ್ತ ತೆರಳಿದ. ಹೊತ್ತು ಮುಳುಗುವ ಸಮಯವಾಗಿತ್ತು.

ಸುಶೀಲಾರಾಣಿ........ಅವಳು ಹಿಂದೆಂದೋ ನೋಡಿದ್ದ ಓರ್ವ ಹೆಣ್ಣು. ತನ್ನ ಜೀವನಕ್ಕೂ ಅವಳಿಗೂ ಯಾವ ಸಂಬಂಧವೂ ಇಲ್ಲದಂತೆ ತೋರಿತು. ತನ್ನಿಂದ ಅವಳು ಬಹು ದೂರದಲ್ಲಿರುವಂತೆ ಭಾಸವಾಯಿತು. ಹಾಗಿದ್ದರೂ ತನಗೇಕೆ ಇಷ್ಟು ವ್ಯಥೆಯಾಗಬೇಕು? ಎಂದು ಆತ ಆಶ್ಚರ್ಯ ತಾಳಿದ. ಅವಳು ಸಮೀಪವಿದ್ದರೆ ಆನಂದವೇಕೆ ಆಗಬೇಕು? ಆತನ ಮುಂದೆ ಅದೊಂದು ಸಮಸ್ಯೆಯಾಗಿ ನಿಂತಿತು. ಪ್ರೇಮ ಮತ್ತು ಆಕರ್ಷಣೆಗಳಲ್ಲಿನ ಅಂತರ ಇದೇ ಇರಬೇಕು. ಆಕರ್ಷಣೆಯನ್ನು ತೊಡೆದು ಹಾಕಲು ಸಾಧ್ಯ! ಈಗ ಅವನ ಮನಸ್ಸು ಶಾಂತವಾಗಿತ್ತಲ್ಲವೆ? ಅಂತೆಯೇ ತಾನೆಂದೂ ಆಕೆಯನ್ನು ಪ್ರೀತಿಸಿರಲಿಲ್ಲವೆಂಬುದರ ಅರಿವಾಯಿತು. ಸುಶೀಲಳ ಸೌಂದರ್ಯದಿಂದ ಅವನು ಆಕರ್ಷಿತನಾಗಿದ್ದ. ಅವಳ ಸ್ಥಿತಿಯೂ ಅವನ ಮರುಕಕ್ಕೆ ಪಾತ್ರವಾಗಿತ್ತು. ಆದರೆ ಅವರಿಬ್ಬರ ಮನಸ್ಸು ಎಂದೂ ಹೊಂದಿಕೊಂಡಿರಲಿಲ್ಲ. ಯಾವಾಗಲೂ ಒಂದರಿಂದ ಇನ್ನೊಂದು ದೂರವಿರಲು ಪ್ರಯತ್ನಿಸಿದ್ದವು. ಅವಳು ಕಪಟಿಯೇ ಆಗಿರಲು ಸಾಕು!

ಆತ ಆದರ್ಶ ತರುಣಿಯರ ಕುರಿತು ಯೋಚಿಸಲು ಪ್ರಾರಂಭಿಸಿದ. ಸುಶೀಲಾರಾಣಿಯ ಜಗಳಗಂಟತನ ಯಾವಾಗಲೂ ಆತನನ್ನು ಅವಮಾನಗೊಳಿಸುತ್ತಿತ್ತು. ಆತನೇನೋ ಅವಳನ್ನು ಕ್ಷಮಿಸುತ್ತಿದ್ದ. ಆದರೆ ಆದರ್ಶ ಹೆಣ್ಣು ಹೀಗೆ ಕ್ಷಮೆಗೆ ಕಾರಣಳಾಗುವಂತೆ ವರ್ತಿಸಲಾರಳು. ಎಂಥ ಸಂಕಟವೇ

ಬರಲಿ, ಹಸನ್ಮುಖಿಯಾಗಿ ಧೈರ್ಯದಿಂದ ಅವನ್ನೆದುರಿಸಲು ಸಿದ್ಧಳಾಗುವಳು. ಆರ್ಥಿಕ ತೊಂದರೆಗಳಂತೂ ಆದರ್ಶ ಸ್ತ್ರೀಗೆ ಕಃಪದಾರ್ಥ. ಅಂಥವಳು ಪ್ರಾಮಾಣಿಕಳಾಗಿರಲು ಬಯಸುವದರಿಂದ ತನ್ನಂಥವನಿಂದ ಸೌಕರ್ಯಗಳನ್ನೂ ಅಪೇಕ್ಷಿಸಲಾರಳು. ಯಾವ ಕ್ಷುಲ್ಲಕ ವಿಚಾರಗಳಿಂದಲೂ ಅವಳು ವಿಕಾರವಶವಾಗಲಾರಳು. ಆಗಿದ್ದರೂ ಅವಳ ಮನೋಧೈರ್ಯ ಅದನ್ನು ಪ್ರಕಟಗೊಳಿಸಗೊಡುತ್ತಿರಲಿಲ್ಲ. ದಯಾಮೂರ್ತಿಯಾಗಿ, ಆಕೆಗಿಂತಲೂ ತುಸು ಕಡಿಮೆ ಬುದ್ಧಿಯುಳ್ಳ ತನ್ನನ್ನು ಆಕೆ ಜಾಣತನದಿಂದ ಸಮಾಧಾನಪಡಿಸುತ್ತಿದ್ದಳು. ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಇನ್ನಿತರ ವಿಚಾರಗಳೇನು ? ಬಹಳವಾದರೆ ಆಳು ತುಸು ಗಿಡ್ಡ, ಅಥವಾ ಸಾದುಗಪ್ಪು ಇರಬಹುದಾಗಿತ್ತು, ಜೇನುಹುಳು ಸಾಕಬಹುದಿತ್ತು........ಪ್ರಮೀಲಾ ಸರಕಾರ್ ಎಂಬ ಹೆಸರೂ ಅವಳಿಗೆ ಇರಬಹುದಾಗಿತ್ತು........ಹೀಗೆ ತನ್ನ ವಿಚಾರಗಳು ಪ್ರಮೀಲೆಯ ಮೇಲೆ ಕೇಂದ್ರೀಕೃತವಾದುದನ್ನು ಕಂಡು ಅವನಿಗೆ ಆಚ್ಚರಿಯಾಯಿತು. ತಾನು ಆ ಮನೆಯ ಗೇಟಿನ ಹತ್ತಿರ ಬಂದುದೂ ಕಂಡುಬಂದಿತು. ಎದುರಿನಿಂದ ಯಾರೋ ಬರುತ್ತಿದ್ದರು. ಅವರು ಬೇರಾರೂ ಆಗಿರದೆ ಪ್ರಮೀಲೆಯಾಗಿದ್ದಳು.

ಆಗ ತಾನೆ ಬೆಳದಿಂಗಳು ಬೀಳುತ್ತಿತ್ತು. ಒಂದೆರಡು ದಿನಗಳಲ್ಲಿ ಹುಣ್ಣಿವೆಯಿರಬೇಕು. ಅಸ್ತಂಗತನಾಗಿದ್ದ ಸೂರ್ಯನ ಹೊಂಗಿರಣಗಳ ಮಂದಛಾಯೆಯಲ್ಲಿ ಚಂದ್ರನ ಸೌಮ್ಯ ಪ್ರಶಾಂತ ಬೆಳಕು ಸೇರಿ ಪ್ರಮೀಲೆಯ ಮುಖಕ್ಕೆ ಕಾಂತಿಯನ್ನು ತಂದಿತ್ತು. ಆ ಸೌಂದರ್ಯ ಮೂರ್ತಿ ಅವನ ಎದುರಿಗೆ ಬಂದು ನಿಂತಿತು. ಅವಳ ಬೆಕ್ಕೂ ಅವಳನ್ನು ಹಿಂಬಾಲಿಸಿ ಬಂದು ಅವಳ ಪಕ್ಕದಲ್ಲಿ ನಿಂತು ಅವರಿಬ್ಬರನ್ನೂ ನೋಡುತ್ತಿತ್ತು. ಕುತೂಹಲದಿಂದ ಆತನನ್ನೇ ನೋಡುತ್ತಿದ್ದ ಅವಳನ್ನು ಕಂಡು ತಾನು ಅನೇಕ ದಿನಗಳಿಂದ ಅವಳನ್ನು ನೋಡಿಲ್ಲವೇನೋ ಎಂಬಂತೆ ಅವಳನ್ನೇ ದಿಟ್ಟಿಸಿ ನೋಡುತ್ತಲಿದ್ದ ರಾಜಾ ಸಾಹೇಬ್.

"ಎಲ್ಲಿಗೆ ಹೋಗಿದ್ದಿರಿ, ಅಣ್ಣಾಸಾಹೇಬ್ ? ಹೇಳಿಯೂ ಹೋಗಿರಲಿಲ್ಲ. ನಾನು ನಿಮ್ಮ ಯೋಚನೆಯಲ್ಲೇ ಇದ್ದೆ." ಅವಳ ಧ್ವನಿಯಲ್ಲಿ ನಡುಕವಿತ್ತು.

"ವಾಕಿಂಗ್ ಹೋಗಿದ್ದೆ."

"ಮೂರು ನಾಲ್ಕು ತಾಸಿನ ತನಕ ?"

"ಲೀಲಾರಾಣಿಯ ಮನೆಗೆ ಹೋಗಿದ್ದೆ."

ಆ ಮನೆಯ ನೆನಪೂ ಇದೇ ಮೊದಲ ಸಲ ಅಲ್ಲಿಂದ ಹೊರಬಿದ್ದ ನಂತರ ಬಂದುದು ಅವನಿಗೆ. ಕಮಲಾಕಾಂತನೂ ಪಶ್ಚಾತ್ತಾಪದ ಪ್ರಾಯಶ್ಚಿತ್ತಕ್ಕೆ ವಾಕಿಂಗ್ ಹೋದುದು ಇನ್ನೂ ಅವಳಿಗೆ ನೆನಪಿತ್ತು. ಹಾಗೇನಾದರೂ ಇವರೂ ಮಾಡಿರಬಹುದೇ ? ಎಂಬ ಭಯವೂ ಅವಳಿಗಾಯಿತು. ಮೇಲಾಗಿ ಅವನು ಇತ್ತೀಚೆಗೆ ಯಾವುದೋ ಚಿಂತೆಯಲ್ಲಿ ಮಗ್ನನಾಗಿರಬೇಕೆಂದೂ ಅವನ ವರ್ತನೆ ಯಲ್ಲಿ ಕಂಡಿದ್ದಳು. ಅವನನ್ನು ಯಾವುದೋ ದುಃಖದ ಸಂಗತಿ ಪೀಡಿಸುತ್ತಿರ ಬಹುದೆಂದು,

"ಏನಾದರೂ ವಿಶೇಷವೇ, ಅಣ್ಣಾಸಾಹೇಬ ?" ಎಂದು ಕೇಳಿದಳು.

"ಏನೂ ಇಲ್ಲ."

"ನಿಜ ಹೇಳುವಿರಾ ?"

"ಸತ್ಯವಾಗಿಯೂ ಏನೂ ಇಲ್ಲ, ಪ್ರಮೀಲಾದೇವಿ."

"ನಾನೇನೋ ಬೇರೆ ಭಾವಿಸಿದ್ದೆ. ನೀವು ಯಾವುದಾದರೂ ತೊಂದರೆ ಯಲ್ಲೋ ದುಃಖದಲ್ಲೋ ಇರುವಿರೆಂದು........"

ದಾರಿಯಲ್ಲಿ ಬರುತ್ತಿದ್ದಾಗ ಆತ ಆದರ್ಶ ಯುವತಿಯ ಗುಣಗಳನ್ನು ಯೋಚಿಸಿಕೊಂಡಿರಲಿಲ್ಲವೆ ? ಈ ಹುಡುಗಿಯಲ್ಲಿ ಎಂಥ ಕನಿಕರ, ಎಷ್ಟೊಂದು ಆಸ್ಥೆ ! ದಯಾಮೂರ್ತಿಯೇ ಹೌದು.

"ನಾನೆಷ್ಟು ಸುದೈವಿ ಪ್ರಮೀಲಾದೇವಿ. ನನ್ನ ಬಗೆಗೆ ಇಷ್ಟೊಂದು ಆಸ್ಥೆ ತಾಳಿದುದೂ ಕನಿಕರ ಪಡುವದೂ ನಿಮ್ಮ ದೊಡ್ಡ ಗುಣಗಳ ನಿದರ್ಶನ."

ಪ್ರಮೀಲೆಯ ಮುಖದಲ್ಲಿನ ಕಾರ್ಮೋಡಗಳು ಮಾಯವಾಗಿ ವನ ಕುಸುಮದಂತೆ ಅರಳಿತು.

"ನಿಜವಾಗಿಯೂ ನೀವು ಸುಖಿಯಾಗಿರುವಿರಾ, ಅಣ್ಣಾಸಾಹೇಬ್ ?"

"ಅತ್ಯಂತ ಸುಖಿಯಾಗಿದ್ದೇನೆ."

"ಹಾಗಿದ್ದರೆ ನಿಮ್ಮ ಸುಖದಲ್ಲಿ ತುಸು ಉಪ್ಪು ಬೆರೆಸುವೆ. ಆ ಮಂಗ ನಿಂದಾಗಿ ನಮಗೆ ಬಹಳೇ ತೊಂದರೆಯಾಗುವಂತಿದೆ."

"ಹೇಗೆ? ಅದೇನು ಓಡಿಹೋಗಿದೆಯೇ ?"

"ಓಡಿ ಹೋಗಿಲ್ಲವೆಂದೇ ತೊಂದರೆ...."

"ಅಂದರೆ ?"

"ಇಲ್ಲಿ ಬನ್ನಿ, ಈ ಕಟ್ಟೆಯ ಮೇಲೆ ಕುಳಿತುಕೊಳ್ಳೋಣ. ಎಲ್ಲವನ್ನೂ ಹೇಳುವೆ."

ಅವರಿಬ್ಬರೂ ಕುಳಿತರು.

"ನಾವಿಬ್ಬರೇ ಹೀಗೆ ಕುಳಿತುದು ಸರಿಯಾಗಿ ಕಾಣದಿದ್ದರೂ ಚಿಂತೆ ಯಿಲ್ಲ. ನೀವು ಆ ಮನೆಗೆ ಹೋದುದರ ಕಾರಣವನ್ನು ಹೇಳಿರಿ."

ರಾಜಾಸಾಹೇಬ ಎಲ್ಲವನ್ನೂ ಹೇಳಿದ. ಲೀಲಾರಾಣಿಯ ಮುಂಗ ತಪ್ಪಿಸಿ ಕೊಂಡುದಕ್ಕಾಗಿ ಅವಳಿಗಾದ ವ್ಯಥೆ, ತಾವು ಅದನ್ನು ಬಚ್ಚಿಟ್ಟು ಮೌನವಾಗಿ ದ್ದುದು ಸರಿಯಲ್ಲವೆಂದು ಆತ ಭಾವಿಸಿದ್ದುದು, ತಾನು ಮುಂಗವನ್ನು ಕಂಡಿರುವ ದಾದರೂ ಅದು ಮುಂದೆ ಎಲ್ಲಿಗೆ ಹೋಯಿತೆಂಬುದು ತನಗೆ ಗೊತ್ತಿಲ್ಲವೆಂದು ಸುಳ್ಳು ಹೇಳಿದುದನ್ನೆಲ್ಲ ತಿಳಿಸಿದ.

"ನಿಮ್ಮ ಉದ್ದೇಶದ ಬಗ್ಗೆ ನನಗೆ ವ್ಯಸನವಿಲ್ಲ. ಆದರೆ ನೀವು ತಪ್ಪು ದಾರಿ ಹಿಡಿದಿರಿ. ಈಗೊಂದು ತಾಸಿನಿಂದ ಒಂದೇ ಸಮನೆ ಪತ್ರಿಕೆಯ ವರದಿ ಗಾರರು ನನ್ನ ಮನೆಯ ಮೇಲೆ ದಾಳಿಯನ್ನೇ ನಡೆಸಿದಂತಿದೆ. ಅವರಿಗೆ ಉತ್ತರ ಕೊಟ್ಟು ಕೊಟ್ಟು ನನಗೆ ಸಾಕಾಯಿತು."

"ಸರಿ, ನಾನು ಮುಂಗನ ಸಮಾಚಾರ ತಿಳಿಸಿದುದರಿಂದ ವರದಿಗಾರರು ಈ ಕಡೆ ಬಂದಂತಾಯಿತು. ಆದರೆ ಲೀಲಾರಾಣಿಯ ಉದ್ದೇಶವೇ ಬೇರೆ. ಅವಳಿಗೆ ಬೇಕಾಗಿರುವದು ಪ್ರಚಾರ. ಯಾವ ಕಾರಣವೇ ಇರಲಿ, ಅವಳ ಹೆಸರು ತಪ್ಪದೆ ಪತ್ರಿಕೆಗಳಲ್ಲಿ ಬರುತ್ತಿರಬೇಕು ಎಂದು ಅವಳ ಇಚ್ಛೆ ಇರಬೇಕು. ಅವಳೇ ಈ ವರದಿಗಾರರನ್ನು ಕಳಿಸಿರಬೇಕು."

"ಪೋಲೀಸರೂ ಬಂದು ಹೋದರು. ಅವರ ಕಣ್ಣಿಗೆ ಆ ಮುಂಗ ಬಿದ್ದಿಲ್ಲ, ಅದು ನಮ್ಮ ದೈವ. ನಾವು ಕೂಡಲೇ ಅದಕ್ಕೆ ಉಪಾಯ ಕೈಕೊಳ್ಳಬೇಕು. ದೊಡ್ಡವರೆನ್ನಿಸಿಕೊಳ್ಳುವವರ ಮಾತೇ ಬೇರೆ. ಇವಳೇ ಇಷ್ಟು ಕೋಲಾಹಲ ವನ್ನೆಬ್ಬಿಸಿರುವಾಗ ಇಂಗ್ಲಂಡದ ರಾಣಿಯ ಮುಂಗ ಕಳೆದಿದ್ದರೆ ? ಅಬ್ಬ, ಜಗತ್ತಿನ ಎಲ್ಲ ಪತ್ರಿಕೆಗಳಲ್ಲೂ ಬರಬಹುದಿತ್ತು. ಅದರಲ್ಲೂ ಅದು ರಾಜಮನೆತನದ ಯಾರ ಮೇಲಾದರೂ ತತ್ತ್ರಿಯನ್ನು ಚೆಲ್ಲಿದರೆ ಅಥವಾ ಅವರನ್ನು ಕಚ್ಚಿದರೆ ಇಡಿಯ ಸೈನ್ಯವೇ ಬರಬಹುದಿತ್ತೇನೋ ? ನಮ್ಮ ಅತಿಥಿಯಾಗಿರುವ ಮುಂಗ

ಅದೆಲ್ಲವನ್ನೂ ಸಾಧಿಸಿಕೊಂಡು ಫರಾರಿಯಾಗಿದ್ದುದನ್ನು ಓದಿದ್ದೇವೆ. ರಾಜ ಮನೆತನದವನ ಬದಲು ಈ ಮಂಗ ಒಬ್ಬ ಲಕ್ಷಾಧೀಶನನ್ನು ಕಚ್ಚಿದೆ, ಅಡುಗೆ ಯವಳೊಬ್ಬಳ ಮೇಲೆ ತತ್ತಿಗಳನ್ನೂ ಬಿಸಾಕಿದೆ. ಎಲ್ಲವೂ ಒಂದೇ. ಅಂತೆಯೇ ಈ ಪತ್ರಿಕೆಗಳವರು, ಪೋಲೀಸರು ಬರುತ್ತಿರುವರು. ನಮ್ಮ ಮನೆ ಅವರ ದಾಳಿಗೆ ಕೇಂದ್ರ ಗುರಿಯಾಗಿದೆ. ಅವರನ್ನೆಲ್ಲ ಅವರ ಮನೆಗಳಿಗೆ ಊಟಕ್ಕೆ ಕಳಿ ಸುವದೇ ಮಹಾ ಪ್ರಯಾಸವಾಗಿದೆ ಅಣ್ಣಾಸಾಹೇಬ. ಇಲ್ಲಿಯೇ ರಾತ್ರಿ ಕಳೆಯ ಬೇಕೆಂಬ ವಿಚಾರ ಅವರಿಗಿದ್ದಂತಿತ್ತು. ಅತಿ ಕಷ್ಟದಿಂದ ಅವರನ್ನು ಸಾಗಿಸಿ ಬಂದಿರುವೆ. ಇನ್ನೂ ಒಬ್ಬಿಬ್ಬರು ಇಲ್ಲೆಲ್ಲಿಯಾದರೂ ಅಡಗಿಯೂ ಕುಳಿತಿರ ಬಹುದು. ಮಂಗನ ಕೊಲೆಗೆ ಕಾರಣರಾದ ಕೊಲೆಪಾತಕಿಗಳನ್ನು ಕಂಡು ಹಿಡಿದು ಗೌರವ ಗಳಿಸುವದು ಅವರ ಆಸೆ. ಈಗೇನು ಮಾಡುವದು?"

ರಾಜಾಸಾಹೇಬನಿಗೆ ಉಪಾಯ ತೋಚಲಿಲ್ಲ. ಅವಳೇ ಮುಂದೆ ಹೇಳಿ ದಳು:

"ನಮ್ಮ ಸ್ಥಿತಿಯು ಅರಿವಾಯಿತೇ, ಅಣ್ಣಾಸಾಹೇಬ? ಆ ಮಂಗವನ್ನು ನಾವು ಕದ್ದು ತಂದಿದ್ದೇವೆಂದು ಪೋಲಿಸರು ನಮ್ಮನ್ನು ಬಂಧಿಸಲೂ ಬಹುದು. ಲಕ್ಷಾಧೀಶ್ವರರ ಮಂಗಕ್ಕೂ ಬಹಳ ಬೆಲೆಯಿದೆ. ಅವರ ಮಕ್ಕಳು ಕಳವಾಗುವ ದನ್ನೂ ಕೇಳಿಲ್ಲವೆ? ಅದಕ್ಕಿಂತಲೂ ಈ ಮಂಗನ ಬೆಲೆ ಹೆಚ್ಚು. ಮಂಗನನ್ನು ಹುಡುಕಿ ಕೊಡುವವರಿಗೆ ಒಂದು ಸಾವಿರ ರೂಪಾಯಿ ಬಹುಮಾನ ಕೊಡುವ ದಾಗಿ ಲೀಲಾರಾಣಿ ಸಾರಿದ್ದಾಳೆ. ಕದ್ದವರ ಪತ್ತೆಯಾದರೆ ಅವರಿಂದ ಆ ಬಹು ಮಾನದ ಹಣ, ವರದಿಗಾರರ ಫೀ, ಪತ್ರಿಕೆಗಳಲ್ಲಿ ಅಚ್ಚುಮಾಡಿಸಿದ ವೆಚ್ಚ ಗಳೆಲ್ಲವನ್ನೂ ಅವರಿಂದ ದೊರಕಿಸಲು ಪ್ರಯತ್ನಿಸಬಹುದು. ಅದೇನು ತುಸು ವಾದೀತೇ?"

"ಛೆ, ಲೀಲಾರಾಣಿ ಹಾಗೆಲ್ಲ ಮಾಡಲಿಕ್ಕಿಲ್ಲ."

"ಏನು ಭರವಸೆ ಅಣ್ಣಾಸಾಹೇಬ್?"

"ನನ್ನ ಮುಂದೆ ಅಂಥ ಯಾವ ಮಾತೂ ಆಡಿಲ್ಲ."

"ಇರಲಿಕ್ಕಿಲ್ಲ. ಆ ಬಹುಮಾನ ಇನ್ನೆರಡು ದಿನಕ್ಕೆ ಜಾರಿಯಲ್ಲಿ ಬರು ತ್ತದೆ. ಈ ಎರಡು ದಿನಗಳ ಪರಿಶ್ರಮದಲ್ಲಿ ಆ ಮಂಗ ಸಿಕ್ಕದಿದ್ದರೆ, ಮೂರ ನೆಯ ದಿನ ಅಥವಾ ಮುಂದೆ ಮಂಗವನ್ನು ಜೀವಂತವಾಗಲಿ, ಅದರ ಶವ

ವನ್ನಾಗಲಿ ತಂದುಕೊಟ್ಟವರಿಗೆ, ಇಲ್ಲವೆ ಅದರ ಮರಣಕ್ಕೆ ಕಾರಣರಾದವರ ಪತ್ತೆ ಮಾಡಿದವರಿಗೆ ಆ ಬಹುಮಾನ ಸಿಕ್ಕುವದು ಎಂದು ಒಬ್ಬ ವರದಿಗಾರ ನನ್ನ ಮುಂದೆ ಹೇಳಿದ. ಈ ಸುದ್ದಿಯಿಂದ ಅವಳ ಹೆಸರಿಗೆ ಪ್ರಾಶಸ್ತ್ಯ ದೊರೆಯ ಲೆಂದು ಹಾಗೆ ಮಾಡಿರಬಹುದೆಂದು ನಾವು ಅನ್ನಬಹುದು. ಆದರೆ, ಮಂಗನ ಶೋಧ—ಸಾವಿರ ರೂಪಾಯಿ ಬಹುಮಾನ—ಎಂದೊಡನೆ ಯಾರ ಕುತೂಹಲ ಕೆರಳಲಾರದು? ಅವಳ ಪ್ರಚಾರದ ಹಂಚಿಕೆಯೇನೋ ಒಳ್ಳೆಯದೇ, ಆದರೆ ನನ್ನ ಸ್ಥಿತಿ ಮಾತ್ರ ವಿಚಿತ್ರವಾಗಿದೆ. ನಮ್ಮಲ್ಲಿ ಬಂಧನದಲ್ಲಿರುವ ಮಂಗನನ್ನು ಯಾರಾದರೂ ನೋಡಿದರೆ ಕಲಂಕರಹಿತವಾದ ನಮ್ಮ ಮನೆತನಕ್ಕೆ ಕುಂದು ಬಂದೀತು. ಅದಲ್ಲದೆ....ಅಯ್ಯೋ, ಕಮಲಾಕಾಂತನಿಗೆ ಈ ಸಂಗತಿ ಗೊತ್ತಾ ದರೆ ಅವನಿಗೆ ಹೊಸಸ್ಫೂರ್ತಿ ಬಂದು ತನ್ನ ಕಾಯಕವಾದ ಕುಡಿತದಲ್ಲಿ ತೊಡಗಿ ಬಿಡಬಹುದು."

"ಗೊಂದಲದ ಪ್ರಸಂಗವೇನೋ ಹೌದು. ಆದರೆ ಕಮಲಾಕಾಂತನೇಕೆ ಕುಡಿತ ಪ್ರಾರಂಭಿಸಬೇಕು?"

"ಕಮಲಾಕಾಂತನ ವಿಚಾರಗಳೇ ಬೇರೆ. ನಿನ್ನೆಯ ರಾತ್ರಿ ಅವನು ಮಂಗನನ್ನು ಪ್ರತ್ಯಕ್ಷ ಕಂಡರೂ ಕುಡಿತದ ಅಮಲಿನಲ್ಲಿ ಹಾಗೆ ಭಾಸವಾಯಿ ತೆಂದೇ ಆತ ನಂಬಿಕೊಂಡಿದ್ದಾನೆ, ಕುಡಿತವನ್ನೂ ನಿಲ್ಲಿಸಿದ್ದಾನೆ. ಒಂದು ಫರ್ಲಾಂಗ ನಡೆಯಲು ಕೂಡ ಬೇಸರವೆನಿಸುತ್ತಿದ್ದ ಅವನಿಗೆ ಈಗ ಮೂರು ಮೈಲು ನಡೆದುಬರುವ ಮನಸ್ಸಾಗಿದೆ. ಬಾಳೆಯ ಹಣ್ಣೆಂದರೆ ಅವನಿಗೆ ದ್ವೇಷ ವಿತ್ತು, ಈಗ ದಿನಕ್ಕೊಂದು ಡಝನ್ ಬೇಕು. ನಿನ್ನೆಯೇ ಪ್ರಾರಂಭವಾಗಿರುವ ಈ ಸಲ್ಲಕ್ಷಣಗಳೆಲ್ಲ ಇಂದೇ ನಾಶವಾಗಬೇಕೇ? ತಾನು ಕಂಡದ್ದು ನಿಜಮಂಗ ವೆಂದು ಅವನಿಗೆ ಗೊತ್ತಾದ ಕ್ಷಣವೇ ಅವನ ಈಗಿನ ನಿರ್ಧಾರಗಳನ್ನೆಲ್ಲ ಗಾಳಿಗೆ ತೂರಿಬಿಡುವನು. ನನ್ನ ಮೇಲಂತೂ ಬೈಗುಳ ಸುರಿಮಳೆ ಕರೆಯಬಹುದು. ನನ್ನ ದೈವ ಚೆನ್ನಾಗಿತ್ತು, ಅವನು ವಾಕಿಂಗ್ ಹೋದ ನಂತರ ಆ ವರದಿ ಗಾರರು ಬಂದರು. ಅವನಿಗೆ ಇದೆಲ್ಲ ಗೊತ್ತಾಗಲಿಕ್ಕಿಲ್ಲ ಎಂಬ ಭರವಸೆಯಾದರೂ ಎಲ್ಲಿಯದು? ಏನಾದರೂ ಉಪಾಯ ಸೂಚಿಸಿರಿ, ಅಣ್ಣಾಸಾಹೇಬ."

"ಅದನ್ನು ದಾಟಿಸಿ ಬಿಡುವದೊಂದೇ ದಾರಿ."

"ಹೌದು, ಈಗಿಂದೀಗ ದಾಟಿಸಬೇಕು. ನೀವೂ ಅಲ್ಲಿಯ ತನಕ ಬರಲಾರಿರಾ? ಪಾಪ, ನೀವು ದಣಿದಿರಬೇಕು."

"ದಣಿವೇನೋ ಆಗಿದೆ........" ರಾಗವೆಳೆದನಾತ. ಪ್ರಮೀಲೆ ಒಂದು ಕ್ಷಣ ಆವನ ಮುಖ ನೋಡಿ,

"ನಿಮ್ಮ ಶಕ್ತಿಗೇನು ಕೊರತೆ? ಇಂಥ ಸಾಹಸದಲ್ಲಿ ನೀವು ಹಿಂದಾಗಲಾರಿರೆಂಬ ಭರವಸೆ ನನಗಿದೆ. ನೀವು ತುಂಬಾ ಒಳ್ಳೆಯವರು ಅಣ್ಣಾಸಾಹೇಬ...."

ಅವಳು ಕಟ್ಟಿಗೆಗಳನ್ನಿಡುತ್ತಿದ್ದ ಔಟ ಹೌಸ್ ಮುಖ್ಯ ಮನೆಯಿಂದ ಸುಮಾರು ಮೂವತ್ತು ಹೆಜ್ಜೆಗಳ ಮೇಲಿತ್ತು. ಸುತ್ತಲೆಲ್ಲ ಗಿಡಗಂಟಿಗಳು. ತನ್ನ ಸೊಂಟದೊಳಗಿಂದ ಬೀಗದ ಕೈ ತೆಗೆಯುತ್ತ ಪ್ರಮೀಲಳೆಂದಳು.

"ಅಯ್ಯೋ, ಮೂರೂ ಸಂಜೆಯ ಮುಂದೆ ನಾನೆಷ್ಟು ಗಾಬರಿಯಾಗಿದ್ದೆ. ಆ ವರದಿಗಾರರ ಪೈಕಿ ಯಾರಾದರೊಬ್ಬರು ಇಲ್ಲಿ ಬಂದು ನೋಡುವರೇನೋ—ಎಂದು. ಒಮ್ಮೆಯಂತೂ ಆ ಕಪಿ ಗದ್ದಲ ಮಾಡಿತು. 'ಕದೀಮ-ಕದೀಮ' ಎಂದು ಬೆಕ್ಕನ್ನು ಕೂಗುತ್ತ ನಾನು ಆ ಕಡೆ ಓಡಿದೆ. ಪುಣ್ಯಕ್ಕೆ ನನ್ನ ಕೂಗಿಗೆ ಬೆಕ್ಕು ಅದೇ ಸಿಟ್ಟಿನಿಂದ ಬಂತು. ಕಟ್ಟಿಗೆಯ ಮನೆಯಲ್ಲಿನ ಇಲಿಗಳಿಗಾಗಿ ಕಾದಿರಬೇಕು. ಇನ್ನೊಬ್ಬವ ಆ ಕೋಣೆಯ ಕಿಟಕಿಯಲ್ಲಿ ಇಣಿಕಿ ಹಾಕುವವನಿದ್ದ. ಅಷ್ಟರಲ್ಲಿ ಅವನನ್ನು ಒಂದು ಜೇನುಹುಳು ಕಚ್ಚಿತು." ಅವಳು ಬೀಗವನ್ನು ತೆಗೆದು ಏನೋ ನೆನಪು ಮಾಡಿಕೊಂಡು, "ಬನ್ನಿರಿ, ಒಳಕ್ಕೆ ಹೋಗಿ ಒಂದೆರಡು ಬಾಳೆಯ ಹಣ್ಣುಗಳನ್ನು ತರೋಣ." ಎಂದು ಹೇಳಿ ಬೀಗವನ್ನು ತೆರೆದೇ ಇಟ್ಟು ಮನೆಯತ್ತ ಅವನೊಡನೆ ಹೊರಟಳು.

"ನಿಮಗೆ ಹಸಿವಾಗಿರಬಹುದು, ಅಣ್ಣಾಸಾಹೇಬ. ಮೊದಲು ಊಟ ಮಾಡಿರಿ. ಮಧ್ಯಾಹ್ನದಿಂದ ಏನೂ ತಿಂದಿಲ್ಲ."

"ನನ್ನ ಚಿಂತೆ ಬೇಡ. ನಾನು ಇನ್ನೂ ತಡೆಯಬಹುದು. ಮೊದಲು ಈ ಪೀಡೆ ತೊಲಗಿಸೋಣ."

"ನೀವು ಬಹಳ ಒಳ್ಳೆಯವರು ಅಣ್ಣಾಸಾಹೇಬ, ಅದನ್ನು ತೊಲಗಿಸದ ವಿನಾ ನನಗೆ ಸಮಾಧಾನವೇ ಆಗಲಾರದು. ಕಮಲಾಕಾಂತ ತಿರುಗಿ ಬಂದಿರಬೇಕು. ಅವನೇನು ಮಾಡುತ್ತಿರುವನೋ ನೋಡಿಬರುತ್ತೇನೆ, ನೀವು ಇಲ್ಲಿಯೇ

ತುಸು ತಡೆಯಿರಿ."

"ಅವಳ ಕಿವಿಗೆ ಕರ್ಕಶವಾದ ಸಪ್ಪಳವೊಂದು ಕೇಳಬಂದಿತು. ಥಟ್ಟನೆ ನಿಂತಳು.

"ಏನಾಯಿತು, ಪ್ರಮೀಲಾದೇವಿ ?"

"ಕಾರಿನ ಟೈರು ಬರ್ಸ್ಟ್ ಆದ ಸಪ್ಪಳವಾಗಲಿಲ್ಲವೆ ?"

"ಗುಡ್ಡದ ಮೇಲಿನ ಮನೆಯವರ ಕಾರು ಇರಬೇಕು."

"ಅಲ್ಲ, ಗುಂಡಿನ ಸಪ್ಪಳದಂತೆ ಕೇಳಿಸಿತು" ಎನ್ನುತ್ತ ಅಟ್ಟದ ಮೇಲೆ ಹೋಗಿ ಕಮಲಾಕಾಂತ ಏನನ್ನೋ ಓದುತ್ತಿದ್ದುದನ್ನು ನೋಡಿ ಬಂದು, "ಅವನ ಚಿಂತೆಯಿಲ್ಲ ನಡೆಯಿರಿ" ಎಂದಳು.

ಅವರು ಕಟ್ಟಿಗೆಯನ್ನಿಡುವ ಕೋಣೆಗೆ ಬಂದು ನೋಡಿದರೆ ಬಾಗಿಲು ತೆರೆದಿತ್ತು.

"ಬಾಗಿಲ ನೀವು ತೆರೆದಿದ್ದಿರಾ, ಅಣ್ಣಾಸಾಹೇಬ ?"

"ಇಲ್ಲವಲ್ಲ ?"

"ನಾನೂ ತೆರೆದಿರಲಿಲ್ಲ. ಮುಂದೆ ಮಾಡಿ ಚಿಲಕ ಹಾಕಿದ್ದೆ ಇತ್ತು. ಮಂಗ ಓಡಿ ಹೋಗಿದ್ದರೆ ಒಳ್ಳೆಯದೇ ಆಯಿತು. ಎಲ್ಲ ಕಡೆಗೂ ತುಸು ನೋಡಿರಿ."

ಅವನು ಕಡ್ಡಿಯೊಂದನ್ನು ಕೊರೆದು ಬೆಳಕು ಮಾಡಿ ನೋಡಿ,

"ಹಾಯ್ ದೇವಾ !" ಎಂದ. ಕಡ್ಡಿಯ ಬೆಳಕೂ ಆರಿತು.

"ಏಕೆ, ಏನಾಯಿತು ?"

ಇನ್ನೊಂದು ದೀಪದ ಕಡ್ಡಿ ಕೊರೆಯುತ್ತಿದ್ದ ಅಣ್ಣಾಸಾಹೇಬ,

"ಇಲ್ಲೇನೋ ಬಿದ್ದಿದೆ, ನೆಲದ ಮೇಲೆ. ಅದು ಮಂಗನಂತೇ ಕಾಣುತ್ತದೆ." ಎನ್ನುತ್ತಾ ಕಡ್ಡಿಯ ಬೆಳಕಿನಲ್ಲಿ ಮತ್ತೊಮ್ಮೆ ನೋಡಿದ.

"ಪ್ರಮೀಲಾದೇವಿ, ನಿಮ್ಮ ತರ್ಕ ಸರಿಯಾದುದು. ಅದು ಗುಂಡಿನ ಸಪ್ಪಳವಾಗಿತ್ತು. ಮನೆಯೊಳಗಿದ್ದುದರಿಂದ ಸರಿಯಾಗಿ ಕೇಳಿಸಿರಲಿಲ್ಲ. ಪಾಪ! ಹನುಮನ ಎದೆಯಲ್ಲಿ ಗುಂಡು ಸೇರಿ ತೂತು ಬಿದ್ದಿದೆ."

ಹುಡುಗತನವೂ ಒಂದು ರೋಗವಿದ್ದಂತೆ; ಅದನ್ನು 'ಮಕ್ಕಳ ಬೇನೆ' ಯೊಡನೆ ಹೋಲಿಸಬಹುದು. ಅವೆರಡೂ ಎಳೆ ವಯಸ್ಸಿನಲ್ಲೇ ಬರುವದುಂಟು. ಎಂಟು ವರ್ಷದಿಂದ ಸುಮಾರು ಹದಿನಾಲ್ಕು ವರುಷಗಳ ವರೆಗೆ ಹುಡುಗತನ ವಿರುವಂತೆ, ಅದಕ್ಕೂ ಮುಂಚೆ ಮಕ್ಕಳ ಬೇನೆ ಅರ್ಥಾತ್ ಬಾಲಗ್ರಹ ಬೇನೆ ಬರುವದುಂಟು. ಆದರೆ ತಾರುಣ್ಯದಲ್ಲಿ ಅಥವಾ ಇಳಿವಯಸ್ಸಿನಲ್ಲಿ ಈ ಹುಡುಗ ತನ ಬರುವುದೆಂದರೆ ತೊಂದರೆಯ ಮಾತೇ ಸರಿ. ವಿಲಾಸರಾಯನಿಗೆ ಹುಡುಗ ತನ ಬರಬೇಕಾಗಿದ್ದ ಸಮಯದಲ್ಲಿ ಬಂದಿರಲಿಲ್ಲ. ಅವನ ಸಮವಯಸ್ಕರಲ್ಲಿ ಅದು ಬಂದಿದ್ದಾಗ ಅವನು ಪ್ರೌಢರಂತಾಗಿದ್ದ. ತೊಟ್ಟಿಲು ಬಿಟ್ಟು ಲಂಡಚಣ್ಣ ತೊಡಹತ್ತಿದ ಪ್ರಾರಂಭದಲ್ಲಿ ಆ ಸ್ವಭಾವ ಬಂತಾದರೂ ಕ್ರಮೇಣ ಅಲ್ಪಾವಕಾಶ ದಲ್ಲಿ ಮಾಯವಾಗಿತ್ತು. ಎಂಟರಿಂದ ಹದಿನಾಲ್ಕರ ವಯಸ್ಸಿನಲ್ಲಿ ಕಂಡುಬರ ಬಹುದಾದ ಚಂಚಲತೆ ಅವನಲ್ಲಿ ಬಂದಿರಲಿಲ್ಲ. ಅವನು ಹತ್ತು ವರ್ಷದವನಾ ದಾಗ ತರುಣ ಮತ್ತು ಹದಿನಾಲ್ಕು ವರ್ಷ ದಾಟಿದಾಗ ಅವನಲ್ಲಿ ನಡುವಯಸ್ಸಿ ನವರ ತಾಳ್ಮೆ ಬಂದಿತ್ತು.

ಈಗ ಮೂವತ್ತೈದು ವರ್ಷ ದಾಟಿದ ನಂತರ ಅವನಿಗೆ ಹುಡುಗತನ ಬಂದಿರಬೇಕು. ಈ ಹಿಂದೆ ಹೇಳಿರುವಂತೆ ಅವನು ತನ್ನ ಮಲಗುವ ಕೋಣೆಗೆ ಬಂದು ಪಿಸ್ತೂಲು ಪರೀಕ್ಷಿಸುತ್ತಿದ್ದಾಗ ಅವನ ಮನಸ್ಸಿನಲ್ಲಿ ಭಯಂಕರ ಹಾಗೂ ವಿಚಿತ್ರ ವಿಚಾರಗಳೆದ್ದಿದ್ದವು. ಮೂವತ್ತು ವರ್ಷಗಳ ಹಿಂದೆ ಅವನಿಗೆ ಈಗಿ ನಂಥ ವಿಚಾರಗಳು ಬಂದು, ಆತನ ಹೂದೋಟದಲ್ಲಿ ಹೂವು ಕದಿಯಲು ಬಂದ ವರನ್ನು ಆತ ಕೊಲ್ಲಲು ಹೊರಟಿದ್ದರೆ ಹುಡುಗತನವೆಂದು ಸುಮ್ಮನಿರಬಹು ದಿತ್ತು. ಈಗಿನ ವಿಚಾರಗಳಿಗೆ ಹಿಂದೆಂದೂ ಚೇತನ ಸಿಕ್ಕಿರಲಿಲ್ಲವಾದುದರಿಂದ ಹುಡುಗತನದ ಆ ಸ್ಫೂರ್ತಿ ಜಾಗ್ರತವಾಗಿದ್ದು ಅಡಗಿ ಕುಳಿತಿತ್ತು.

ರಾಜಾಸಾಹೇಬ ವಾಸವಾಗಿದ್ದ ಮನೆಯಲ್ಲಿ ಕಳ್ಳರ ಗುಂಪು ವಾಸಿಸುತ್ತಿರ ಬೇಕು, ರಾಜಾಸಾಹೇಬ ಆ ಗುಂಪಿನ ನಾಯಕನಾಗಿರಬೇಕು ಎಂಬ ದೃಢ ವಾದ ನಂಬುಗೆ ಅವನದಾಗಿತ್ತು. ಆ ನಂಬುಗೆಯನ್ನು ಬಲವತ್ತರವಾಗಿಸಲು

ಅನೇಕ ಸಂಶಯುಗಳೂ ಕಾರಣವಾಗಿದ್ದವು. ಅವರು ವಾಸವಾಗಿದ್ದ ಸ್ಥಳದ ಪರಿಸ್ಥಿತಿಯೂ ಕಳ್ಳರಿಗೆ ಅನುಕೂಲವಾಗಿತ್ತು.

ಸುತ್ತಲಿನ ಮನೆಗಳಲ್ಲಿ ಹತ್ತೆಂಟು ಕಡೆ ಕಳುವುಗಳಾಗಿದ್ದವು. ಬೇಸಗೆಯ ತಾಪದಿಂದಾಗಿ ಕಿಟಕಿಗಳನ್ನು ತೆರೆದಿಟ್ಟರೆ ಅವನ್ನೇ ಮುರಿದು ಒಳಹೊಕ್ಕು ಕಳವು ಮಾಡುವದು ದಿನನಿತ್ಯದ ಕಾಯಕವಾಗಿತ್ತು. ಅವನಂತೂ ಆ ಭಾಗಕ್ಕೆ ಹೊಸದಾಗಿ ಬಂದವನಾಗಿದ್ದ. ಪ್ರತಿವರುಷ ಇದೇ ಬಗೆಯಾಗಿ ಕಳವುಗಳಾಗು ತ್ತಿದ್ದವೆಂಬ ಸಂಗತಿ ಅವನಿಗೆ ಗೊತ್ತಿರಲಿಲ್ಲ.

ಆ ಮನುಷ್ಯನನ್ನು ಅಂದಿನ ರಾತ್ರಿ ಕಂಡಾಗಿನಿಂದ ವಿಲಾಸರಾಯ, ಕಳವು ಮಾಡುವದು—ವಸ್ತು ಒಡವೆಗಳನ್ನು ದೋಚಿಕೊಂಡು ಹೋಗುವದು—ಇಂಥ ವಿಚಾರಗಳನ್ನೇ ಯಾವಾಗಲೂ ಮಾಡುತ್ತಿದ್ದುದರಿಂದ ಕಳ್ಳರ ಮನಸ್ಸಿ ನಲ್ಲಿ ಹುಟ್ಟಿ ಬರುವ ಭಾವನೆಗಳೇ ಅವನಲ್ಲೂ ಮನೆ ಮಾಡಿ ನಿಂತಂತಿ ದ್ದವು. ಕಿಟಕಿಯ ಬದಿಗೆ ನೆರಳಿನಲ್ಲಿ ಅಡಗಿ ನಿಂತಿದ್ದ ಆ ಮನುಷ್ಯ, ತಾನು 'ಅಯ್ಯೋ !" ಎಂದು ಕೂಗಿದುದು ಎಲ್ಲವೂ ಪುನಃ ನೆನಪಾಗುತ್ತಿತ್ತು. ಸುಶೀ ಲಳ ಪರಿಚಯ ತನಗಿರುವದಾಗಿ ನೆಪಮಾಡಿ ಆತ ಮನೆಗೆ ಬಂದುಹೋದುದು, ಸುಶೀಲಳನ್ನು ಕರೆದು ತರುವದಾಗಿ ಲೀಲಾರಾಣಿ ಹೇಳಿದೊಡನೆ ಅವನು ಜಾರಿ ಹೋದುದು, ಸುಶೀಲಳು ಆ ಮನುಷ್ಯನ ಪರಿಚಯ ತನಗಿಲ್ಲವೆಂದು ಹೇಳಿ ದುದು, ಇದೆಲ್ಲದರ ಅರ್ಥವೇನು ?

ದೇಶಪಾಂಡೆ ಮಹಲ್‌ನಲ್ಲಿ ಜೇನು ಸಾಕುವ ಉದ್ಯೋಗವಿರುವದೆಂಬದು ಕೇವಲ ತೋರಿಕೆಗೆಂದು ವಿಲಾಸರಾಯನಿಗೆ ಸ್ಪಷ್ಟವಾಗಿ ಕಂಡಿತು. ನುರಿತ ಕಳ್ಳರು ತಮ್ಮ ನಿಜವಾದ ಉದ್ಯೋಗವನ್ನು ಬೇರೆಯವರಿಂದ ಬಚ್ಚಿಡಲು ಅಂಥ ತೋರಿಕೆಯ ಉದ್ಯೋಗಗಳನ್ನು ಪ್ರದರ್ಶಿಸುವದುಂಟೆಂದು ವಿಲಾಸರಾಯ ಅದೆ ಲ್ಲಿಯೋ ಓದಿದ್ದ. ಆ ಮನುಷ್ಯನ ಬಗೆಗಂತೂ ಎಲ್ಲವೂ ಬಹಿರಂಗವಾಗಿರು ವಂತೆಯೇ ವಿಲಾಸರಾಯನಿಗೆ ಕಂಡಿತು. ಒಂದು ಕಳ್ಳರ ಗುಂಪನ್ನು, ಅವರ ಆಯುಧಗಳು ಮತ್ತು ಅವರು ಲೂಟಿ ಮಾಡಿ ತಂದ ವಸ್ತು ಒಡವೆಗಳ ಸಹಿತ ವಾಗಿ ತಾನು ಬಯಲಿಗೆಳೆದಂತೆಯೇ ಆಗಿದೆಯೆಂದು ಆತ ನಂಬಿದ್ದ.

ಸರಿಯಾದ ವಯಸ್ಸಿಗೆ ಅವನಲ್ಲಿ ಹುಡುಗತನ ಬಂದು ಹೋಗಿದ್ದರೆ ಅವನು ಈಗಿನಂತೆ ವರ್ತಿಸುತ್ತಿರಲಿಲ್ಲ. ಬಹಳವಾದರೆ ತಮ್ಮ ವಿತ್ತ ಜೀವಿತಗಳ

ಭದ್ರತೆಗಾಗಿ ಅವಶ್ಯ ಕ್ರಮ ಮಾತ್ರ ಕೈಕೊಳ್ಳುತ್ತಿದ್ದ; ಪೋಲೀಸರಿಗೆ ಸುದ್ದಿ ತಿಳಿಸಿ ರಾತ್ರಿ ಸಮಯ ತನ್ನ ಕಾವಲಿಗಾಗಿ ಹಾಸಿಗೆಯ ಬುಡದಲ್ಲಿ ಪಿಸ್ತೂಲು ಇಟ್ಟು ಕೊಳ್ಳುತ್ತಿದ್ದ. ಆದರೆ ಹುಡುಗತನ ಬಂದಾಗ ಹುಡುಗರ ಬುದ್ಧಿಯೂ ಬರುವು ದಷ್ಟೇ? ಜೇನು ಸಾಕುವ ಅವರ ಮನೆಗೆ ಹೋಗಿ ಅವರಿಗೆ ಗೊತ್ತಾಗದಂತೆ ಅವರ ಚಟುವಟಿಕೆಗಳ ಮೇಲೆ ದೃಷ್ಟಿಯನ್ನಿಡಬೇಕೆಂದು ಆತ ನಿರ್ಧರಿಸಿದ. ಒಮ್ಮೆ ಹಾಗೆ ನಿಶ್ಚಯಿಸಿದ ಮೇಲೆ ಹೋಗದಿರಲಿಕ್ಕಾದೀತೇ?

ಅಲ್ಲಿಗೆ ಹೋಗುವದರಿಂದಾಗುವ ಲಾಭವೇನೆಂದು ಆತ ಯೋಚಿಸಲಿಲ್ಲ. ಅವನಲ್ಲಿ ಕಾಣಿಸಿಕೊಂಡಿದ್ದ ಹುಡುಗತನಕ್ಕನುಸಾರವಾಗಿ ಕೈಯಲ್ಲಿ ಪಿಸ್ತೂಲು ಹಿಡಿದು ಕಳ್ಳನಂತೆ ಹೋಗಲು ಸಿದ್ಧನಾದ. ಅಂದಿನ ರಾತ್ರಿಯೂ ಅವನಿಗೆ ಅನುಕೂಲವಾಗಿರುವರಿಂತೆ ಕಂಡಿತು. ಆಕಾಶವನ್ನು ತುಂಬಿಕೊಂಡಿದ್ದ ಮೋಡಗಳು ಚಂದ್ರನ ಮುಖಕ್ಕೆ ಮರೆ ಮಾಡಹತ್ತಿದ್ದವು. ಯಾರಿಗೂ ಕಾಣಿಸ ದಂತೆ, ಕಂಡರೂ ಗುರುತು ಸಿಗದಂತೆ ಅಡಗಿ ಕುಳಿತು ಆ ಜನರ ಮೇಲೆ ದೃಷ್ಟಿ ಯನ್ನಿಡಲು ಸುಲಭವಾಗಿತ್ತು. ಆಗೊಮ್ಮೆ ಈಗೊಮ್ಮೆ ಮೋಡಗಳು ಬದಿಗೆ ಸರಿದಾಗ ಚಂದ್ರನ ಪ್ರಕಾಶ ತೂರಿ ಬಂದು ಅವನ ಮುಖದ ಮೇಲೆ ಬೆಳಕು ಚೆಲ್ಲಿ, ಆ ಮುಖದ ಮೇಲಿನ ಕಾಪಟ್ಯವನ್ನು ಹೊರಗೆಡಹುತ್ತಿತ್ತು. ಆ ಮನೆ ಸಮೀಪಿಸಿದಂತೆ ಅವನ ನಡಿಗೆಯ ವೇಗ ಕಡಿಮೆಯಾಯಿತು. ಗೇಟಿನಿಂದ ಒಳಗೆ ಹೋದೊಡನೆ ದಾರಿಯ ಪಕ್ಕದಲ್ಲಿ ಬೆಳೆದು ನಿಂತಿದ್ದ ಕಂಟಿಗಳಿಗೆ ಮರೆ ಯಾಗಿ ಮನೆಯ ಸನಿಯಕ್ಕೆ ಹೋದ. ಬೇರೊಂದು ಕಂಟಿಯ ಮರೆಗೆ ಕುಳಿತು ತನ್ನ ಕಾಯಕದ ಮಾರ್ಗ ಹುಡುಕುತ್ತ ಒಂದೊಂದೇ ಹೆಜ್ಜೆ ಮುಂದಿರಿಸಿದ.

ಸೇನಾಪತಿಗಳು, ಲೇಖಕರು, ಕಲಾವಿದರೇ ಮೊದಲಾದವರು ಮುಂದಿನ ಕಾರ್ಯದ ರೂಪರೇಷೆಗಳನ್ನು ಮೊದಲೇ ನಿರ್ಧರಿಸಿಕೊಂಡು ಪ್ರತ್ಯಕ್ಷ ಕಾರ್ಯಕ್ಕೆ ತೊಡಗುವಂತೆ, ಅವನೂ ಆ ಮನೆಯ ಸಮೀಪಕ್ಕೆ ಬಂದು ಕುಳಿತಿದ್ದ. ಪ್ರತ್ಯಕ್ಷ ಕಾರ್ಯಾಚರಣೆಗಿದ್ದ ತೊಂದರೆಗಳು ಈಗ ತಲೆದೋರಿ ನಿಂತವು. ಆ ಗಿಡಗಂಟಿ ಗಳನ್ನು ಓರೆಯಾಗಿರಿಸಿಕೊಂಡು ಅಲ್ಲಿಗೆ ಹೋಗಬಹುದೆಂಬ ರೂಪರೇಷೆ ಗುರು ತಿಸಿಕೊಂಡಿದ್ದರೂ ಅವುಗಳ ಮುಳ್ಳುಗಳನ್ನು ಎದುರಿಸುತ್ತ ಹೋಗಬೇಕಾಗುವ ದೆಂಬ ವಿಚಾರ ಬಂದಿರಲಿಲ್ಲ. ತುಸು ಹೊತ್ತು ಹೀಗೆ ಮುಂದೆ ಸಾಗಿದ ನಂತರ ಆತ ಬಯಲಿನಲ್ಲಿ ಬಂದುದು ಕಂಡುಬಂತು. ಅಲ್ಲಿಯೇ ಜೇನು ಹುಳುಗಳ

ಮನೆಗಳಿರುವುದನ್ನೂ ಗುರುತಿಸಿದ. ಮುಂಡೆಯೂರಿ ಹೋಗುವವನು ತನ್ನ ದಾರಿಯ ವಿಚಾರವೊಂದನ್ನು ಬಿಟ್ಟು ಬೇರೆಯ ಯಾವ ವಿಚಾರವನ್ನೂ ಮಾಡು ವದಿಲ್ಲ. ಬೇರೆ ವಸ್ತುಗಳೂ ಅವನಿಗೆ ಕಾಣಿಸುವದಿಲ್ಲ. ಹಾಗೆಯೇ ಈವರೆಗೆ ಆವನ ಸ್ಥಿತಿಯಾಗಿತ್ತು. ತಾನೀಗ ಬಯಲಿನಲ್ಲಿ ಬಂದುದೂ—ತನ್ನ ಸುತ್ತ ಲೆಲ್ಲ ಜೇನು ಹುಳುಗಳಿರುವುದೂ ಗೊತ್ತಾದೊಡನೆ ಆತನಿಗೆ ನೀರಡಿಕೆಯಾದಂತೆ ಭಾಸವಾಗಹತ್ತಿತು. ಮೈಗೆ ತಣ್ಣೀರಿನ ಸ್ನಾನವ ಅವಶ್ಯಕತೆಯೂ ಅನ್ನಿಸಿತು. ಎದ್ದು ನಿಂತು ಸುತ್ತಲೂ ನೋಡಿದ. ತಾನು ಬಂದ ದಿಸೆಯೊಂದನ್ನು ಬಿಟ್ಟರೆ ಇನ್ನುಳಿದ ಕಡೆಗೆಲ್ಲ ಬರಿಯ ಬಯಲು. ಸಮೀಪದಲ್ಲಿ ಯಾರಾದರೂ ನಿಂತಿ ದ್ದರೆ ತನ್ನನ್ನು ನೋಡಬಹುದೆಂಬ ವಿಚಾರ ಬಂದು ತಿರುಗಿ ಹೋಗಿ ಕಂಟಿಗಳ ಮರೆಗೆ ಕುಳಿತ. ಹಾಗೆ ಕಂಟಿಗಳಲ್ಲಿ ಅಡಗಿ ಕೂಡ್ರುವದೆಂದರೆ ಅವನಿಗೆ ಪ್ರಿಯ ವಾಗಿರಲೂ ಇಲ್ಲ.

ಆವನ ಸಾಹಸದ ಮೊದಲನೆಯ ಹಂತದ ಕೊನೆಯ ಹೆಜ್ಜೆಯದು. ಅವನು ತುಸು ಸಮಯ ಆ ಕಂಟಿಗಳ ಮಧ್ಯದಲ್ಲಿ ಕುಳಿತು, ತನ್ನ ವೈರಿಗಳ ಚಟುವಟಿಕೆಗಳ ಮಾರ್ಗಪ್ರತೀಕ್ಷೆ ಮಾಡಹತ್ತಿದ. ಮುಂದೆ ತಾನು ಮಾಡಲಿ ರುವದೇನೆಂದು ಹೇಳ ಬರುವಂತಿರಲಿಲ್ಲ. ಅಂಥ ರಾತ್ರಿಯಲ್ಲಿ ಏನೋ ಒಂದು ಭಯಂಕರ ಘಟನೆ ನಡೆಯಬಹುದೆಂದು ಅವನಿಗೆ ಅನ್ನಿಸುತ್ತಿತ್ತು. ಮೂವತ್ತು ವರ್ಷಗಳ ಹಿಂದೆ, ಚಿಕ್ಕ ವಯಸ್ಸಿನ ಕೆಲ ಶೂರರು ಇಂಥದೇ ಒಂದು ಸಾಹಸ ದಲ್ಲಿ ಈಗಿನಂತೆಯೇ ಕೂತಿದ್ದರು: ತೋಟದಲ್ಲಿನ ಹೂವು ಕದಿಯಲು ಭಯಂ ಕರ ಕಳ್ಳರು ಬರುವರು. ಅವರನ್ನು ಹಿಡಿದು ಕೊಲ್ಲಬೇಕೆಂದು ಅವರು ಕೂತಿದ್ದ ರಲ್ಲವೆ ?

ಸುಮಾರು ಸಮಯ ಕಳೆದರೂ ಯಾವ ಘಟನೆಯೂ ನಡೆಯಲಿಲ್ಲ. ಬರ ಬರುತ್ತ ಏನೂ ಘಟಿಸುವಂತೆಯೇ ಕಂಡುಬರಲಿಲ್ಲ. ಚಂದ್ರ ಹೆಚ್ಚು ಬೆಳಕು ಬೀರಹತ್ತಿದ್ದ. ಕಪ್ಪೆಗಳೂ—ಗಿಡಗಳಲ್ಲಿನ ಹುಳುಗಳೂ ಕಿರ್ ಕಿಟರ್ ಎಂದು ಸದ್ದು ಮಾಡುತ್ತಿದ್ದವು, ಗುಂಗಾಡುಗಳೂ ಹಿಂದೆ ಬಿದ್ದಿರಲಿಲ್ಲ. ಕೈಯಿಂದ ಓರೆ ಮಾಡಿ ಹಿಡಿದ ಟೊಂಗೆಯೊಂದು ಮುಖಕ್ಕೆ ಬಲವಾದುದೊಂದು ಪೆಟ್ಟು ಕೊಟ್ಟಿತು. ಚಂದ್ರ ಓಡಿಹೋಗುತ್ತಿರುವಂತೆ ಕಂಡಿತು.

ದೂರದಲ್ಲಿ ಎಲ್ಲಿಯೋ ಒಂದು ನಾಯಿ ಬೊಗಳುತ್ತಿತ್ತು. ಅದರಾಚೆಗೆ

ದಾರಿಯ ಮೇಲೆ ಮಾಲು ಮೋಟಾರೊಂದು ಕರ್ಕಶವಾದ ಸಪ್ಪಳ ಮಾಡುತ್ತ ಸಾಗಿದುದೂ ಕೇಳಬರುತ್ತಿತ್ತು. ಆ ಸಪ್ಪಳದ ಮೇಲಿಂದ ಆ ಮೋಟಾರು ತಯಾರಿಸಿದ ಕಂಪನಿಯ ಬಗೆಗೆ ತರ್ಕಿಸುತ್ತ ಕೆಲ ನಿಮಿಷಗಳನ್ನು ಕಳೆದ ವಿಲಾಸರಾಯ. ಅದೇ ವೇಳೆಗೆ ಆತನ ಕುತ್ತಿಗೆಯ ಕೆಳಗೆ ಏನೋ ಇಳಿದು ಹೋಗುವಂತೆ ಕಂಡಿತು. ಅವನೇನು ಹಗಲಿನಲ್ಲಿ ಜೇನುಹುಳುಗಳನ್ನು ಕಂಡಿರ ಲಿಲ್ಲವೆ? ಅದೇ ಇರಬಹುದು. ಅದನ್ನು ಹಿಡಿದು ತೆಗೆದೊಗೆಯಹೋದರೆ ಅದು ಕಡಿಯಬಹುದು, ಹಾಗೇ ಕೈಯಿಂದ ಒಂದೇಟು ಹೊಡೆಯಬಹುದಾದರೂ ಆ ಸಪ್ಪಳದಿಂದ ಆ ಕ್ರೂರ ಜನರು ಜಾಗ್ರತರಾಗಬಹುದು.

ಅಂಗಿಯಲ್ಲಿ ಸೇರಿದ್ದ ಆ ಪ್ರಾಣಿ ಅವನನ್ನು ಕಡಿಯುತ್ತಿರಲಿಲ್ಲ,ಅದೊಂದು ಸುದೈವ, ಸಮಾಧಾನದ ಮಾತೂ ಹೌದು.

ಮೊದಲು ಬೊಗಳುತ್ತಿದ್ದ ನಾಯಿಯ ಸ್ವರಕ್ಕೆ ತನ್ನ ಸ್ವರವನ್ನೂ ರಾಗ ದಂತೆ ಸೇರಿಸಲೆಂದು ಇನ್ನೊಂದು ನಾಯಿಯೂ ಅಳಹತ್ತಿತ್ತು. ಇಂಥ ರಾಗ ಕೇಳಿದೊಡನೆ ಶ್ರೀಮಂತರಾದವರಿಗೆ ಬೆದರಿಕೆಯಾಗುವದು ಸಹಜ. ಏನೋ ಅನಿಷ್ಟ ಬರಲಿದೆ, ಎಂದು ಅನ್ನಿಸುವದೂ ಸಹಜ.

ವಿಲಾಸರಾಯನ ಧೈರ್ಯ ಮಾಯವಾಗಹತ್ತಿತು. ದಣಿದಂತೆ ಭಾಸ ವಾಗಿ ಅವನ ವಿಚಾರ ಮುಂದೆ ಹರಿಯಲಾರದಾಯಿತು. ಈ ಸಾಹಸವನ್ನು ತೊರೆದು ಮನೆಗೆ ತಿರುಗಿ ಹೋಗುವ ವಿಚಾರ ಬರುತ್ತಿದ್ದಂತೆಯೇ ಯಾರೋ ಮಾತನಾಡುವ ಧ್ವನಿ ಕೇಳಬಂದಿತು. ಹುಡುಗತನ ಮತ್ತೊಮ್ಮೆ ಅವನಲ್ಲಿ ಉದಯವಾಯಿತು.

ಆತ ಕಂಟಿಯಲ್ಲಿ ಇನ್ನಿಷ್ಟು ಅಡಗಿದ. ಒಬ್ಬ ಗಂಡಸು ಬರುತ್ತಿದ್ದುದು ಅಸ್ಪಷ್ಟವಾಗಿ ಕಾಣಿಸಿತು. ಹೌದು, ಅವನೇ ಆ ಮನುಷ್ಯ! ಅವನ ಸಹಾ ಯಕಳೊಂದಿಗೆ ಬರುತ್ತಿದ್ದಾನೆ. ಅವರಿಬ್ಬರೂ ತೀರ ಸನಿಯದಲ್ಲೇ ಹಾದು ಮುಂದುವರೆದರು. ಅವನು ಮುಂದೆ ಕೈ ಚಾಚಿದ್ದರೆ ಅವರ ಕಾಲುಗಳು ಸಿಕ್ಕಿ ಬಿಡುತ್ತಿದ್ದವು.

ಅವನ ಸಹಾಯಕಳು ಮಾತಾಡಿದ ಶಬ್ದ ಕಿವಿಗೆ ಬಿದ್ದೊಡನೆ ತನ್ನ ಸಾಹಸದಲ್ಲಿ ವಿಜಯ ಸಿಕ್ಕಿತೆಂದೇ ಆನಂದವಾಯಿತು, ವಿಲಾಸರಾಯನಿಗೆ. ಅವನು ತಾಳಿದ್ದ ಸಂಶಯ ಮೂರ್ತಿಮತ್ತಾಗಿ ವಿಜಯೋನ್ಮಾದದಿಂದ ಕುಣಿಯ

ಹತ್ತಿತು. ಸಹಾಯಕಳು ಅನ್ನುತ್ತಿದ್ದುದು: "ಮೂರೂಸಂಜೆಯ ಮುಂದೆ ನಾನು ಗಾಬರಿಯಾಗಿದ್ದೆ........"

ಅವಳ ಧ್ವನಿ ಮಧುರವೂ ಸೌಮ್ಯವೂ ಆಗಿತ್ತು. ಮಧುರ ಧ್ವನಿಗಳ ಹಿಂದೆಯೇ ಕ್ರೂರತನ ಅಡಗಿರುತ್ತದಲ್ಲವೆ? ಅವಳ ಮುಂದಿನ ಶಬ್ದಗಳು: ಆ ವರದಿಗಾರರ ಪೈಕಿ ಯಾರಾದರೊಬ್ಬರು ಇಲ್ಲಿಗೆ ಬಂದು ನೋಡುವರೇನೋ ........?"

"ಇಲ್ಲಿ, ಎಂದರೆ ಎಲ್ಲಿ? ಓ, ಅದೇ ಇರಬೇಕು, ಔಟ ಹೌಸ್. ಈಗಾಗಲೇ ವಿಲಾಸರಾಯ ಆ ಔಟ ಹೌಸ್ ನೋಡಿ ಅದರ ಬಗ್ಗೆ ಸಂಶಯ ತಳೆದಿದ್ದ. ತನ್ನ ಹೊಟ್ಟೆಯಲ್ಲಿ ಏನೋ ಬಚ್ಚಿಟ್ಟುಕೊಂಡು ಅದು ವಿಲಾಸರಾಯನನ್ನೇ ನೋಡುತ್ತಿರಲಿಲ್ಲವೆ?

"ಕದೀಮ—ಕದೀಮ ಅಂತ ಬೆಕ್ಕನ್ನು ಕೂಗುತ್ತ ನಾನು ಓಡಿದೆ. ಪುಣ್ಯಕ್ಕೆ ನನ್ನ ಕೂಗಿಗೆ ಬೆಕ್ಕು ಅದೇ ನಿಟ್ಟಿನಿಂದ ಬಂತು...."

ವಿಲಾಸರಾಯ ಅಡಗಿದ್ದ ಕಂಟಿಯ ಕಡೆಗೇ ಮಾತಾಡುತ್ತಿದ್ದ ಆ ಸಹಾಯಕಳು ನೋಡಹತ್ತಿದ್ದಳು. ಅವಳ ಮಾತು ಕೇಳಿದೊಡನೆ ವಿಲಾಸರಾಯ ಅಲುಗಾಡಿದುದರಿಂದ ಕಂಟಿಯಲ್ಲಿ ಸಪ್ಪಳವಾಗಿತ್ತು. ಅಂತೆಯೇ ಅವಳ ಲಕ್ಷ್ಯ ಅತ್ತ ಹರಿದಿತ್ತು. ಅವನು ಆಗ ಗಡಗಡನೆ ನಡುಗಿದ. ಸಮಯ ದಾಟಿ ಹೋಯಿತು. ಆವರಿಬ್ಬರೂ ಮುಂದೆ ಸಾಗಿದ್ದರು. ಕದೀಮನೆಂದರೆ ಯಾರು? ಕದೀಮ........ಅವರ ಗುಂಪಿನ ಬೇರೊಬ್ಬ ವ್ಯಕ್ತಿಯೇ ಇರಬೇಕೆಂದು ವಿಲಾಸರಾಯನಿಗೆ ನಿಶ್ಚಿತವಾದಂತಾಯಿತು. ಇನ್ನೂ ಎಷ್ಟು ಜನರಿರುವರೋ ಏನೋ ಆ ಗುಂಪಿನಲ್ಲಿ!

"ಇನ್ನೊಬ್ಬವ ಆ ಕೋಣೆಯ ಕಿಟಕಿಯಲ್ಲಿ ಇಣಿಕಿ ಹಾಕುವವನಿದ್ದ...." ಸಹಾಯಕಳೆನ್ನುತ್ತಿದ್ದಳು.

ಆ ಕೋಣೆಯಲ್ಲಿ ಏನನ್ನೋ ಬಚ್ಚಿಡಲಾಗಿದೆ, ಲೂಟಿಯಿರಬಹುದೇ? ಎಂದು ವಿಲಾಸರಾಯ ಯೋಚಿಸುತ್ತಿದ್ದಂತೆ ಸಹಾಯಕಳ ಮಾತುಗಳನ್ನೂ ಕೇಳಹತ್ತಿದ್ದ.

"ಅಷ್ಟರಲ್ಲಿ ಅವನನ್ನು ಒಂದು ಜೇನುಹುಳು ಕಚ್ಚಿತು...."

ಅವಳ ಮಾತು ನಿಂತಿತ್ತು. ತುಸು ಸಮಯದ ನಂತರ ಅವಳೇ,

"ಬನ್ನಿರಿ, ಒಳಕ್ಕೆ ಹೋಗಿ ಒಂದೆರಡು ಬಾಳೆಯಹಣ್ಣುಗಳನ್ನು ತರೋಣ" ಎಂದಳು. ಅವರಿಬ್ಬರೂ ಮನೆಯತ್ತ ಹೋದರು. ವಿಲಾಸರಾಯನಿಗೆ ವಿಪರೀತ ಭಯವೆನ್ನಿಸಿತು. ಬಾಳೆಯ ಹಣ್ಣುಗಳೇಕೆ ಬೇಕು? ಅವರ ವಿಶಿಷ್ಟವಾದ ಗುಪ್ತ ಭಾಷೆಯಲ್ಲಿ ಪಿಸ್ತೂಲಿಗೆ ಬಾಳೆಯ ಹಣ್ಣು ಎಂದು ಕರೆಯುತ್ತಿರುವರೋ ಏನೋ? ಹೌದು, ಹಾಗೆಯೇ ಇರಬೇಕು ಎಂದು ಅವನು ತರ್ಕಿಸಿಕೊಂಡ.

ಅದರ ಬಗೆಗೆ ವಿಚಾರ ಮಾಡಲು ಸಮಯವೂ ಇರಲಿಲ್ಲ. ರಹಸ್ಯಗಳಿಂದ ಕೂಡಿದ ಆ ಕೋಣೆಯನ್ನು ಪ್ರವೇಶಿಸಿ ಅಲ್ಲಿರುವದನ್ನು ಪ್ರತ್ಯಕ್ಷವಾಗಿ ನೋಡಲು ಇದಕ್ಕೂ ಹೆಚ್ಚು ಅನುಕೂಲವಾದ ಸಮಯ ಬರುವುದಾದರೂ ಹೇಗೆ? ಆ ಹುಡುಗಿ ಔಟ ಹೌಸದ ಬೀಗ ತೆರೆದುದನ್ನೂ ಆತ ಕಂಡಿದ್ದ. ಹತ್ತೆಂಟು ಹೆಜ್ಜೆ ಹೋದರೆ ಸಾಕು, ಆ ಕೋಣೆಯಲ್ಲೇ ಸೇರಿಬಿಡಬಹುದು. ತುಸು ಧೈರ್ಯದ ಅವಶ್ಯಕತೆ ಮಾತ್ರ ಇತ್ತು. ವಿಶೇಷ ಶ್ರಮಪಟ್ಟು ಧೈರ್ಯ ತಂದುಕೊಂಡ. ಕಂಟಿಯೊಳಗಿಂದ ಹೊರಕ್ಕೆ ಬಂದು ಆ ಕೋಣೆಯತ್ತ ಧುಮ್ಮಿಕ್ಕಿದ. ಬಾಗಿಲ ತುಸು ಓರೆ ಮಾಡಿ ಒಳಕ್ಕೆ ದೃಷ್ಟಿ ಬೀರಿದ. ಆ ಕ್ಷಣದಲ್ಲೇ ಅವನ ಕಾಲಿಗೆ ಏನೋ ತಾಕಿತು.

ಕಾಲೋಚಿತವಾಗಿಯೂ ಸಮಯಾನುಸಾರವಾಗಿಯೂ. ಎಲ್ಲರನ್ನೂ ಆಶ್ಚರ್ಯಗೊಳಿಸುವಂಥ ಕೆಲವು ಕೃತಿಗಳು ಮನುಷ್ಯನಿಂದ ನಡೆದು ಹೋಗುತ್ತವೆ. ವಿಲಾಸರಾಯ ಪುಕ್ಕನೇನೂ ಆಗಿರಲಿಲ್ಲ. ಒಮ್ಮೆ ಆತನ ಕಾರು ಬಕ್ಕ ಬೋರಲಾಗಿ, ಅವನ ಕೈ ಮುರಿದು ಹೋಗಿದ್ದರೂ ಬೇರೆಯವರು ಬಂದು ಕಾರನ್ನೆತ್ತುವ ವರೆಗೂ ಆತ ಬಿದ್ದ ಸ್ಥಳದಲ್ಲೇ ಬಿದ್ದಿದ್ದ! ಅವನನ್ನು ಪುಕ್ಕನೆಂದೇ ಕರೆಯುವ ಜನರೇ ಬಹಳ. ಆದರೆ, ಈಗಿನ ಪ್ರಸಂಗವೇ ಬೇರೆಯಾಗಿತ್ತು. ಆ ಕತ್ತಲೆಯಲ್ಲೇ ಆತ ಮೇಲಕ್ಕೆ ಜಿಗಿದ. ಆತನ ಸ್ಥೂಲ ದೇಹ ಪತಂಗದಂತೆ ಹಾರಿತು.

ಆಕಸ್ಮಿಕವಾಗಿ ಬರಬಹುದಾದ ಸಂಕಟಗಳನ್ನೂ ತೊಂದರೆಗಳನೂ ಎದುರಿಸಲೆಂದು ಆತ ಪಿಸ್ತೂಲನ್ನು ಸಿದ್ಧಗೊಳಿಸಿಯೇ ಹಿಡಿದುಕೊಂಡಿದ್ದ. ಅವನು ಮೇಲೆ ಜಿಗಿಯುತ್ತಿದ್ದಂತೆ ಅದು 'ಢಂ' ಎಂದಿತು. ಆತ ಹಿಂದಕ್ಕೆ ಹಾರಿ

ಕತ್ತಲೆಯಲ್ಲಿ ಮಾಯವಾಗಿ ಆ ಕೋಣೆಯಿಂದ ತುಸು ದೂರ ಬಂದು ಕಂಟಿ ಗಳ ಮರೆಯಲ್ಲಿ ಅಡಗಿ ಕುಳಿತ.

ಕದೀಮ ಬೆಕ್ಕು ಸಲುಗೆಯಿಂದ ವಿಲಾಸರಾಯನ ಹತ್ತಿರ ಹೊರಟಿತ್ತು. ಅವನಿಂದ ಸಿಕ್ಕಿದ ಸ್ವಾಗತಕ್ಕೆ ಬೆದರಿ ಆ ಕೋಣೆಯ ಚಪ್ಪರದ ಮೇಲೇರಿ ಕುಳಿತು ತನಗಾದ ಅಸಮಾಧಾನವನ್ನು 'ಮೆಂವ್—ವ್ಯಾಂವ್' ಎಂದು ವ್ಯಕ್ತಪಡಿಸಿತು. ವಿಲಾಸರಾಯ ಹಾಗೆ ವರ್ತಿಸಿದ್ದುದರ ಕಾರಣ ಕದೀಮನಿಗೆ ಗೊತ್ತಾಗಲಿಲ್ಲ; ಅದೇಕೆ ಯಾರಿಗೂ ಗೊತ್ತಾಗುವಂತಿರಲಿಲ್ಲ.

## ೧೮

ಹನುಮನ ಬಾಲ ಹಿಡಿದು ಅದರ ಮೃತ ದೇಹವನ್ನು ಮೇಲಕ್ಕೆತ್ತಿ ಕಟ್ಟಿಗೆಯ ಕೋಣೆಯ ಬಾಗಿಲಲ್ಲಿ ರಾಜಾಸಾಹೇಬ ನಿಂತಿದ್ದ. ಅದೊಂದು ಗಂಭೀರ ಸಮಯ. ಲೀಲಾರಾಣಿಯ ಸಾಕುಮಂಗ ಹನುಮನ ಜೀವ ಇಹಲೋಕ ಬಿಟ್ಟುಹೋದುದು ಖಂಡಿತವಾಗಿತ್ತು.

ವಿಲಾಸರಾಯನ ಪಿಸ್ತೂಲಿನ ಗುಂಡು ತನ್ನ ಕರ್ತವ್ಯವನ್ನು ಪೂರ್ಣಗೊಳಿಸಿತು. ಹನುಮನ ಸಾಹಸಮಯ ಜೀವನದ ಸಮಾಪ್ತಿಯಾಗಿತ್ತು. ಆ ಗುಂಡು ಹನುಮನ ದೇಹದೊಳಗಿಂದ ಪಾರಾಗಿ ಹೋಗಿತ್ತು.

ಪ್ರಮಿಲೆಯ ತುಟಿ ನಡುಗುತ್ತಿದ್ದವು. ಆ ಬೆಳದಿಂಗಳಿನ ಬೆಳಕಿನಿಂದ ಅವಳ ಮುಖ ಇನ್ನಷ್ಟು ಬೆಳ್ಳಗೆ ಕಂಡಿತು. ಅವಳು ಮೃದುಹೃದಯದ ಸ್ತ್ರೀ! ಯಾರೋ ತನ್ನ ಮನೆಯ ಆವರಣದಲ್ಲಿ ಪಿಸ್ತೂಲುಧಾರಿಗಳಾಗಿ ಪ್ರವೇಶಿಸಿದುದರ ಅರಿವಾಗುತ್ತಲೂ ಅವಳ ಮನಃಸ್ವಾಸ್ಥ್ಯವೇ ಉಳಿಯಲಿಲ್ಲ.

"ಹಾಯ್, ಅಣ್ಣಾಸಾಹೇಬ! ಪಾಪ, ಈ ಬಡಪ್ರಾಣಿ........! ಹೀಗೆ ಯಾರು ಮಾಡಿರಬೇಕು?"

ರಾಜಾಸಾಹೇಬ ಉತ್ತರವನ್ನೀಯುವ ಸ್ಥಿತಿಯಲ್ಲಿರಲಿಲ್ಲ. ಅವಳು ಆತನ ಕೈ ಹಿಡಿದಿದ್ದಳಲ್ಲವೆ? ಈಗಲೂ ಬಿಗಿಯಾಗಿಯೇ ಹಿಡಿದಿದ್ದಳು.

"ಯಾರು ಮಾಡಿರಬೇಕು ?" ಅವನ ಮರುಪ್ರಶ್ನೆ. ತುಸು ಯೋಚಿಸಿ, "ಯಾರೋ ಮಾಡಿರಬೇಕು. ಅಕಸ್ಮಾತ್ತಾಗಿ ಗುಂಡು ಹಾರಿರಬೇಕು." ಎಂದ.

"ಅವನು ಪಿಸ್ತೂಲಿನೊಡನೆ ಇಲ್ಲಿಗೆ ಬರುವ ಕಾರಣವಾದರೂ ಏನು ?"

ಈ ಪ್ರಶ್ನೆಯಿಂದ ಅವನು ಗೊಂದಲದಲ್ಲಿ ಬಿದ್ದ:

"ಅಂದರೆ........? ಅವನಲ್ಲಿ ಪಿಸ್ತೂಲು ಇತ್ತು. ಕೈಯಲ್ಲಿ ಹಿಡಿದಿದ್ದ. ಏನು, ಹಾಗೆ ಆತ ಹಿಡಿಯಬಾರದಾಗಿತ್ತೇ ? ಇಲ್ಲಿ ವಾಸಿಸುವ ಎಲ್ಲರ ಹತ್ತಿರವೂ ಪಿಸ್ತೂಲುಗಳಿವೆ."

ಮುಂಬಯಿ ನಗರದಲ್ಲಿ ಸಿದ್ಧವಾದ ಅನೇಕ ಚಿತ್ರಪಟಗಳನ್ನು ಆತ ನೋಡಿದ್ದ. ಅವುಗಳಲ್ಲಿಯ ಪಾತ್ರಧಾರಿಗಳು ಅನೇಕರು ಪಿಸ್ತೂಲುಧಾರಿಗಳು. ಅಂತೆಯೇ ಮುಂಬಯಿಯಲ್ಲಿರುವ ಎಲ್ಲರ ಹತ್ತಿರವೂ ಪಿಸ್ತೂಲುಗಳಿರಬೇಕೆಂದೇ ಆತ ಭಾವಿಸಿದ್ದ.

"ಅವನೊಬ್ಬ ದರೋಡೆಖೋರನಿರಬೇಕು; ಈ ಭಾಗದಲ್ಲಿ ಅನೇಕ ದರೋಡೆಗಳೂ ಆಗಿವೆ." ಪ್ರಮೀಲೆಯೆಂದಳು.

"ದರೋಡೆಖೋರರು ಕಟ್ಟಿಗೆಯ ಮನೆಗಳಲ್ಲೇನು ಕದಿಯುವರು ? ನೀವು ಹೇಳುವುದು ಸರಿಯಾಗಿ ಕಾಣುತ್ತಿಲ್ಲ. ಭ್ರಾಮಕ ಕಲ್ಪನೆ. ಅವನೊಬ್ಬ ಸಿ. ಐ. ಡಿ. ಇರಬೇಕು. ನಿರುಪಯೋಗಿ ವಸ್ತು ಮತ್ತು ಮನೆಗಳಲ್ಲಿ ಇಣಿಕಿ ನೋಡುವದು ಅವರ ಸ್ವಭಾವ, ಅಲ್ಲವೆ ?"

"ಹಾಗಿದ್ದರೆ ನಾವಿಬ್ಬರೂ ಮಾತಾಡುತ್ತಿದ್ದಾಗ ಅವನು ಅತಿ ಸಮೀಪದಲ್ಲಿ ನಿಂತಂತಾಯಿತಲ್ಲ, ಅಣ್ಣಾಸಾಹೇಬ ?"

ರಾಜಾಸಾಹೇಬ ಸುತ್ತಲೂ ಹೊರಳಿ ನೋಡಿದ. ಎಲ್ಲೆಲ್ಲಿಯೂ ಶಾಂತತೆಯಿತ್ತು. ಕಪ್ಪೆ-ಹುಳುಗಳ ಸಪ್ಪಳದ ಹೊರತು ಬೇರಾವ ಸಪ್ಪಳವೂ ಕೇಳಬರುತ್ತಿರಲಿಲ್ಲ. ಸಂಶಯಾಸ್ಪದ ನೆರಳೂ ಕಾಣಲಿಲ್ಲ. ಗಿಡಗಂಟಿಗಳಲ್ಲಿ ಸೂಕ್ಷ್ಮವಾಗಿ ನೋಡಿದರೆ ಯಾರೂ ಕಂಡುಬರಲಿಲ್ಲ.

"ಅವನಂತೂ ಓಡಿಹೋದ. ನಾವು ಮುಂದೇನು ಮಾಡುವದು ?"

ಪ್ರಮೀಲೆಯ ದೃಷ್ಟಿ ಮಂಗನ ಕಡೆಗೆ ಹೋಯಿತು. ತುಸು ನಡುಗಿದಳು.

ಪಾಪ, ಜೀವವಿದ್ದಾಗ ಹಾರಾಡಿದ ಹನುಮ ದಣಿದು ನಿದ್ರೆ ಮಾಡುತ್ತಿದ್ದಂತೆ ಕಂಡಿತು. ನಿದ್ರೆಯಲ್ಲಿದ್ದವರ ನಿಶ್ಚಿಂತ ಮುಖಮುದ್ರೆ ಮಾತ್ರ ಅದಕ್ಕಿರಲಿಲ್ಲ.

"ಇದನ್ನೇನು ಮಾಡುವದು ?" ಆಕೆ ಕೇಳಿದಳು.

"ಪಾಪ, ಹನುಮನಿಗೆ 'ಅದು' 'ಇದು' ಎನ್ನುವದು ಬೇಡ. 'ಅವನು' ಎಂದೇ ಕರೆಯೋಣ. ಅವನನ್ನು ಹುಗಿದು ಬಿಡುವದೇ ಒಳಿತು. ಮನೆಯಲ್ಲಿ ಗುದ್ದಲಿ ಇದೆಯೇ ?"

"ಇಲ್ಲ........"

ರಾಜಾಸಾಹೇಬನಿಗೆ ಯೋಚನೆಗಿಟ್ಟುಕೊಂಡಿತು.

"ಬೇರೆ ಯಾವುದರಿಂದಲಾದರೂ ತಗ್ಗು ತೋಡುವದಾದರೆ ಒಂದು ವಾರ ಬೇಕಾದೀತು. ನಾವು ಚಿಕ್ಕವರಿದ್ದಾಗ ನಮ್ಮ ಗೆಳೆಯನೊಬ್ಬ ಧಾರವಾಡಕ್ಕೆ ಹೋಗಿ ಬರುವ ಸೂಚನೆ ತಂದ. ರೈಲು ಅಥವಾ ಮೋಟಾರು ಅಥವಾ ರಾಜಮಾರ್ಗಗಳಿಂದ ನಡೆಯುತ್ತ ಹೋದರೆ—ಪರಿಚಯದವರು ಹೋಗಿ ಬರುವ ದಾರಿಗಳು ಅವೆಲ್ಲ. ಅದರಿಂದ ಮನೆಯವರಿಗೆ ಗೊತ್ತಾಗದಿದ್ದೀತೇ ? ಆದಕ್ಕಾಗಿ ಚಾಕುವಿನಿಂದ ನೆಲದಲ್ಲಿ ದಾರಿ ಮಾಡಲು ಆತ ನನಗೆ ಸೂಚಿಸಿದ. ನಾನು ನಕ್ಕು ಬಿಟ್ಟೆ. ಅವನು ನನ್ನನ್ನು ಚೆನ್ನಾಗಿ ಥಳಿಸಿದ್ದುದೂ ನೆನಪಿನಲ್ಲಿದೆ. ನಾನೂ ಅದಕ್ಕಾಗಿ ಒಂದೆರಡು ದಿನ ಪ್ರಯತ್ನವನ್ನೂ ಮಾಡಿದ್ದೆ. ಅಬ್ಬ, ಎಂಥ ಭಯಂಕರ ಅನುಭವವದು !" ಎನ್ನುತ್ತ ಶವವನ್ನು ಹುಲ್ಲಿನ ಮೇಲಿಟ್ಟು ಕೆಲ ನಿಮಿಷ ಅದನ್ನೇ ನೋಡಿ, "ಪತ್ತೇದಾರಿ ಕಾದಂಬರಿಗಳಲ್ಲಿ ಬರುವ ವ್ಯಕ್ತಿಗಳ ಮುಂದೆಯೂ ಇದೇ ಪ್ರಶ್ನೆ: 'ಈ ಶವವನ್ನು ಏನು ಮಾಡುವದು ?' ಎಂದು. ಕೊಲೆಯನ್ನೇನೋ ಮಾಡಿ ಮುಗಿಸುತ್ತಾರೆ. ಅನಂತರ ಶವದ ವಿಚಾರವಾಗಿ ತೊಂದರೆಪಡುತ್ತಾರೆ." ರಾಜಾಸಾಹೇಬನೆಂದ.

"ನಾವೂ ಕೊಲೆ ಮಾಡಿರುವಂತೆ ಮಾತಾಡುತ್ತಿರುವಿರಲ್ಲ, ಅಣ್ಣಾ ಸಾಹೇಬ ?"

"ಹೌದು........"

"ನಾನೊಂದು ಪುಸ್ತಕದಲ್ಲಿ ಓದಿದ್ದುದು ನೆನಪಾಗುತ್ತಿದೆ; ಯಾವನೋ ಒಬ್ಬ ಕೊಲೆ ಮಾಡಿ ಆ ಶವವನ್ನು ಬಚ್ಚಲದಲ್ಲಿಟ್ಟು ಅದರ ಮೇಲೆ ಸಲ್ಫ್ಯೂರಿಕ್ ಆಸಿಡ್ ಹಾಕಿ ಕರಗಿಸಲು ಪ್ರಯತ್ನಿಸಿದ್ದ........"

"ಸಾಕು, ನಿಮ್ಮ ಪುಸ್ತಕದ ಮಾತಿನಿಂದ ನನಗೆ ಬೇಜಾರು ಬರುತ್ತದೆ."

"ಅದೊಂದು ಸೂಚನೆ....ಮಾತ್ರ" ಅಸಮಾಧಾನದಿಂದ ರಾಜಾಸಾಹೇಬ ನುಡಿದ.

"ಇನ್ನೇನಾದರೂ ಸೂಚಿಸಿರಿ."

"ಅವನನ್ನು ಲೀಲಾರಾಣಿಯ ಮನೆಯ ಕಟ್ಟೆಯ ಮೇಲೆ ಚೆಲ್ಲಿದರೆ ? ಹಾಲಿನವರು ನಾಳೆಗೆ ಬಂದು ನೋಡಿ ಹೇಳಿದ ನಂತರವೇ ಅವರಿಗೆ ಗೊತ್ತಾಗ ಬಹುದು."

"ಅಷ್ಟೊಂದು ಧೈರ್ಯ ನನ್ನಲ್ಲಿ ಬರಲಾರದು, ಅಣ್ಣಾಸಾಹೇಬ...."

"ನಾನೇ ಮಾಡುವೆ. ನೀವೇನೂ ಬರಬೇಕಾಗಿಲ್ಲ...."

"ನಿಮ್ಮನ್ನು ಬಿಟ್ಟು ನಾನಿರಲಾರೆ........"

"ಸರಿ."

"ಅಲ್ಲದೆ ನನಗೀಗ ವಿಪರೀತ ಹೆದರಿಕೆಯಾಗಿದೆ. ಈಗ ನಾನೊಬ್ಬಳೇ ನನ್ನ ಹಾಸುಗೆಯ ವರೆಗೂ ಹೋಗಲಾರೆ. ಹಾಸಿಗೆ ಸೇರಿ ಹೊದಿಕೆಯಿಂದ ಪೂರ್ತಿ ಮುಖ ಮುಚ್ಚಿಕೊಳ್ಳುವ ತನಕ ನನಗೆ ಧೈರ್ಯ ಬರಲಾರದು. ನನ್ನ ದೇಹದಲ್ಲಿ ನಡುಕ ಹುಟ್ಟಿದೆ. ಅಂಥದರಲ್ಲಿ ನೀವು ನನ್ನನ್ನು ಲೀಲಾರಾಣಿಯ ಬಾಗಿಲ ತನಕ ಒಯ್ಯುವದನ್ನು ಕೇಳಿಯಂತೂ ನನ್ನ ಕೈಕಾಲುಗಳೇ ಹೋದಂ ತಾಗಿವೆ."

"ಹೋಗದಿದ್ದರೆ ಅವನ ವಿಚಾರವೇನು ?"

"ಅದಕ್ಕೆ ಅವನು ಎಂದು ಕರೆಯಲು ನಾನು ಸಿದ್ಧಳಿಲ್ಲ."

"ನಾನು ಇನ್ನೊಂದು ಕಡೆ ಓದಿದ್ದೇನೆ. ಇಬ್ಬರು ಕೂಡಿ ಒಂದು ಶವ ವನ್ನು ಪಿಯಾನೋದ ಪೆಟ್ಟಿಗೆಯಲ್ಲಿ ತುರುಕಿ ಬಿಟ್ಟಿದ್ದರು."

"ನೀವಂತೂ ಭಯಂಕರ ಪುಸ್ತಕಗಳನ್ನೇ ಓದಿದಂತಿದೆ."

"ನಾನು ಓದುವ ಪುಸ್ತಕಗಳಲ್ಲಿ ರೋಮಾಂಚಕಾರಿ ಘಟನೆಗಳಿದ್ದರೆ ನನಗೆ ಹಿಡಿಸುತ್ತಿದೆ. ಆದಿರಲಿ, ಪಿಯಾನೋ ಪೆಟ್ಟಿಗೆಯಲ್ಲಿ ತುರುಕುವ ವಿಚಾರ........?"

"ಇತ್ತಿತ್ತಲಾಗಿ ನಮ್ಮ ಗಂಡಸರೆಂದರೆ ಮಾತಾಡುವ ಯಂತ್ರಗಳಾಗುತ್ತಿ ದ್ದಾರೆ...."

"ನಾನು ಇನ್ನೊಂದು ಕಥೆಯಲ್ಲಿ........"

"ನೀವು ಓದಿರುವ ಎಲ್ಲ ಕಥೆಗಳನ್ನು ಮರೆತು ಬಿಡಿರಿ, ಅಣ್ಣಾಸಾಹೇಬ. ನಿಮಗೇನಾದರೂ ಉಪಾಯ ಹೊಳೆಯುತ್ತಿದ್ದರೆ ಹೇಳಿರಿ."

"ಅದನ್ನು ತುಂಡರಿಸಿ ಬಚ್ಚಲು ಮನೆಯ ನೆಲದಲ್ಲಿ ಹುಗಿದುಬಿಡೋಣ. ಹೆಂಡಂದಿರ ಕೊಲೆ ಮಾಡಿದ ಕೆಲವರು ಹಾಗೆ ಮಾಡುವದುಂಟು...."

ಪ್ರಮೀಲೆಯ ಎದೆಯಲ್ಲಿ ತಣ್ಣೀರನ್ನೆರಚಿದಂತಾಯಿತು.

"ಬೇರೆಯೇನಾದರೂ........"

"ನನಗೆ ಹೊಳೆಯುವದೆಂದರೆ ಅದನ್ನೊಯ್ದು ದಾರಿಯ ಮೇಲೆ ಚೆಲ್ಲಿ ಬಿಡುವದು. ಅವನ ಮೇಲೆ ಲೀಲಾರಾಣಿಯದು ಬಹಳ ಪ್ರೀತಿ, ದಾರಿಯ ಮೇಲೆ ಚೆಲ್ಲಿದರೆ ಅವಳಿಗೆ ಅದು ಗೊತ್ತಾಗುವದಿಲ್ಲವಲ್ಲ? ಎಂಬುದೊಂದೇ ವಿಷಾದದ ಸಂಗತಿ. ಅದನ್ನು ದಾಟಿಸಿ ಬಿಡುವದೇ ನಮ್ಮ ಈಗಿನ ಉದ್ದೇಶ ವಲ್ಲವೆ?"

"ಅವೆರಡನ್ನೂ ಏಕಕಾಲಕ್ಕೆ ಸಾಧಿಸುವ ಉಪಾಯವೊಂದನ್ನು ನಾನು ಸೂಚಿಸುವೆ. ದಾರಿಯಲ್ಲಿ ಚಲ್ಲುವದಕ್ಕಿಂತ ಅವಳ ಬಂಗಲೆಯ ಆವರಣದಲ್ಲಿ ಬಿಸಾಕಿ ಬಿಡುವದು. ಆ ಮನೆ ತೆರವಾಗಿದ್ದಾಗ ನಾನು ಅದನ್ನು ನೋಡಿ ರುವೆ. ಮನೆಯ ಆವರಣದ ದಂಡೆಗೆ ಒಂದು ಮುರುಕು ಔಟ್ ಹೌಸ್ ಇದೆ. ಅಲ್ಲಿ ಯಾರೂ ಇರುತ್ತಿರಲಿಕ್ಕಿಲ್ಲ. ಅಲ್ಲಿ ಅದನ್ನು ಚಲ್ಲಬಹುದು. ಆನಂತರ ಬೇಕಾದರೆ ಅವಳಿಗೊಂದು ಅನಾಮಧೇಯ ಪತ್ರ ಬರೆದು ಹನುಮನ ಶವ ಅಲ್ಲಿ ರುವದನ್ನು ಅವಳಿಗೆ ತಿಳಿಸಬಹುದು. ಅದರ ವಿಚಾರ ಹಿಂದಿನಿಂದ ನಿರ್ಧರಿ ಸೋಣ."

"ಒಳ್ಳೆಯ ಉಪಾಯ. ನನ್ನೊಡನೆ ನೀವೂ ಬರುವಿರಾ ಪ್ರಮೀಲಾ ದೇವಿ?"

"ನನ್ನೊಬ್ಬಳನ್ನೇ ಇಲ್ಲಿ ಬಿಟ್ಟು ಹೋದರೆ ನಾನು ಗಾಬರಿಯಿಂದ ಕೂಗಿ ಬಿಡಬಹುದು. ನಡೆಯಿರಿ, ಹೋಗೋಣ...."

ಬಾಲವನ್ನು ಹಿಡಿದು ರಾಜಾಸಾಹೇಬ ಮಂಗವನ್ನೆತ್ತಿದ.

"ಒಂದು ಶವವನ್ನು ಒಬ್ಬ ಗುಡ್ಡವೊಂದರಲ್ಲಿ ತೆಗೆದುಕೊಂಡು ಹೊರಟ ದ್ದಾಗ........"

"ಅದೂ ನೀವು ಓದಿದ ಕಥೆ ತಾನೆ ? ಸಾಕು ಮಾಡಿರಿ."

ಅವರ ಮಾತುಗಳಲ್ಲಿನ ನಿರ್ಧಾರ, ಅವನ ಬಾಯಿ ಮುಚ್ಚಿಸಿತು. ಅವರಿಬ್ಬರ ನಡುವೆ ಮೇಲಿನಂತೆ ಸಂಭಾಷಣೆ ನಡೆದುದನ್ನು ಒಂದು ಕಂಟಿಯಮರೆಗೆ ಕುಳಿತು ವಿಲಾಸರಾಯ ಕೇಳುತ್ತಲಿದ್ದ. ಅವನು ಕುಳಿತ ಸ್ಥಳ ಸಿ. ಐ. ಡಿ· ಕೆಲಸಕ್ಕೆ ಯೋಗ್ಯವಾಗಿರಲಿಲ್ಲ. ಅವರಿಬ್ಬರೂ ನಿಂತ ಜಾಗದಿಂದ ಅದು ದೂರದಲ್ಲಿತ್ತು. ಅವರ ಮಾತು ಕೇಳಬರುತ್ತಿರಲಿಲ್ಲ. ರಾಜಾಸಾಹೇಬ ಕೈಯಲ್ಲಿ ಹಿಡಿದ ವಸ್ತುವನ್ನು ಗುರುತಿಸುವಷ್ಟು ಬೆಳಕೂ ಇರಲಿಲ್ಲ. ಅದೊಂದು ಚೀಲದಂತೆಯೇ ಕಾಣಿಸಿತು. ಈಗೇನೋ ಅದು ಬರಿದೂ ಆಗಿರಬಹುದು, ಹಗುರವೂ ಆಗಿದೆ; ಅದರಲ್ಲೇ ಇನ್ನು ತುಸು ಸಮಯದಲ್ಲಿ ಲೂಟಿಯಿಂದ ದೊರಕಿಸಿದ ಮಾಲು ತುಂಬುವರೆಂದು ಆತ ತರ್ಕಿಸಿದ. ತುಸು ವೇಳೆಯ ನಂತರ ಅವೆರಡೂ ವ್ಯಕ್ತಿಗಳು ಮಾತು ನಿಲ್ಲಿಸಿ ಲೀಲಾರಾಣಿಯ ಮನೆಯ ದಿಶೆಯನ್ನು ಹಿಡಿದು ಹೊರಟುದನ್ನು ಕಂಡು, ಈವರೆಗೆ ಅವನಿಗಿದ್ದ ಸಂಶಯಗಳೂ ಇಲ್ಲದಂತಾದವು. ಅವರು ದರೋಡೆಖೋರರೆನ್ನಲು ಸಂಶಯ ಉಳಿಯದಂತೆಯೇ ಎಲ್ಲ ಘಟನೆಗಳೂ ಕ್ರಮಬದ್ಧವಾಗಿ ಸಾಗಿದ್ದವಲ್ಲವೆ ?

ಲೀಲಾರಾಣಿಯ ಮನೆಯನ್ನು ಪರೀಕ್ಷಿಸಿದ್ದ ಆ ಮನುಷ್ಯ ಅವಳ ಮನೆಯಲ್ಲಿ ನುಗ್ಗುವನು. ಅವನ ಸಹಾಯಕಳು ಆ ಚೀಲದೊಂದಿಗೆ ಕಾಯ್ದು ನಿಲ್ಲುವಳು, ಎಂದು ಯೋಚಿಸುತ್ತಲೂ ವಿಲಾಸರಾಯನ ಹೃದಯದ ಹೊಡೆತಗಳ ವೇಗವೂ ಹೆಚ್ಚಿತು. ಕೈಯಲ್ಲಿನ ಪಿಸ್ತೂಲನ್ನು ಬಿಗಿಯಾಗಿ ಹಿಡಿದುಕೊಂಡು ಗಿಡಗಂಟಿಗಳ ಕತ್ತಲೆಯಲ್ಲಿ ಮರೆಯಾಗಿ ನಡೆದು ಆತ ಗೇಟಿನ ವರೆಗೆ ಬಂದ. ಆವೆರಡೂ ವ್ಯಕ್ತಿಗಳು ಆ ಕತ್ತಲೆಯಲ್ಲಿ ಗಿಡಗಂಟಿಗಳ ನೆರಳಲ್ಲಿ ದೂರ ಹೋಗಿದ್ದವು. ಆ ಕಳ್ಳರನ್ನು ಹಿಂಬಾಲಿಸಿ ಈತ ಮುಂದೆ ಸಾಗಿದ. ಸ್ವಲ್ಪ ಸಮಯ ಅವರು ಕಂಟಿಗಳ ಮರೆಗೆ ಕಾಣದಂತಾದರು, ಮತ್ತೊಮ್ಮೆ ಕಾಣಿಸಿದೊಡನೆ ಅವನಿಗಾದ ಆನಂದ ಹೇಳತೀರದು. ಅವನು ಕಂಟಿಗಳ ಆಸರೆಯನ್ನು ಬಯಸಿ ಅವುಗಳನ್ನು ಅಪ್ಪಿಕೊಂಡಿದ್ದನು! ಆಗ ಹದನವಾದ ಯಾವುದೋ ವಸ್ತು ಅವನ ಕಾಲು-ಮೊಳಕೈಗಳಿಗೆ ಚುಚ್ಚಿದಂತಾಗಿತ್ತು. ಅಲ್ಲದೆ ಅವನ ಬೆನ್ನಿನ ಮೇಲೆ ಪ್ರವಾಸ ಮಾಡುತ್ತಲಿದ್ದ ಆ ಹುಳುವೂ ತನ್ನ ಅಸ್ತಿತ್ವದ ನೆನಪು ತಂದು ಕೊಡಲು ಮರೆತಿರಲಿಲ್ಲ.

ಆ ಮನೆಗಳ ಸುತ್ತಲಿನ ಬಯಲು ಪ್ರದೇಶಕ್ಕೇ ಗುಡ್ಡವೆಂದು ಕರೆಯಬಹುದಾದಷ್ಟು ಕಲ್ಲು ಮತ್ತು ಗಿಡಗಂಟಿಗಳು ಅಲ್ಲಿ ಇದ್ದವು. ಹಾವಿನಂತೆ ಹಗುರು ಮತ್ತು ಚಪಲ ದೇಹವನ್ನು ವಿಲಾಸರಾಯ ಪಡೆದು ಬಂದಿರಲಿಲ್ಲವೇನೋ, ನಿಜ. ಆದರೂ ಸಾಧ್ಯವಿದ್ದ ಚಪಲತೆ ತಂದುಕೊಂಡು ಆ ಗುಡ್ಡದಲ್ಲಿ ಮುಂದೆ ಸಾಗಿದ್ದ. ಅನೇಕ ಕಂಟಿಗಳು ಆವನಿಗೆ ಅಡ್ಡ ಬಂದು ಸುತ್ತುಗಟ್ಟಿದೊಡನೆ ಆತ ನೆಲಕ್ಕೆ ಮೊಳಕಾಲನ್ನೂರಿ ಕೈಗಳಿಂದ ಅವನ್ನು ಓರೆ ಮಾಡಿ ದಾಟುತ್ತಿದ್ದ. ಬೇಟೆಗಾರರು ಹೊಟ್ಟೆ ಹೊಸೆಯುತ್ತ, ಅನೇಕ ತೊಂದರೆಗಳನ್ನು ಸಹಿಸುತ್ತ ತಮ್ಮ ಬೇಟೆಯ ಸಮೀಪಕ್ಕೆ ಹೋಗಬೇಕಾಗುವದೆಂದು ಓರ್ವ ಲೇಖಕ ಬರೆದಿದ್ದುದನ್ನು ಓದಿದಾಗ ವಿಲಾಸರಾಯ ಆ ಲೇಖಕನ ಬಗೆಗೆ ತಿರಸ್ಕಾರ ಭಾವ ತಾಳಿದ್ದ. ಆದರೆ ಈಗಿನ ಅನುಭವಗಳ ಆಧಾರದಿಂದ ಆ ಲೇಖಕನ ಮಾತಿನಲ್ಲಿಯ ಸತ್ಯತೆಯನ್ನು ಕಂಡುಕೊಂಡು, ಆ ಲೇಖಕ ಬರೆದ ಎಲ್ಲ ಪುಸ್ತಕಗಳನ್ನೂ ಕೊಂಡು ತಂದು ಓದುವದೆಂದು ನಿರ್ಧರಿಸಿಯೇ ಬಿಟ್ಟ. ಆ ಪುಸ್ತಕಗಳನ್ನು ಮನಸ್ಸುಗೊಟ್ಟು ಈ ಮೊದಲೇ ಓದದಿದ್ದುದಕ್ಕೆ ವಿಷಾದ ಪಡುತ್ತಲಿದ್ದ. ಇಂಥ ಅನೇಕ ಘಟನೆಗಳೂ ಅವುಗಳನ್ನು ಎದುರಿಸುವ, ಅವುಗಳಿಂದ ಪಾರಾಗುವ ಹಂಚಿಕೆಗಳೂ ಅವುಗಳಲ್ಲಿರಲಿಲ್ಲವೆ? ಮಹಾ ಅರಣ್ಯಗಳ ಮಧ್ಯೆ ಒಂದೂ ಕಂಟಿ ತಾಕದಂತೆ ಹೋಗುತ್ತಿದ್ದ ಆ ಪುಸ್ತಕದ ವ್ಯಕ್ತಿಗಳ ನೆನಪು ತಂದುಕೊಂಡ. ಅದರ ಕಾರಣವನ್ನು ಆ ಲೇಖಕ ಸೂಚಿಸಿರಬೇಕಲ್ಲವೆ? ಎಂದೂ ಯೋಚಿಸಿಕೊಂಡ. ಈ ಗುಡ್ಡದಲ್ಲಿ ಎಲ್ಲಿ ನೋಡಿದರೂ ಮುಳ್ಳುಗಳೇ ಇರುವ ಅನುಭವವಾಗುತ್ತಲಿತ್ತು. ಅಂಥ ಮಾನಸಿಕ ಗೊಂದಲದಲ್ಲಿ ಒಂದು ಹೆಜ್ಜೆ ಮುಂದಕ್ಕಿಡುವದೊಂದೇ ತಡ, ಒಂದು ಮುಳ್ಳಿನ ಕಂಟಿ ಅಡ್ಡ ಬರುವದು. ಅದರ ಟೊಂಗೆಯನ್ನು ಕೈಯಿಂದ ಸರಿಸಿದರೆ ಸಾಕು, ಇನ್ನೊಂದು ಬಂದು ಮುಖಕ್ಕೆ ಬಡಿಯುವದು. ಒಂದೇ ಕಾಲಕ್ಕೆ ನೂರಾರು ಶಸ್ತ್ರಗಳು ಅವನ ಶರೀರದಲ್ಲಿ ಸೇರಿದ ಅನುಭವ.

ಅತ್ತ ರಾಜಾಸಾಹೇಬ ಯಾವುದರ ಪರಿವೆಯೂ ಇಲ್ಲದೆ ಮುಂದೆ ಮುಂದೆ ಸಾಗಿದ್ದ. ಪ್ರಮೀಲೆ ಆವನಿಗಂಟಿಕೊಂಡೇ ಹಿಂಬಾಲಿಸುತ್ತಿದ್ದಳು. ಆತ ಆಗೊಮ್ಮೆ ಈಗೊಮ್ಮೆ ಅವಳ ಕಡೆಗೆ ತಿರುಗಿ ಅವಳಿಗೆ ಹುರುಪು ಬರುವಂಥ ಮಾತುಗಳನ್ನಾಡುತ್ತಿದ್ದ. ಇಂಥ ಗಂಡಾಂತರದ ಸಮಯದಲ್ಲಿ ಅವಳಿಗೆ

ಉತ್ತೇಜನ ಕೊಡಬೇಕಾದ ಅವಶ್ಯಕತೆಯಿರಲಿಲ್ಲವೆ? ತನ್ನ ಸ್ವಭಾವದ ಇನ್ನೊಂದು ಮುಖವನ್ನು ಅವಳು ಪ್ರದರ್ಶಿಸುತ್ತಿದ್ದಳು. ಈವರೆಗೆ ಅವನು ಆ ಮುಖ ಕಂಡಿರಲಿಲ್ಲ. ಅವನು ಈ ಹಿಂದೆ ನೋಡಿದುದು ಅವಳ ಸ್ವಭಾವದ ಒಂದು ಮುಖವನ್ನು ಮಾತ್ರ. ಜಾಣೆಯೂ ದಿಟ್ಟೆಯೂ ಯೋಗ್ಯತೆಯುಳ್ಳ ವಳೂ ಆದ ಪ್ರಮೀಲೆಯನ್ನು! ಆ ಪ್ರಮೀಲೆ ಮಾಯವಾಗಿ ಮೃದುಸ್ವಭಾವದ ಪುಕ್ಕ ಪ್ರಮೀಲೆಯನ್ನು ಈಗ ಕಾಣುತ್ತಿದ್ದ. ಯಾರ ಆಶ್ರಯ ಅಥವಾ ನೆರವಿಗಾಗಿ ಕಾದಿರದ ಹಿಂದಿನ ಪ್ರಮೀಲೆ ಈಗ ಅವನ ಸಹಾಯ-ಆಶ್ರಯಗಳನ್ನು ಬಯಸುತ್ತಿದ್ದಳು. ಬೇರೆಯವರು ತಾವಾಗಿಯೇ ಸಹಾಯ ಮಾಡಲು ಮುಂದೆ ಬಂದರೆ ತಿರಸ್ಕರಿಸಿ ಬಿಡುವ ಆ ಪ್ರಮೀಲೆಯೇ ಈಗ ಅಂಥ ಸಹಾಯವನ್ನು ತಾನಾಗಿ ಬಯಸುತ್ತಿದ್ದಳು. ಆ ಸ್ಥಳ ತಲಪುವ ವರೆಗೆ ಅವನ ತಲೆಯಲ್ಲಿ ಇಂಥ ವಿಚಾರಗಳೇ ತುಂಬಿದ್ದವು.

ಆ ಭಾವನೆಗಳು ಅವನನ್ನು ಪ್ರಮೀಲೆಯ ತೀರ ಹತ್ತಿರಕ್ಕೆ ಎಳೆಯುತ್ತಿರಬೇಕು. ಅವಳನ್ನು ಸಮಾಧಾನ ಪಡಿಸಬೇಕು, ಅವಳಿಗೆ ಸಹಾಯ ನೀಡಬೇಕು, ಅದೇಕೆ—ಅವಳನ್ನು ಸಂರಕ್ಷಿಸುವ ಭಾರವನ್ನೂ ಹೊರಬೇಕೆಂದೂ ಆತ ಯೋಚಿಸುತ್ತಿದ್ದ. ಈ ರಾತ್ರಿಯಲ್ಲಿ ಬಗೆಹರಿಯದ ಸಮಸ್ಯೆಯೊಂದಕ್ಕೆ ಪರಿಹಾರ ಕಂಡಂತಾಗಿತ್ತು. ಎಲ್ಲ ಸದ್ಗುಣಗಳಂತೆ ಪರೋಪಕಾರ ಬುದ್ಧಿ ಅವನಲ್ಲಿ ಜಾಗ್ರತವಾಯಿತು. ಅದರೊಡನೆ ಅವನ ಮನಸ್ಸಿನ ಅಶಕ್ತತೆಯೂ ಎಚ್ಚತ್ತಿರಬೇಕು. ಆಕೆಯಲ್ಲೂ ಕೆಲ ಮಾನಸಿಕ ಅಶಕ್ತತೆಗಳಿವೆ ಎಂದು ಪ್ರಮೀಲೆ ಎತ್ತಿ ತೋರಿಸಿದ್ದಳು. ಆ ಅಶಕ್ತತೆಯ ನಗ್ನ ಸತ್ಯದ ಆಧಾರದ ಮೇಲೆ ಆತ ಒಂದು ನಿರ್ಧಾರಕ್ಕೆ ಬಂದಿದ್ದ; ತನ್ನ ಪ್ರೀತಿಗೆ ಯೋಗ್ಯಳಾದವಳೆಂದರೆ ಪ್ರಮೀಲೆ.

ತನ್ನ ಮನದ ಹೆಬ್ಬಯಕೆಯನ್ನು ಬಿಚ್ಚಿ ತೋರಿಸಲು ಆತ ಶಬ್ದಗಳನ್ನು ಆರಿಸಿ ಹುಡುಕಿಕೊಳ್ಳುತ್ತಲಿದ್ದ. ಅಷ್ಟರಲ್ಲೇ ಆ ಶೂರ ನಾಯಕಮಣಿ ವಿಲಾಸರಾಯ ಒಂದು ಕಂಟಿಯನ್ನು ಬಲವಾಗಿ ಅಪ್ಪಿಕೊಂಡ. ಆದರ ಸಪ್ಪಳದಿಂದ ಹೆದರಿದ ಪ್ರಮೀಲೆ—

"ಅದೇನು, ಅಣ್ಣಾಸಾಹೇಬ್?" ಎಂದು ಅತ್ತ ಹೊರಳಿದಳು.

ವಿಲಾಸರಾಯ ಅವರಿಂದ ಬಹಳವಾದರೆ ಹತ್ತು-ಹನ್ನೆರಡು ಹೆಜ್ಜೆ ದೂರ

ವಿದ್ದ. ಅಷ್ಟು ಸನಿಯದಿಂದ ಬಂದ ಆ ಸಪ್ಪಳ ರಾಜಾಸಾಹೇಬನಿಗೆ ಕೇಳಿಸದಿದ್ದೀತೇ? ಆದರೆ ರಾಜಾಸಾಹೇಬ ಕೇವಲ ವಿಚಾರಮಾತ್ರದಿಂದ ಗಾಬರಿಯಾಗುವ ವ್ಯಕ್ತಿಯಾಗಿರಲಿಲ್ಲ. ಅಂತೆಯೇ ತಮ್ಮನ್ನು ಯಾರೋ ಹಿಂಬಾಲಿಸಿ ಬರುತ್ತಿದ್ದುದರ ಕಲ್ಪನೆಯನ್ನೂ ಆತ ತಂದುಕೊಳ್ಳಲಿಲ್ಲ. ಇಂಥ ಕತ್ತಲೆಯಲ್ಲಿ ಈ ಗುಡ್ಡದಲ್ಲಿ ಬೇರೆಯವರು ಅವರನ್ನು ಹಿಂಬಾಲಿಸುವ ಕಾರಣವಾದರೂ ಏನು? ಎಂದು ಅವನ ವಿವೇಕ ಕೇಳಬಹುದಿತ್ತು. ಪ್ರಮೀಲೆಯ ಧ್ವನಿಯಲ್ಲಿ ಭಯವಿದ್ದುದನ್ನು ಮಾತ್ರ ಅವನ ವಿವೇಕ ಸಾರಿ ಹೇಳಿತು. ಅವಳನ್ನು ಸಮಾಧಾನಗೊಳಿಸಲೆಂದು,

"ಒಂದು ಟೊಂಗೆ ಅಲುಗಾಡಿರಬೇಕು. ಗುಡ್ಡಗಳಲ್ಲಿ ಅವೆಲ್ಲ ನಡೆಯತಕ್ಕವುಗಳೇ" ಎಂದ.

"ಛೆ, ಇರಲಾರದು. ಪಿಸ್ತೂಲುಧಾರಿಯಾದ ಆ ಮನುಷ್ಯನೇ ನಮ್ಮನ್ನು ಹಿಂಬಾಲಿಸುತ್ತಿರಬೇಕೆಂದು ನನಗೆನ್ನಿಸುತ್ತಿದೆ."

"ಹುಚ್ಚು ಕಲ್ಪನೆ, ಅವನೇಕೆ ಬರಬೇಕು? ಅದು ಅವನ ಮೂರ್ಖತನವಾದೀತು."

"ಅಕೋ, ಅಲ್ಲಿ ನೋಡಿರಿ...."

"ಏನದು?"

"ಆ ಕಂಟಿಯ ಆಚೆಗೆ ಯಾರೋ ಅಡಗಿದಂತಿದೆ....ಅಣ್ಣಾಸಾಹೇಬ...."

"ಇಲ್ಲದ್ದೊಂದು ಕಲ್ಪನೆ ಮಾಡಬಾರದು. ಮುಂದೆ ಸಾಗೋಣ...."

"ಛೆ, ನಾನು ಮುಂದೆ ಹೋಗಲಾರೆ, ನನಗೆ ವಿಪರೀತ ಭಯ...."

"ಯಾವ ಕಂಟಿಯ ಹಿಂದೆ ನೀವು ನೋಡಿದ್ದು?"

"ಅದೇ ಕಂಟಿ, ಎತ್ತರವಾಗಿದೆ ನೋಡಿರಿ, ಅದೇ...."

"ತಾಳಿರಿ, ನಾನು ಹೋಗಿ ನೋಡಿ ಬರುವೆ...."

"ಛೆ, ನೀವು ನನ್ನನ್ನು ಬಿಟ್ಟು ಒಂದೇ ನಿಮಿಷ ದೂರ ಹೋದರೆ ನಾನು ಸತ್ತೇ ಹೋಗುವೆನು. ನಾನು ಇಷ್ಟು ಅಂಜುಬುರುಕಿಯೆಂದು ನನಗೇ ಗೊತ್ತಿರಲಿಲ್ಲ...."

"ಅದರಲ್ಲೇನು? ಇಂಥ ಸಂದರ್ಭಗಳಲ್ಲಿ ಎಲ್ಲರೂ ಅಂಜಬಹುದು. ನಾನೊಂದು ಕಥೆ........"

"ಸಾಕು, ನಿಲ್ಲಿಸಿರಿ ಕಥೆಯನ್ನು."

ತನ್ನ ಹೃದಯ ವೇಗವಾಗಿ ಬಡಿದುಕೊಳ್ಳುತ್ತಿರುವಂತೆ ಅವನಿಗೆ ಭಾಸವಾಯಿತು. ಪ್ರಮೀಲೆಯನ್ನು ಸಮಾಧಾನಗೊಳಿಸಬೇಕು, ಅವಳಿಗೆ ಸಹಾಯ ಮಾಡಬೇಕು, ರಕ್ಷಿಸಬೇಕು ಎಂಬ ಅವನ ಮನಸ್ಸಿನ ವಿಚಾರ ದೃಢ ನಿರ್ಧಾರವಾಗಿ ನಿಂತಿತು. ಅವರೀಗ ಒಂದು ಎತ್ತರವಾದ ಕಂಟಿಯನ್ನು ಹೊಕ್ಕಿದ್ದರು. ಕಂಟಿಯ ಟೊಂಗೆಗಳೊಳಗಿಂದ ಹಾಯ್ದು ಬರುತ್ತಿದ್ದ ಚಂದ್ರನ ಬೆಳಕು ಅಲ್ಪವಾಗಿತ್ತು. ಅವಳ ಮುಖ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅವನಿಗೊಂದು ಉಪಾಯ ಹೊಳೆಯಿತು.

"ನನ್ನ ಕೈಹಿಡಿದು ಮುಂದೆ ಬರ್ರಿ." ಎಂದನಾತ.

ಅಂಜಿಕೊಂಡಿರುವ ಮಗುವಿಗೆ ಹೇಳುವ ಮಾತುಗಳಲ್ಲವೇ ಅವು ! ಅಂಜಿಕೆಯಿಂದ ಅವಳ ಸ್ಥಿತಿಯೂ ಮಗುವಿನಂತೆಯೇ ಆಗಿತ್ತು. ಹನುಮನ ಆಕಸ್ಮಿಕ ಕೊಲೆಯಿಂದ ಅವಳ ಮನಸ್ಸಿಗೆ ಪೆಟ್ಟು ಬಿದ್ದಿತ್ತು. ಮುಂದಿನ ಘಟನೆಗಳಿಂದಲೂ ಅವಳು ಚೇತರಿಸಿಕೊಳ್ಳಲು ಅವಕಾಶ ಸಿಕ್ಕಿರಲಿಲ್ಲ. ಅದರಿಂದಾಗಿ ಅವಳ ಆತ್ಮವಿಶ್ವಾಸ ಧೈರ್ಯಗಳು ಮಾಯವಾಗಿದ್ದವು.

ಮೃದುವಾದ ಅವಳ ಹಸ್ತ ಅವನ ಅಂಗೈಯಲ್ಲಿ ಸೇರಿತು. ರಾಜಾಸಾಹೇಬ ಮಾತನಾಡಲಿಲ್ಲ. ಪ್ರಮೀಲೆಯೂ ಮಾತನಾಡಲಿಲ್ಲ. ವಿಲಾಸರಾಯ ಅಲುಗಾಡದೆ ಅಡಗಿ ಕುಳಿತಿದ್ದ. ನಿಧಾನವಾಗಿ ಬೀಸುತ್ತಲಿದ್ದ ಗಾಳಿ ಅವರ ತಲೆಗಳ ಮೇಲಿನ ಟೊಂಗೆಗಳನ್ನು ಅಲುಗಾಡಿಸಿ ಮುಂದೆಹೋಗುತ್ತಿತ್ತು. ಆ ಟೊಂಗೆಗಳ ಸಂದುಗಳೊಳಗಿಂದ ಚಂದ್ರಕಿರಣಗಳು ಆಗೊಮ್ಮೆ ಈಗೊಮ್ಮೆ ಹರಿದು ಬರುತ್ತಿದ್ದವು. ಅವಳ ಹಸ್ತವನ್ನು ಆತ ಬಿಗಿಯಾಗಿ ಹಿಡಿದ.

"ಈಗ ಭಯವಾಗುತ್ತಿಲ್ಲವಷ್ಟೆ ?" ಎಂದು ಕೇಳಿದ.

"ಇಲ್ಲ........"

ಗಾಳಿ ಮಾಯವಾಗಿ ಎಲ್ಲೆಲ್ಲಿಯೂ ಸ್ತಬ್ಧತೆಯಡಗಿತು. ಯಾವುದೋ ಒಂದು ಗಿಡದಲ್ಲಿ ಕುಳಿತಿದ್ದ ಹಕ್ಕಿಯೊಂದು ತನ್ನ ರೆಕ್ಕೆಗಳ ಸದ್ದು ಮಾಡಿತು.

"ಧೈರ್ಯ ಬಂತೇ ?"

"ಹೌದು."

ಮುಂದೆ ಏನೋ ನಡೆಯಿತು; ಹೃದಯಗಳನ್ನು ಪುಡಿ ಪುಡಿ ಮಾಡಿ

ದಂತಾಯಿತು. ಜಗತ್ತನ್ನೇ ನಾಶಪಡಿಸುವ ಪ್ರಳಯವೇನೋ ಎಂಬಂತೆ ಭಾಸವಾಯಿತು. ಆ ಪ್ರಳಯದ ಪ್ರಾರಂಭ ಅವರ ಪಾದಗಳಲ್ಲಿ ಹುಟ್ಟಿ ಶರೀರ ಗಳನ್ನು ಪ್ರವೇಶಿಸಿ, ಜಗತ್ತಿನ ತುಂಬ ಪಸರಿಸಿದಂತಾಗಿ ಎಲ್ಲವೂ ಕತ್ತಲಾಗಿ ಕಂಡಿತು. ಆ ಕ್ಷಣ ಮಾಯವಾಗಿ ಮತ್ತೊಮ್ಮೆ ಜಾಗ್ರತಾವಸ್ಥೆಗೆ ಬಂದಾಗ ರಾಜಾಸಾಹೇಬನಿಗೆ ತಿಳಿಯಿತು; ತನ್ನ ಕೈಗಳು ಪ್ರಮೀಲೆಯ ದೇಹವನ್ನು ಬಳ ಸಿದ್ದವು, ಅವಳು ಅಸಹಾಯಕಳಂತೆ ಬಿಕ್ಕುತ್ತಿದ್ದಳು. ತಾನು ಅವಳನ್ನು ಚುಂಬಿ ಸಿದ್ದು, ಯಾರೋ ಅಸ್ಪಷ್ಟವಾಗಿ ಅನ್ನುತ್ತಿದ್ದುದು ಕೇಳಿಸಿತು.

"ಪ್ರಮೀಲಾ" ಎಂದು ತಾನೇ ಮಾತನಾಡುತ್ತಿದ್ದುದರ ಅರಿವಾಯಿತು.

ಆ ಹೆಸರೂ ಪ್ರಿಯವಾಗಿತ್ತು, ಸಂಗೀತದಂತೆ ಮಧುರವಾಗಿತ್ತು. ವಿಚಿತ್ರ ವಾದುದೆಂದರೆ ತನಗೆ ಪ್ರಿಯವೆನಿಸುತ್ತಿದ್ದ ಹೆಸರೂ ಅದಾಗಿರಲಿಲ್ಲ. ಅಲ್ಲಿಯ ತನಕ ಹುಡುಗತನ ಆ ಹೆಸರಿನಲ್ಲಿನ ಮಾಧುರ್ಯವನ್ನು ಅವನಿಗೆ ತೋರಗೊಟ್ಟಿ ರಲಿಲ್ಲ. ಆಗ ಆ ಹುಡುಗತನ ಮಾಯವಾಗಿ ಆತ ಆ ಮಾಧುರ್ಯವನ್ನು ಗುರುತಿಸಿಕೊಂಡಿದ್ದ. ಆದರ್ಶ ಸ್ತ್ರೀಯ ಸದ್ಗುಣಗಳೆಲ್ಲ ಇರುವವೆಂದು ಹೇಳ ಬಹುದಾದ ಹುಡುಗಿಯೆಂದರೆ ಪ್ರಮೀಲೆ ಎಂಬ ಹೆಸರುಳ್ಳವಳು ಎಂದು ಅವನಿಗೆ ಖಚಿತವಾಗಿ ತೋರಿತು. ಪ್ರಮೀಲೆ ಎಂಬ ಹೆಸರಿದ್ದರೆ ಸಾಕು, ಅವಳಲ್ಲಿ ಆ ಎಲ್ಲ ಸದ್ಗುಣಗಳಿರಲೇಬೇಕೆಂದು ತಿಳಿಯಬೇಕು! ಆ ಹೆಸರಿನ ಪ್ರತಿ ಅಕ್ಷರವೂ ಕಾವ್ಯಮಯವಾಗಿ ಕಂಡಿತು. ಸಂಗೀತದ ಆಲಾಪನೆಯ ಪ್ರತಿಯೊಂದು ಅಲೆಯೂ ಶ್ರೋತೃವಿನ ಹೃದಯವನ್ನು ಸೂರೆಗೊಳಿಸುವದಿಲ್ಲವೆ? ಅದರೊಂದಿಗೆ ಶ್ರೋತೃ ಯಾವುದೋ ಒಂದು ಸುಖದಾಯಕವಾದ ಸ್ಥಳದಲ್ಲಿರುವಂತೆ ಮೈ ಮರೆತು ಬಿಡುವುದಿಲ್ಲವೆ? ಅವನಿಗೆ ಅದಾವುದೂ ಬೇಕಿರಲಿಲ್ಲ. ಅವಳ ಪಕ್ಕದಲ್ಲಿ ನಿಂತು, ಅವಳ ಹೆಸರನ್ನು ಪದೇ ಪದೇ ಉಚ್ಚರಿಸುವ ಬಯಕೆಯಾ ಯಿತು.

"ಪ್ರಮೀಲಾ...."

"ಅಣ್ಣಾಸಾಹೇಬ್! ನಿಮ್ಮ ಈ ಹೆಸರು ಚೆನ್ನಾಗಿಲ್ಲ...."

"ರಾಜ್...." ಆತ ಸೂಚಿಸಿದ.

"ಪ್ರಿಯ, ರಾಜ್...."

ಅವಳು ಉಚ್ಚರಿಸಿದ ಶಬ್ದಗಳು ರುಚಿಯೆನ್ನಿಸಿದವು. 'ರಾಜ' ಎಂಬ ಶಬ್ದದಲ್ಲೂ ಸಂಗೀತವಿತ್ತು, ಮಾಧುರ್ಯವಿತ್ತು. ಅನೇಕರಿಗೆ ರಾಜ ಎಂಬ ಹೆಸರು ಇರುವದುಂಟು. ಆದರ ಮಹತ್ವವೂ ಅವರಿಗೆ ಗೊತ್ತಿರುವದಿಲ್ಲ. ಅನೇಕ ಪ್ರೇಯಸಿಯರೂ ಪತ್ನಿಯರೂ ತಮ್ಮ ಪ್ರಿಯಕರರಿಗೋ ಗಂಡಂದಿರಿಗೋ ರಾಜ ಎಂದು ಕರೆಯುತ್ತಿದ್ದರೂ ಅವರಿಗೆ ಅದರಲ್ಲಿನ ಮಾಧುರ್ಯ ಕಂಡು ಬಂದಿರಲಿಕ್ಕಿಲ್ಲ. ರಾಜ ಎಂಬ ಹೆಸರಿನಲ್ಲಿಯ ರುಚಿ ಮತ್ತು ಮಾಧುರ್ಯಗಳ ಅರಿವಾಗಬೇಕಾದರೆ ಪ್ರಮೀಲೆಯ ಬಾಯಿಂದ ಅದನ್ನು ಕೇಳಬೇಕು.

"ರಾಜ, ನನ್ನ ಬಗೆಗೆ ನಿಮಗೆ ಅಷ್ಟು ಮೆಚ್ಚುಗೆಯೇ ?"

"ನನ್ನ ಹೃದಯವನ್ನೇ ನಿಮಗರ್ಪಿಸಿದ್ದೇನೆ."

"ನೀವೆಷ್ಟು ಒಳ್ಳೆಯವರು, ನಿಮ್ಮದು ವಿಶಾಲ ಹೃದಯ." ಅವಳು ಮೌನ ತಾಳಿ ನಿಟ್ಟುಸಿರು ಬಿಟ್ಟಳು. ಅದರಿಂದ ರಾಜಾಸಾಹೇಬ ತುಸು ಗೊಂದಲದಲ್ಲಿ ಬಿದ್ದ. ಅವಳು ಇಂಥ ಶಬ್ದಗಳನ್ನಾಡಬಹುದೆಂದು ಆತ ಭಾವಿಸಿರಲಿಲ್ಲ. ಅವುಗಳ ಅರ್ಥವೇ ಅವನಿಗೆ ಬಗೆಹರಿಯಲಿಲ್ಲ. ತಾನು ಒಳ್ಳೆಯವನೆಂದು ಅವನು ತಿಳಿದುಕೊಂಡಿದ್ದನೇನೋ ನಿಜ. ಆದರೆ ಒಳ್ಳೆಯ ಮನುಷ್ಯನೆಂದಲ್ಲ, ಒಳ್ಳೆಯ ಕತ್ತೆ, ಎಂದು !

ಅವಳು ಹಾಗೆ ಕರೆದುದಂತೂ ಸತ್ಯವಾಗಿತ್ತು. ಆತನ ಹಿಂದಿನ ನಂಬುಗೆಯನ್ನು ಆವಳ ಮಾತುಗಳು ಹೊಡೆದೋಡಿಸಿದ್ದವು. ಅವನು ನಿಜವಾಗಿ ಒಳ್ಳೆಯವನೇ ? ಇದ್ದರೂ ಇರಬಹುದು. ಅಂತೆಯೇ ಅವನು ಪ್ರಮೀಲೆಯ ತುಟಿಗಳನ್ನು ಅಷ್ಟರಲ್ಲೇ ಹನ್ನೊಂದು ಸಲ ಚುಂಬಿಸಿದ್ದ.

ಅವನಲ್ಲೀಗ ರಾಕ್ಷಸ ಧೈರ್ಯ ಬಂದಿತ್ತು. ನಾಲ್ಕಾರು ಮೈಲು ಓಡಲು ಅಥವಾ ನಾಲ್ಕೆಂಟು ಗೇಟುಗಳನ್ನು ಜಿಗಿಯಲೂ ಸಮರ್ಥನಾಗಿದ್ದ. ಆ ಸಮಯದಲ್ಲಿ ಹತ್ತೆಂಟು ಭಿಕ್ಷುಕರು ಬಂದಿದ್ದರೆ ಅವರಿಗೆ ಕೈ ತುಂಬ ದಾನ ಕೊಡಬಹುದಿತ್ತು. ಆ ರಾತ್ರಿಯಲ್ಲಿ, ಅಂಥ ನಿರ್ಜನ ಪ್ರದೇಶದಲ್ಲಿ ತಮ್ಮನ್ನು ಬೆನ್ನತ್ತಿ ಬರುತ್ತಿದ್ದ ಆ ಮನುಷ್ಯ ಎದುರಿಗೆ ಬಂದಿದ್ದರೆ ಅವನಿಗೂ ಒಂದು ಕೈ ತೋರಿಸಬಹುದಾಗಿತ್ತು. ಅವನ ಧೈರ್ಯ ಮತ್ತು ಶಕ್ತಿ ಕೆರಳಿ ನಿಂತವು. ಅಂಥ ಶಕ್ತಿಯ ಮುಂದೆ ಈ ಜೀವಕ್ಕೆ ಬೆಲೆ ಏನು ?

"ಈ ಅನುಭವ ಅದ್ಭುತವಾದದ್ದು." ಆತನೆಂದ.

ಆದೇಕೋ—ಅವನಿಗೆ ತಾನಾಡಿದುದು ಸರಿಯಾಗಿ ಕಾಣಲಿಲ್ಲ. ಅವ್ಯಕ್ತ ವಾದುದೇನೋ ಒಂದು ಆ ರಮ್ಯ ಪ್ರಣಯ ಪ್ರಸಂಗಕ್ಕೆ ಅಡ್ಡಿ ತರುತ್ತಿರುವಂತೆ ಭಾಸವಾಯಿತು. ಆ ಕಾರಣವನ್ನು ಕುರಿತು ಆಶ್ಚರ್ಯದಿಂದಲೇ ಯೋಚಿಸುತ್ತಿರುವಾಗ ಹನುಮನ ನೆನಪಾದುದು.

ವಿಲಾಸರಾಯ ದೂರದ ಕಂಟಿಯಾಚೆಗೆ ಕುಳಿತು ಆ ಎರಡು ಶರೀರಗಳ ಚಲನವಲನವನ್ನು ಅಸ್ಪಷ್ಟವಾಗಿ ಕಾಣುತ್ತಿದ್ದ. ಮಾತುಗಳೂ ಸರಿಯಾಗಿ ಕೇಳಬರುತ್ತಿರಲಿಲ್ಲ. ಹೊಟ್ಟೆ ಹೊಸೆಯುತ್ತ ನೆಲಕ್ಕಂಟಿಕೊಂಡು ಹೋಗ ಬೇಕೆಂದರೂ ಅದಕ್ಕೆ ಅವಶ್ಯವಿರುವ ದೇಹಕ್ಕಿಂತಲೂ ಅವನ ದೇಹದ ತೂಕ ನಾಲ್ವತ್ತು ಪೌಂಡು ಹೆಚ್ಚಿಗಿತ್ತು. ಇಂಥ ಮಾತು ನಡೆದಿದ್ದಾಗ ಓರ್ವನು ಹೊಟ್ಟೆ ಹೊಸೆಯುತ್ತ ಅವರ ಸಮೀಪಕ್ಕೆ ಹೋಗಿ ಎಲ್ಲ ಗೌಪ್ಯವನ್ನೂ ಅರಿತು ಕೊಂಡ ಕಥೆಯೊಂದನ್ನು ವಿಲಾಸರಾಯ ಓದಿದ್ದ. ಆದರೆ ಕಥೆಯಲ್ಲಿ ಬಂದ ವನ ಶರೀರಕ್ಕಿದ್ದ ಅನುಕೂಲತೆ ಈತನಲ್ಲಿರಲಿಲ್ಲ. ಅಂಥ ಕ್ಷುಲ್ಲಕ ಬುದ್ಧಿಯ ವನೂ ಅವನಾಗಿರಲಿಲ್ಲ. ಬೇರೆಯವರ ಮಾತು ಕದ್ದು ಕೇಳುವದು ಪ್ರಾಮಾಣಿಕ ವಾದುದೇ ? ಕೇವಲ ಕ್ಷುಲ್ಲಕತನ !

ರಾತ್ರಿಯೆಲ್ಲವನ್ನೂ ಈ ಕಂಟಿಗಳಲ್ಲಿ ಅಡಗಿ ಕುಳಿತು ಕಳೆಯಬೇಕಾಗುವ ದೇನೋ ಎಂದು ಯೋಚಿಸುತ್ತಿರುವಾಗ ಅವೆರಡೂ ದೇಹಗಳು ಚಲಿಸುತ್ತಿದ್ದುದು ಕಂಡಿತು. ಅವನಿಗೆ ಹಾಯೆನ್ನಿಸಿತು. ಹಿಂದೆ ತನ್ನ ಅಜಾಗರೂಕತೆ ಯಿಂದಾಗಿ ಸಪ್ಪಳವಾದುದನ್ನು ಮರೆಯದೆ, ಮುಂದೆ ಅಂಥ ತಪ್ಪುಗಳಾಗದಂತೆ ಎಚ್ಚರಿಕೆ ವಹಿಸಿ, ಕಂಟಿಗಳಿಗೆ ಮರೆಯಾಗುತ್ತ ಬಗ್ಗಿಕೊಂಡೇ ಅವರನ್ನು ಹಿಂಬಾಲಿಸಿದ. ಹಿಂದೆ ಕೆಳಕ್ಕೆ ನೋಡದೆ ಮುಂದೆ ಹೋಗುವವರನ್ನೇ ನೋಡುತ್ತ ಸಾಗಿದ್ದನಾದುದರಿಂದ ಅವನ ಚಪ್ಪಲಿಗಳೊಳಗಿಂದ ಪಾದಗಳಲ್ಲಿ ಮುಳ್ಳುಗಳು ಪ್ರವೇಶಿಸಿದ್ದವು. ಅದನ್ನು ತಪ್ಪಿಸಲು ಈಗ ಕೆಳಗೆ ನೋಡುತ್ತ ಹೋಗುತ್ತಿದ್ದನಾದ್ದರಿಂದ ಪ್ರವಾಸ ತುಸು ಮಂದಗತಿಯಿಂದ ಸಾಗಿತಾದರೂ ಮುಳ್ಳುಗಳ ಕಾಟ ತಪ್ಪಿತು. ಆದರಿಂದಾಗಿ ಆ ಎರಡೂ ವ್ಯಕ್ತಿಗಳು ಅವನಿಗೆ ಸ್ಪಷ್ಟವಾಗಿ ಕಾಣದಂತಾದರು. ಆದರೂ ಆತ ಹಿಂಜರಿಯದೆ ಅವರ ಕಾಲು ಸಪ್ಪಳ ಕೇಳಲು ಕಿವಿಗಳಿಗೂ ತುಸು ಕೆಲಸ ಹಚ್ಚಿ ಹೆಜ್ಜೆಗಳನ್ನಿಡುತ್ತಿದ್ದ. ಮೊದಮೊದಲು ಅವನ ಕರೆಗೆ ಓಗೊಟ್ಟು ಕಿವಿಗಳೂ ತಮ್ಮ ಬಾಗಿಲು ತೆರೆದಿಟ್ಟು

ಕೊಂಡೇ ಮುಂದೆ ಸಾಗಿದ್ದವು.

ಕೆಲಸಮಯದ ನಂತರ ಅವುಗಳ ಬಾಗಿಲೂ ಮುಚ್ಚಿದಂತೆ ಕಂಡಿತು. ತಕ್ಷಣ ಅವನೂ ನಿಂತುಬಿಟ್ಟ. ಅವನ ಹುಡುಗತನ ಸಾರಿ ಹೇಳಿತು: ವಿಲಾಸ ರಾಯ, ಜೋಕೆ! ಎಂದು. ವಿಶಾಲ ದೇಹದ ಆ ಮನುಷ್ಯ ಕೈಯಲ್ಲಿ ರಿವಾಲ್ವರ್ ಹಿಡಿದು ತನ್ನ ಬರುವನ್ನೇ ಕಾಯುತ್ತ ನಿಂತಿರುವಂತೆ ವಿಲಾಸರಾಯನಿಗೆ ಕಂಡಿತು. ಅದು ಸಮಾಧಾನ ತರುವ ಮಾತೂ ಆಗಿರಲಿಲ್ಲ! ಗುಂಡು ಹೊಡೆಯುವ ಮನುಷ್ಯ ವಿಶಾಲ ದೇಹಿಯಾಗಿರಲಿ, ಇಲ್ಲದಿರಲಿ, ಗುಂಡಿಗೂ ದೇಹಕ್ಕೂ ಯಾವ ಸಂಬಂಧ? ವಿಲಾಸರಾಯನಿಗೆ ಮಾತ್ರ ಅದನ್ನು ತಿಳಿದುಕೊಳ್ಳುವ ಶಕ್ತಿಯಿರಲಿಲ್ಲ. ರಾಜಾಸಾಹೇಬನ ವಿಶಾಲ ದೇಹದ ಬೆದರಿಕೆಯೇ ಅವನನ್ನು ಹಾಗೆ ನಿಲ್ಲಲು ಹಚ್ಚಿತ್ತು. ಇಂಥ ಕಠಿಣ ಪ್ರಸಂಗದಲ್ಲಿ ಬೇರಾವ ಉಪಾಯವಿದೆ? ವೈರಿಯ ಎದುರಿನಿಂದ ದೂರವಾಗುವದೇ ಒಳಿತಲ್ಲವೇ? ಅವನು ತುಸು ಎಡಕ್ಕೆ ಹೊರಳಿದ. ತಾನೀಗ ಹುಲ್ಲಿನ ಮೇಲೆ ನಡೆಯುತ್ತಿರುವಂತೆ ಕಂಡುಬಂದು, ಮುಂದೆ ಹೋಗುತ್ತಿದ್ದವರ ಕಾಲು ಸಪ್ಪಳ ಕೇಳಿಸದಿರಲು ಕಾರಣ ತಿಳಿಯಿತು.

ಅವರಿಬ್ಬರೂ ಕ್ಷಣಕಾಲ ನಿಂತಿದ್ದರು. ಆ ಮನುಷ್ಯನ ಕೈಯಲ್ಲಿ ಈಗ ಚೀಲವಿರಲಿಲ್ಲ. ಅವರು ಅಸ್ಪಷ್ಟವಾಗಿ ಮಾತಾಡುತ್ತಿದ್ದುದನ್ನೂ ವಿಲಾಸ ರಾಯ ಗುರುತಿಸಿದ. ಅವರು ಬಲಕ್ಕೆ ಹೊರಳಿ ಮತ್ತೊಮ್ಮೆ ಕಂಟಿಗಳಲ್ಲಿ ಪ್ರವೇಶಿಸಿದಂತೆ ಕಂಡಿತು. ಅವರು ಹೋಗುತ್ತಿರುವದಾದರೂ ಎಲ್ಲಿಗೆ? ಅವನ ಉತ್ಸುಕತೆ ಕೆರಳಿ ನಿಂತಿತು. ಅವರ ಹೆಜ್ಜೆಗಳ ಸಪ್ಪಳ ಮತ್ತೊಮ್ಮೆ ಕೇಳ ಬರದಂತಾಯಿತು. ಆಗ ಅವನು ಬಯಲು ಸ್ಥಳದಲ್ಲಿ ಬಂದಿದ್ದನಲ್ಲವೆ? ವೇಗವಾಗಿ ಓಡಿ ಹೋಗಿ ಕಂಟಿಯ ಆಸರೆಗೆ ನಿಂತುಕೊಂಡ. ಬೆಳಕೂ ಇರಲಿಲ್ಲ. ಸುತ್ತಲೆಲ್ಲ ಎತ್ತರವಾಗಿ ದಟ್ಟವಾಗಿ ಬೆಳೆದ ಗಿಡಗಳಿದ್ದವು. ಕಡ್ಡಿ ಕೊರೆದು ನೋಡಬೇಕೆಂದರೆ ಅವನ್ನೂ ಮರೆತು ಬಂದಿದ್ದುದು ಗೊತ್ತಾಯಿತು. ನಾಲ್ಕಾರು ಹೆಜ್ಜೆ ಮುಂದೆ ಸರಿದ. ಒಂದು ಗೋಡೆ ಅಡ್ಡ ಬಂದಂತಾಯಿತು. ಕಡ್ಡಿ ಪೊಟ್ಟಣ ತಾರದಿದ್ದುದಕ್ಕೆ ತನ್ನನ್ನು ತಾನೇ ಹಳಿದುಕೊಂಡು ಆ ಗೋಡೆಯ ಮೇಲೆ ಕೈಯಾಡಿಸಿ ವಿದ್ಯುದ್ದೀಪದ ಸ್ವಿಚ್‌ಗಾಗಿ ನೋಡಿ ನಿರಾಶನಾದ. ಕೊನೆಗೆ ಲಾಟೀನು ಇದ್ದರೂ ನಡೆಯಬಹುದು. ಅದನ್ನು ಬೆಳಗಿಸಲು ಕಡ್ಡಿ ಬೇಕು.

ಕೋಣೆಯಲ್ಲಿ ಹೊಕ್ಕು ಅದನ್ನು ಹುಡುಕುವ ಸಾಹಸಕ್ಕೆ ಕೈಯಿಕ್ಕಿದ. ಆ ಸಾಹಸದಲ್ಲಿ ತೊಡಗಿದ್ದಾಗಲೇ ಕೇಳಬರುತ್ತಿದ್ದ ಮಾತುಗಳ ಸಪ್ಪಳದಿಂದ ಅವಾಕ್ಕಾದ. ಸಪ್ಪಳ ಹತ್ತಿರ ಹತ್ತಿರಕ್ಕೆ ಬಂದು ಬಾಗಿಲಿನಾಚೆ ಬಂದಿತು. ಈ ವರೆಗೆ ಜೇಬಿನಲ್ಲಿರಿಸಿದ್ದ ಪಿಸ್ತೂಲು ಹೊರಕ್ಕೆ ತೆಗೆದು ಗೋಡೆಗೆ ಅಂಟಿಕೊಂಡು ಜೀವವನ್ನೇ ಪಣಕ್ಕೆ ಹಚ್ಚಿ ನಿಂತುಕೊಂಡ.

ಬಾಗಿಲು ತೆರೆಯಿತು.

ವಯಸ್ಸಾದವರ ಮನಸ್ಸನ್ನು ಒಂದೇ ಕ್ಷಣದ ಯೋಚನೆಗಳೂ ಹಣ್ಣು ಮಾಡಬಲ್ಲವು. ಅದೊಂದೇ ನಿಮಿಷದ ಅನುಭವದಿಂದ ವಿಲಾಸರಾಯನಿಗೆ ಮುಪ್ಪು ಬಂದಂತಾಗಿತ್ತು. ಹೊರಗಿನ ವ್ಯಕ್ತಿ ಬಾಗಿಲು ತೆರೆದು ಮಾತನಾಡಿದ ಕ್ಷಣಾರ್ಧದಲ್ಲಿ ಅವನು ಅರವತ್ತರ ವಯಸ್ಸು ದಾಟಿದ್ದ. ಆತನ ಹುಡುಗತನ ಮಾಯವಾಗಿ ಮೋಟರು ಉದ್ಯೋಗದಲ್ಲಿ ಹಣವನ್ನೂ ಹೆಸರನ್ನೂ ಗಳಿಸಿ ಕೊಂಡಿದ್ದ ವಿಲಾಸರಾಯ ತಾನೆಂಬ ಅರಿವು ಬಂದಿತ್ತು. ಸಹಸ್ರಾರು ರೂಪಾಯಿ ನಷ್ಟವಾಗುವಂತಿದ್ದರೂ ಇಂಥ ಗೊಂದಲದಲ್ಲಿ ಕೈಹಾಕದೆ ದೂರ ಉಳಿಯುವ ವ್ಯಕ್ತಿ ಅವನಾಗಿರಲಿಲ್ಲವೆ?

ಹೊರಗಿನ ಧ್ವನಿ ಸ್ಪಷ್ಟವಾಗಿ ಶಬ್ದ ಕೇಳಬಂದವು.

"ನಾನು ದೀಪ ಹಚ್ಚುವೆ."

ಅವನ ಹೃದಯ ಹಗುರವೆನ್ನಿಸಿರಬೇಕು. ಆತ ಸರದಾರರ ಧ್ವನಿ ಗುರುತಿಸಿಕೊಂಡ. ತುಸು ಹೊತ್ತಿನಲ್ಲಿ ಲಾಟೀನಿನ ಬೆಳಕಿನಲ್ಲಿ ಅವನ ಗುರುತೂ ಹತ್ತಿತು.

"ಹೂಂ........" ವಿಲಾಸರಾಯ ಕೆಮ್ಮಿದ. ಗಂಟಲು ಸಡಲಿಸಿಕೊಂಡಿರ ಬೇಕು! ಸರದಾರರಿಗೆ ಆಶ್ಚರ್ಯವಾಯಿತು. ಅಂಥ ಕತ್ತಲೆಯ ರಾತ್ರಿ, ಯಾರೂ ವಾಸವಾಗಿರದ ಆ ಕೋಣೆಯಲ್ಲಿ ಮರೆಗೆ ಅಡಗಿ ನಿಂತು ತಮ್ಮ ಗಂಟಲು ಸರಿಪಡಿಸಿಕೊಳ್ಳುತ್ತಿರುವದು ಆಶ್ಚರ್ಯವಲ್ಲದೆ ಮತ್ತಿನ್ನೇನು? ಎಂಥ ಧೈರ್ಯಶಾಲಿಯಾದರೇನು, ಭಯವಾಗದಿದ್ದೀತೇ? ಸರದಾರರ ಹೃದಯದಲ್ಲೂ ಒಂದು ಕಹಿ ಅನುಭವವಾಯಿತು. ಭಾವನಾಪ್ರಧಾನವಾದ ಸರದಾರರ ಮೃದು ಹೃದಯದಲ್ಲಂತೂ ಬಾಂಬು ಬಿದ್ದಂತಾಯಿತು. ಅವರು ಒಂದೇ ಜಿಗಿತಕ್ಕೆ ಆ ಕೋಣೆಯಿಂದ ಹೊರಕ್ಕೆ ಹಾರಿ ಬಾಗಿಲ ಮುಚ್ಚಿ,

"ಒಳಗೆ ಯಾರೋ ಇದ್ದಾರೆ." ಎಂದರು.

ಲೀಲಾರಾಣಿಯ ಕೋಮಲ ಸ್ವರ ಕೇಳಬಂತು.

"ಛೆ, ಅಲ್ಲಿ ಯಾರು ಇರಬೇಕು ?"

"ಸತ್ಯವಾಗಿಯೂ ನನ್ನನ್ನವನು ಬೆದರಿಸಿದ."

ಸರದಾರರ ಮನಸ್ಸಿನ ಭಯ ನಿವಾರಿಸುವ ಸಮಯ ಬಂತೆಂದು ತಿಳಿದು,

"ಯಾರೂ ಇಲ್ಲ." ವಿಲಾಸರಾಯನೆಂದ.

"ಕೇಳಿದೆಯಾ ?" ಸರದಾರರು ಲೀಲಾರಾಣಿಗೆ ಕೇಳಿದರು.

"ಯಾರವರು ?" ಬಾಗಿಲದೊಳಗೆ ಇಣಿಕಿ ಲೀಲಾರಾಣಿ ಕೂಗಿದಳು.

"ಭಯಪಡಬೇಡಿ, ನಾನು ವಿಲಾಸರಾಯ........"

ಬಾಗಿಲ ಅರ್ಧ ತೆರೆಯಿತು.

"ಏನು ವಿಲಾಸರಾಯರೇ ?"

"ಹೌದು...."

"ಭಯಪಡಬೇಡಿ ಎನ್ನುವದರ ಅರ್ಥವೇನು ? ಕೋಣೆಯಲ್ಲಿ ಕತ್ತಲೆ ಯಲ್ಲಿ ನಿಂತು ಭಯಪಡಬೇಡಿ ಎಂದು ಬೊಗಳುವವರಿಂದ ಲಾಭವೇನು ? ನನ್ನ ಹೃದಯವೇ ನಿಂತು ಹೋಗುವುದರಲ್ಲಿತ್ತು. ಹೀಗೆ ನಾನು ಎಂದೂ ಅಂಜಿರ ಲಿಲ್ಲ " ಸರದಾರರೆಂದರು.

ವಿಲಾಸರಾಯ ತನ್ನ ಭದ್ರಸ್ಥಾನ ಬಿಟ್ಟು ಹೊರಕ್ಕೆ ಬಂದಿದ್ದ. ಸರದಾರ ರಿಗೆ ಅಂಜಿಕೆಯಾಗಿದ್ದರೆ ಲೀಲಾರಾಣಿಗೆ ಆಶ್ಚರ್ಯವಾಗಿತ್ತು. ಅವಳೊಡನೆ ಸುಶೀಲಳಿರುವದನ್ನೂ ಆತ ಕಂಡ. ಲೀಲಾರಾಣಿಯ ಹಿಂದೆ ನಿಂತಿದ್ದ ಆಕೆ ಬಹು ಸುಂದರಳಾಗಿ ಕಂಡಳು.

"ಪಿಸ್ತೂಲು........ಈ ಸಾಹಸ " ಲೀಲಾರಾಣಿ ಪ್ರಶ್ನಿಸಿದಳು.

ತನ್ನ ಕೈಯಲ್ಲಿ ಇನ್ನೂ ಪಿಸ್ತೂಲು ಇರುವದು ಗೊತ್ತಾಯಿತವನಿಗೆ.

"ಓ...." ಎನ್ನುತ್ತ ಅದನ್ನು ಜೇಬಿಗೆ ಸೇರಿಸಿದ.

"ಬೇರೆಯವರನ್ನು ಬೆದರಿಸುತ್ತ ತಿರುಗುವದೇ ?" ಸರದಾರರು ಬೆದರಿದ ಸ್ವರದಲ್ಲೇ ನುಡಿದರು.

"ನೀವೇನು ನಡೆಸಿದ್ದಿರಿ ವಿಲಾಸರಾಯರೇ ?" ಕುತೂಹಲದಿಂದ ಸುಶೀಲೆ ಕೇಳಿದಳು.

ಅವಳ ಪ್ರಶ್ನೆಯ ರೀತಿ ಅವನನ್ನು ವ್ಯಸನಾಕ್ರಾಂತನನ್ನಾಗಿಸಿತು. ತನ್ನೊಡನೆ ಲಗ್ನವಾಗಲಿರುವ ಹುಡುಗಿಯ ಬಾಯಿಂದ ಇಂಥ ಮಾತುಗಳೇ, ಈ ರೀತಿಯ ಧ್ವನಿಯೇ? ಅವಳನ್ನು ಅಂಥ ಮನಃಸ್ಥಿತಿಯಲ್ಲೇ ಅದೇ ದಿನ ಮಧ್ಯಾಹ್ನವೂ ಕಂಡಿದ್ದ. ಅವಳು ಒಬ್ಬಳೇ ಕುಳಿತು ಒಂದು ಪತ್ರ ಓದುತ್ತಿದ್ದಳು. ಅದರ ಪಾಕೀಟಿನ ಮೇಲೆ ಗೊಬ್ಬೂರಿನ ಮುದ್ರೆ ಬಿದ್ದಿತ್ತು. ಅದರಲ್ಲೇನಾದರೂ ದುಃಖದ ಸಂಗತಿಗಳಿವೆಯೇ ಎಂದು ಆತ ಕೇಳಿದೊಡನೆ ಅವಳು ಇಲ್ಲವೆಂದು ಹೇಳಿದ್ದಳಾದರೂ ಅವಳು ಹೇಳಿದ ರೀತಿಯಲ್ಲಿ ಸಿಡುಕು ಇತ್ತು. ಅಷ್ಟರ ಮೇಲಿಂದಲೇ ಆ ಪತ್ರದಲ್ಲಿ ಅಸಮಾಧಾನಕರ ಸುದ್ದಿಗಳಿರಬೇಕೆಂದು ಬಗೆದು ಮೌನ ತಾಳಿದ್ದ. ಆಕೆಯ ತಮ್ಮ ಸುಭಾಸನಿಗೆ ಜಡ್ಡಾಗಿರಬೇಕೆಂದು ಈಗಲೂ ಆತ ನಂಬಿದ್ದ. ಆಕೆ ಮಧ್ಯಾಹ್ನ ಮಾತಾಡಿದ ರೀತಿಯೂ ಈಗ ಮಾತಾಡಿದ ರೀತಿಯೂ ಒಂದೇ ಇತ್ತು. ಆಗಲೂ ಅವನ ಮನಸ್ಸಿಗೆ ವ್ಯಸನವಾಗಿತ್ತು, ಈಗಲೂ ಅವನ ಮನಸ್ಸು ವ್ಯಸನ ತಾಳಿದುದು ಸಹಜವೇ ಸರಿ.

"ಹೌದು, ಇಲ್ಲೇನು ನಡೆಸಿದ್ದಿರಿ, ವಿಲಾಸರಾಯರೆ ?" ಸುಶೀಲಳ ಪ್ರಶ್ನೆಯನ್ನೇ ತಾನೂ ಕೇಳಿದಳು ಲೀಲಾರಾಣಿ.

"ಸಿ. ಐ. ಡಿ. ಕೆಲಸವಿರಬೇಕು." ಸರದಾರರೆಂದರು.

"ಸರದಾರರ ಚಿತ್ರದಲ್ಲಿ ಮುಖಕಳೆ ಸರಿಯಾಗಿ ಬಂದಿಲ್ಲವಂತೆ. ಅದನ್ನು ನೋಡಲು ನಾವು ಬಂದರೆ ನೀವಿಲ್ಲಿ ಅಡಗಿರುವಿರಿ, ಅದೂ ಪಿಸ್ತೂಲು ಹಿಡಿದು. ಇದರ ಅರ್ಥವೇನು ?"

"ಅದೊಂದು ದೊಡ್ಡ ಕಥೆ" ವಿಲಾಸರಾಯನೆಂದ.

"ಹೇಳಿರಿ...."

"ಆ ಮನುಷ್ಯ....ಕಿಟಕಿಯಲ್ಲಿ ಇಣಿಕಿ ನೋಡಿದವ....ಸುಶೀಲಳ ಪರಿಚಯವಿದೆಯೆಂದು ಹೇಳಿದವನ ನೆನಪಿದೆಯಷ್ಟೆ ?"

"ಓಹೋ, ಅವನು ನಿಮ್ಮ ತಲೆಯಲ್ಲಿ ತಾಂಡವನೃತ್ಯ ಆಡುತ್ತಿರಬೇಕು ! ಅವನು ನಿಮಗೇನು ಮಾಡಲು ಬಂದಿದ್ದ ?"

"ಅವನನ್ನು ನಾನು ಇಲ್ಲಿಯ ತನಕ ಬೆನ್ನತ್ತಿ ಬಂದಿದ್ದೆ."

"ಎಲ್ಲಿಂದ ಬೆನ್ನತ್ತಿದ್ದಿರಿ ? ಅದೇಕೆ ?"

"ದೇಶಪಾಂಡೆ ಮಹಲ್‌ದಿಂದ ಜೇನುಹುಳು ಸಾಕಿದ ಆ ಹುಡುಗಿಯೂ

ಅವನೂ ಕೂಡಿಯೇ ಇಲ್ಲಿಯ ತನಕ ಬಂದರು. ಮನೆಯನ್ನು ಸೇರುವರೆಂದೇ ತಿಳಿದಿದ್ದೆ. ಆದರೆ ಈ ಸ್ಟುಡಿಯೋಗೆ ಬಂದರು."

"ಮುಂದೆ ಏನು ಮಾಡಿದರು ?" ಲೀಲಾರಾಣಿ ಉತ್ಸುಕತೆಯಿಂದ ಕೇಳಿದಳು.

"ಒಳಗೆ ಹೋದ ಮರುನಿಮಿಷದಲ್ಲೇ ಹೊರಬಂದರು."

"ಹಾಗೇಕೆ ಮಾಡಿದರೋ ?"

"ಅದನ್ನೇ ನೋಡಲು ನಾನು ಒಳಗೆ ಸೇರಿದ್ದು."

"ಅಯ್ಯೋ ದೇವರೇ........" ಸರದಾರರ ಬಾಯಿಂದ ಹೊರಬಿದ್ದ ಈ ಶಬ್ದಗಳಲ್ಲಿ ಬೆದರಿಕೆ ಮತ್ತು ಸಮಾಧಾನಗಳೆರಡೂ ಕಂಡುಬಂದವು. " ಅವರು ನನ್ನ ಚಿತ್ರ ಕದಿಯಲು ಬಂದಿರಬೇಕು. ತಡೆಯಿರಿ, ನೋಡೋಣ..........." ದೀಪವನ್ನು ಕೈಯಲ್ಲಿ ಹಿಡಿದು ಒಳಕ್ಕೆ ಹೋಗಿ ಬಂದು ಸಮಾಧಾನ ಮತ್ತು ನಿರಾಶೆ ಬೆರತ ಧ್ವನಿಯಲ್ಲಿ, "ಇಲ್ಲ, ಅದು ಅಲ್ಲಿಯೇ ಇದೆ." ಎಂದರು.

ಎಲ್ಲರೂ ಒಳಕ್ಕೆ ಹೋದರು. ಲಾಟೀನಿನ ಬೆಳಕು ಮಂದವಾಗಿ ಕೋಣೆಯನ್ನು ಬೆಳಗಿಸಿತು.

"ಅದೊಂದು ಸಮಾಧಾನದ ಮಾತು. ಅದನ್ನು ಕಳೆದುಕೊಳ್ಳುವದು ಸಾಧ್ಯವೇ ? ಕಳೆದುಹೋಗಿದ್ದರೆ ಸಹಿಸಿಕೊಳ್ಳುವದು ಅಸಾಧ್ಯ............" ಲೀಲಾರಾಣಿ ತುಸು ವ್ಯಂಗವಾಗಿ ನುಡಿಯುತ್ತಿದ್ದಂತೆ, "ಅಯ್ಯಯ್ಯೋ" ಎಂದು ಚೀರಿದಳು.

ಮೊದಲೇ ಮುದುಡಿಕೊಂಡಿದ್ದ ಅವರ ನರಗಳಲ್ಲಿನ ಅಲ್ಪ ಸ್ವಲ್ಪ ಚೇತನೆಯೂ ಅವಳ ಚೀರುವಿಕೆಯಿಂದ ಮಾಯವಾಯಿತು. ಲೀಲಾರಾಣಿ ನೆಲದ ಮೇಲೆ ಕೂತಳು. ಸುಶೀಲೆ ಅವಳ ಹತ್ತಿರ ಓಡಿ ಬಂದು,

"ಏನಾಯಿತು ಲೀಲಾರಾಣಿ ?" ಎಂದಳು.

ಲೀಲಾರಾಣಿ ಎದ್ದು ನಿಂತು ನೆಲದ ಕಡೆಗೆ ಬೆರಳು ಮಾಡಿ ತೋರಿಸಿದಳು. ಅವಳ ಮುಖದಲ್ಲಿದ್ದ ವ್ಯಂಗಪೂರ್ಣವಾದ ನಗೆ ಈಗ ಮಾಯವಾಗಿತ್ತು. ಅವಳು ವಿಲಾಸರಾಯನತ್ತ ಹೊರಳಿ,

"ಅಲ್ಲಿ ನೋಡಿರಿ........" ಎಂದಳು.

ಸುಶೀಲೆ ಅವಳ ಬೆರಳುಗಳತ್ತ ದೃಷ್ಟಿ ಬೀರಿದಳು:

"ಹಾ! ಹನುಮ !" ಎಂದಳು.

"ಗುಂಡಿನಿಂದ ಹೊಡೆದಿದ್ದಾರೆ."

ಸುಶೀಲಳ ದೃಷ್ಟಿ ವಿಲಾಸರಾಯನತ್ತ ಹೊರಳಿತು. ಲೀಲಾರಾಣಿಯೇ ಮಾತು ಮುಂದುವರಿಸಿದಳು:

"ಇದರ ಬಗ್ಗೆ ನೀವೇನೆನ್ನುತ್ತೀರಿ, ವಿಲಾಸರಾಯರೇ ?"

ಎಲ್ಲರ ದೃಷ್ಟಿಗಳೂ ತನ್ನ ಮೇಲೆ ಕೇಂದ್ರೀಕೃತವಾದುದನ್ನು ವಿಲಾಸರಾಯ ಕಂಡ. ಲೀಲಾರಾಣಿಯ ಕಣ್ಣುಗಳಲ್ಲಿ ಬೆಂಕಿಯ ಕಿಡಿಗಳು, ಸುಶೀಲಳ ದೃಷ್ಟಿಯಲ್ಲಿ ತೀಕ್ಷ್ಣ ತಿರಸ್ಕಾರ, ಸರದಾರರ ಕಣ್ಣುಗಳಲ್ಲಿ ಕೃತ್ರಿಮವಾದ ಭಯ ಕಂಡುಬಂದವು.

"ಇದರರ್ಥವೇನು ?" ಸುಶೀಲೆ ಕೇಳಿದಳು.

"ಏನನ್ನುವಿರಿ ವಿಲಾಸರಾಯರೇ ?" ಲೀಲಾರಾಣಿಯ ಪ್ರಶ್ನೆ.

"ಆ ಪ್ರಾಣಿ ನನಗೆ ಸೇರುತ್ತಿರಲಿಲ್ಲವಾದರೂ ನಡೆದುಹೋಗಿರುವ ಘಟನೆ ಮಾತ್ರ ಅತಿರೇಕ " ಸರದಾರರೆಂದರು.

ಎಲ್ಲರೂ ತನ್ನನ್ನು ತಪ್ಪುಗಾರನಂತೆ ನೋಡುತ್ತಿದ್ದುದನ್ನು ಸಹಿಸಿಕೊಂಡು ವಿಲಾಸರಾಯನೆಂದ;

"ನಾನೇ ಮಾಡಿರುವೆನೆಂದು ನಿಮ್ಮ ಅಭಿಪ್ರಾಯವೇ ?"

ಯಾವುದೋ ಚಿತ್ರಪಟದಲ್ಲಿನ ಸನ್ನಿವೇಶವೊಂದರಲ್ಲಿ ತನ್ನಂಥವನೊಬ್ಬ ಪಾರಾದ ಹಂಚಿಕೆಯನ್ನು ಆತ ಕಂಡಿದ್ದ.

ಯಾವಾಗಲೂ ಸೌಜನ್ಯ ಸೂಸುತ್ತಿದ್ದ ಲೀಲಾರಾಣಿಯ ಮುಖದಿಂದ ತಿರಸ್ಕಾರದ ಧ್ವನಿ ಹೊರಬಂದಾಗ, ಸುಶೀಲೆ ಲೀಲಾರಾಣಿಯ ಮುಖಮುದ್ರೆಯನ್ನು ಕಂಡು ಹಿಂದಿನ ದಿನಗಳ ನೆನಪನ್ನು ತಂದುಕೊಂಡಳು: ಅವರಿಬ್ಬರೂ ಸಂಚಾರೀ ನಾಟ್ಯ ಕಂಪನಿಗಳಲ್ಲಿ ಕೆಲಸ ಮಾಡುತ್ತಿದ್ದಾಗ ಯಾರಾದರೂ ಅವರ ಮೇಲೆ ಏರಿ ಬಂದರೆ ಲೀಲಾರಾಣಿ ಹೀಗೆಯೇ ಅವರನ್ನು ತಿರಸ್ಕಾರ ದೃಷ್ಟಿಯಿಂದ ದಿಟ್ಟಿಸಿ ನೋಡುತ್ತಿದ್ದಳು. ಆವಳ ನೋಟದಿಂದ ಆವರು ಕರಗಿ ಹೋಗುತ್ತಿದ್ದರು. ಈಗ ವಿಲಾಸರಾಯ ಕರಗಿ ಹೋಗತೊಡಗಿದ್ದ.

"ಆದರೆ............ಆದರೆ..........." ಅವನ ಬಾಯಿಂದ ಮತ್ತೇನೂ ಹೊರಡಲಿಲ್ಲ.

"ನೀವೇ ಅದನ್ನು ಕೊಂದಿರಬೇಕೆಂಬ ಸಂಶಯ ಬರುವಂತಿದೆ ವಿಲಾಸ ರಾಯರೇ." ಲೀಲಾರಾಣಿ ದೃಢನಿಶ್ಚಯದ ಸ್ವರದಲ್ಲಿ ಹೇಳುತ್ತಿದ್ದಳು: "ನಿಮ್ಮನ್ನು ಅದು ಕಚ್ಚಿರಲಿಲ್ಲವೆ? ನೀವು ಅದರ ಮೇಲೆ ಸೇಡು ತೀರಿಸಿಕೊಳ್ಳಲು ಹೀಗೆ ಮಾಡಿರಬೇಕು. ಅಂತೆಯೇ ನೀವು ಕಳ್ಳರ ನೆಪ ಮಾಡಿ ಇಲ್ಲಿ ಅಡಗಿರ ಬೇಕು. ಅದನ್ನು ಕೊಂದು ಅದರ ಶವ ಇಲ್ಲಿ ತಂದು ಹಾಕಿರಬೇಕು. ಸರ ದಾರರೂ ಅದನ್ನು ಕೊಲ್ಲಬಹುದಿತ್ತು. ಅದರ ಶವದೊಂದಿಗೆ ನಾನು ಅವ ರನ್ನು ಕಂಡಿದ್ದರೆ ಅವರ ಮೇಲೆಯೇ ಸಂಶಯ ತಾಳುತ್ತಿದ್ದೆನೆಂದೂ ನಿಮಗೆ ಗೊತ್ತಿತ್ತು. ನಾನು ಅಂಥ ದೃಶ್ಯ ಕಂಡಿದ್ದರೆ ಸರದಾರರೇ ಅದನ್ನು ಕೊಂದಿರು ವರೆಂದು ಖಂಡಿತವಾಗಿ ನಂಬುತ್ತಿದ್ದೆ."

ಪ್ರಯತ್ನದಿಂದ ತಂದುಕೊಂಡಿದ್ದ ಕೃತ್ರಿಮ ಭಯ ಸರದಾರರ ಮುಖದಲ್ಲಿ ಮೂಡಿತ್ತು; ತನ್ನ ಸುಖಮಯ ಜೀವನಕ್ಕೆ ಅಡ್ಡವಾಗಿ ನಿಂತಿದ್ದ ತನ್ನ ವೈರಿ ಯನ್ನು ವಿಲಾಸರಾಯ ಕೊಂದುದಕ್ಕೆ ಆನಂದವೂ ಆಗಿತ್ತು.

"ಅಬ್ಬ, ಎಂಥ ನಾಟಕವಿದು ?" ಸರದಾರರೆಂದರು.

ವಿಲಾಸರಾಯ ಮಾತಾಡಲು ಯತ್ನಿಸುತ್ತಿದ್ದ. ಇವೆಲ್ಲವೂ ಕನಸಿನಲ್ಲಿ ನಡೆದಿರುವಂತೆ ಆವನಿಗೆ ಭಾಸವಾಗುತ್ತಿತ್ತು.

"ನಾನು ಕೊಂದಿಲ್ಲ....ಕೊಂದಿಲ್ಲ....ಕೊಂದಿಲ್ಲ! ಆ ಪ್ರಾಣಿ ಇಲ್ಲಿದ್ದುದೂ ನನಗೆ ಗೊತ್ತಿರಲಿಲ್ಲ."

"ಹೋಗಲಿ, ವಿಲಾಸರಾಯರೇ ಬನ್ನಿರಿ" ಎಂದು ಸರದಾರರು ಕೈ ಮುಂದೆ ಮಾಡಿದರು.

ತನ್ನ ಮೇಲೆ ತಪ್ಪು ಹೊರಿಸುತ್ತಿದ್ದವರೆಲ್ಲ ಅಲ್ಲಿಂದ ಹೋಗುತ್ತಿದ್ದುದು ವಿಲಾಸರಾಯನಿಗೆ ಕಂಡಿತು. ಲೀಲಾರಾಣಿ ಹೋದಳು, ಸುಶೀಲೆಯೂ ಹೋದಳು. ಸರದಾರರೊಬ್ಬರು ಮಾತ್ರ ವಿಷಣ್ಣವದನರಾಗಿ ತನ್ನ ಬಳಿಯಲ್ಲಿ ನಿಂತಿದ್ದುದನ್ನು ಆತ ನೋಡಿದ. ತಕ್ಷಣ ವಿಲಾಸರಾಯ ಲೀಲಾರಾಣಿಯನ್ನು ಬೆನ್ನಟ್ಟಿ, ಕಳ್ಳರು—ತನ್ನ ಸಾಹಸ—ಅವರಲ್ಲುಂಟಾದ ತಪ್ಪು ಕಲ್ಪನೆಯ ಬಗೆಗೆ ತಾಳ ತಪ್ಪಿದವರಂತೆ ಒಂದೇ ಸಮನೆ ಅವಳಿಗೆ ಹೇಳುತ್ತಿದ್ದ. ಲೀಲಾರಾಣಿ ಅವನ ಮಾತುಗಳನ್ನು ಕೇಳಲು ಸಿದ್ಧಳಿರಲಿಲ್ಲ. ವಿಲಾಸರಾಯ ಮತ್ತೆ ಹಿಂದಿರುಗಿದ.

"ವಿಲಾಸರಾಯರೆ, ನೀವು ಹೀಗೆ ಮಾಡಬಹುದೆಂದು ನಾನು ಭಾವಿಸಿರಲಿಲ್ಲ. ಆಣೆಯಿಟ್ಟು ಹೇಳುತ್ತೇನೆ, ಎಂದೂ ಭಾವಿಸಿರಲಿಲ್ಲ." ಎಂದರು ಸರದಾರರು.

ಅದರಿಂದಂತೂ ವಿಲಾಸರಾಯನ ಬಾಯಿಗೆ ಬೀಗ ಬಿದ್ದಂತಾಯಿತು. ಬಹು ಪ್ರಯಾಸಪಟ್ಟು, "ನಾನು ಹೇಳುವದನ್ನಾದರೂ........" ಎಂದನಾತ.

ಅದಕ್ಕೆ ಸರದಾರರು ಕತ್ತು ಅಲುಗಾಡಿಸುತ್ತ,

"ನಮ್ಮ ಅತಿಥಿಯಾಗಿದ್ದುಕೊಂಡು ನಮ್ಮಲ್ಲಿ ಉಂಡು ತಿಂದು........ಅಂಥ ಬೆಲೆಯುಳ್ಳ ಮಂಗವನ್ನು ಕೊಲ್ಲುವದು ರೀತಿಯಲ್ಲ! ಸಭ್ಯತನದ ಲಕ್ಷಣವೂ ಅಲ್ಲ........" ಎಂದು ತನ್ನ ಹೆಂಡತಿ ಹೋದತ್ತ ಸಾಗಿದರು.

"ವಿಲಾಸರಾಯರೆ........" ಅದು ಸುಶೀಲಳ ಧ್ವನಿ. ಅವಳು ಅವನತ್ತ ಕೈಚಾಚಿ ನಿಂತಿದ್ದಳು. ಅವಳ ಮುಷ್ಟಿಯಲ್ಲಿ ಏನೋ ಇದ್ದಂತಿತ್ತು. ಅವಳ ಧ್ವನಿ ಕರ್ಕಶವಾಗಿತ್ತು.

"ಏನು ?" ಕನಸಿನಲ್ಲಿದ್ದವರಂತೆ ವಿಲಾಸರಾಯ ಕೇಳಿ, ಅವಳು ಕೈಯಲ್ಲಿ ಹಿಡಿದುದನ್ನು ನೋಡಿದ. ಗೊಂದಲದಲ್ಲಿದ್ದ ಅವನ ದೃಷ್ಟಿಗೆ ಅದರ ಗುರುತು ಹತ್ತಲಿಲ್ಲ.

"ತಕ್ಕೊಳ್ಳಿರಿ ಇದನ್ನು........"

"ಹಾ........?"

ಸುಶೀಲೆ ಕಾಲು ನೆಲಕ್ಕಪ್ಪಳಿಸಿ, "ಒಳ್ಳೇದು ಹಾಗಿದ್ದರೆ...." ಎಂದವಳೇ ಕೈಯಲಿದ್ದ ವಸ್ತುವನ್ನು ನೆಲದ ಮೇಲೆ ಬಿಸುಟು ಒಂದು ಕ್ಷಣವೂ ಅಲ್ಲಿ ನಿಲ್ಲದೆ ಹೊರಟುಹೋದಳು. ಅವಳು ಗಿಡಗಳಾಚೆ ಮರೆಯಾಗುವವರೆಗೆ ಅವನ ದೃಷ್ಟಿ ಅವಳನ್ನು ಹಿಂಬಾಲಿಸಿತ್ತು. ಅವಳು ಚೆಲ್ಲಿ ಹೋದುದನ್ನು ಎತ್ತಿಕೊಳ್ಳಲು ಯಂತ್ರದಂತೆ ಬಾಗಿ, ಅದನ್ನು ಕೈಗೆ ತೆಗೆದುಕೊಂಡು ನೋಡಿದ. ಅವರಿಬ್ಬರ ಲಗ್ನ ನಿಶ್ಚಿತವಾದುದರ ಕುರುಹಾಗಿ ಅವನೇ ಆಕೆಗೆ ಕೊಟ್ಟಿದ್ದ ಉಂಗುರವಾಗಿತ್ತು ಅದು!

ಮನೆಯನ್ನೂ ಅದರ ಸುತ್ತಲಿನ ಆವರಣವನ್ನೂ ರಾಜಬೀದಿಯಿಂದ ಬೇರೆಯಾಗಿಸಿದ್ದ ಗೇಟಿಗೆ ಬೆನ್ನು ಆನಿಸಿಕೊಂಡು ರಾಜಾಸಾಹೇಬ ನಿಂತಿದ್ದ, ಮುಖದಲ್ಲಿ ಗೆಲುವು ತುಂಬಿದ ನಗು ಸೂಸಿ ಬಂದಿತ್ತು. ಮಹತ್ವದ ಸುದ್ದಿಯೊಂದನ್ನು ಕಮಲಾಕಾಂತನಿಗೆ ತಿಳುಹಿಸಲೆಂದು ಪ್ರಮೀಲೆ ಮನೆಯತ್ತ ಧಾವಿಸುತ್ತಿದ್ದಳು. ಕದೀಮ ಬೆಕ್ಕು ಕಟ್ಟೆಗೆ ಮನೆಯ ಚಪ್ಪರದಿಂದ ಕೆಳಕ್ಕಿಳಿದು ಬಂದು, ತನ್ನ ಮುಖವನ್ನೂ ಶರೀರವನ್ನೂ ಪಾದ ಮತ್ತು ನಾಲುಗೆಯಿಂದ ಸ್ವಚ್ಛವಾಗಿ ತಿಕ್ಕಿಕೊಳ್ಳುತ್ತ, ಒಬ್ಬನೇ ನಿಂತಿದ್ದ ರಾಜಾಸಾಹೇಬನಿಗೆ ತನ್ನ ಸಹವಾಸ ಲಾಭ ನೀಡಿತ್ತು. ತುಸು ಸಮಯದ ಹಿಂದೆ ನಡೆದು ಹೋದ ಗೊಂದಲದಿಂದ ಗಾಬರಿಯಾಗಿದ್ದ ಕದೀಮ ಈಗ ಶಾಂತವಾಗಿತ್ತು. ಅದೂ ಆನಂದದಲ್ಲಿರುವದೆಂದೇ ರಾಜಾಸಾಹೇಬನಿಗೆ ಅನ್ನಿಸಿತು. ತಾನು ಆನಂದದಲ್ಲಿರುವಾಗ ಬೇರೆಯವರೂ ಆನಂದದಲ್ಲಿರುವದನ್ನು ಕಂಡರೆ ಆ ಆನಂದ ದ್ವಿಗುಣಿತವಾಗುವದು !

ರಾಜಾಸಾಹೇಬ ಸಂತೋಷ ಸಾಗರದಲ್ಲಿ ವಿಹರಿಸುತ್ತಿದ್ದ. ಭಯಾನಕವಾದ ದುರ್ಘಟನೆಯೊಂದು ದಾಟಿ ಹೋಗಿತ್ತು. ಶಾಂತರೀತಿಯಿಂದ ಯೋಚಿಸುವದಕ್ಕೆ ಅನುಕೂಲ ಸಮಯ ಪ್ರಾಪ್ತವಾಗಿತ್ತು. ಪ್ರಮೀಲೆಯ ಯೋಚನೆಯಲ್ಲಿ ತನ್ನ ಮನಸ್ಸನ್ನು ತೊಡಗಿಸಿದ್ದ. ಅವಳು ಮನೆಯತ್ತ ಹೋಗುತ್ತಿದ್ದಂತೆ ತನ್ನ ಕರವಸ್ತ್ರ ಅವನತ್ತ ಬೀಸುತ್ತ ನಗುತ್ತ ಮಾಯವಾಗಿದ್ದಳು. ಅದರಿಂದ ಆವನ ಮುಖದಲ್ಲಿ ಮೂಡಿ ಬಂದಿದ್ದ ನಸುನಗು ಇನ್ನೂ ಆ ಮುಖದ ಮೇಲೆ ನಲಿದಾಡುತ್ತಿತ್ತು. ಅದ್ಭುತ ಹುಡುಗಿ ! ಸೌಂದರ್ಯದ ರಾಶಿ ! ತಾನೇ ಸುದೈವಿ ! ಅಬ್ಬ, ತಮ್ಮಿಬ್ಬರ ಪರಿಚಯವಾದುದು ಎಷ್ಟು ಆಕಸ್ಮಿಕ ! ದೈವವೇ ಆತನನ್ನು ಅಲ್ಲಿಗೆ ಕರೆದು ತಂದಿರಲಿಲ್ಲವೇ ! ಎಂದೆಲ್ಲ ಯೋಚಿಸುತ್ತಿದ್ದ.

ಆವನ ಕಾಲಿಗೆ ಕದೀಮ ತನ್ನ ಬೆನ್ನು ಸವರುತ್ತಿತ್ತು. ತುಸು ಬಾಗಿ ಆತನೂ ಅದರ ಬೆನ್ನು ಸವರಿದ. ಅದು ತನ್ನ ಮೃದುವಾದ ಕೂದಲುಗಳಿಂದ ಆವನ ಕಾಲನ್ನು ಇನ್ನಿಷ್ಟು ತಿಕ್ಕಹತ್ತಿತು.

ದೈವಬಲವಿದ್ದರೆ ಏನಾಗಲಾರದು ! ಹೌದು, ದೈವವೂ ಬಲು ವಿಚಿತ್ರವೇ ಸರಿ. ಶಕ್ತಿಯುತವಾದುದೂ ಹೌದು ! ರಾಜಾಸಾಹೇಬ ಅಂದು ಕ್ಲಬ್ಬಿಗೆ ಹೋಗಿರದಿದ್ದರೆ ಇದೆಲ್ಲ ನಡೆಯಬಹುದಾಗಿತ್ತೇ ? ಗೋಬ್ರ್ಯಾರಿನ ಓಣಿ ಓಣಿ ಗಳಲ್ಲಿ ಅಲೆಯುತ್ತಿದ್ದವನು ಅಕಸ್ಮಾತ್ ಕ್ಲಬ್ಬಿನತ್ತ ತಿರುಗಿ ಬಂದಿರಲಿಲ್ಲವೇ ? ಅವನು ಹಾಗೆ ಬಂದಿರದಿದ್ದರೆ ಸುಂದರರಾವ್ ಸರಕಾರರ ಭೇಟಿಯಾಗುತ್ತಿರ ಲಿಲ್ಲ. ಸರಕಾರರೂ ಅದಕ್ಕೂ ಮುಂಚೆ ಎಲ್ಲೆಲ್ಲ ಸುತ್ತಿ ಅದೇ ಸಮಯಕ್ಕೆ ಅಲ್ಲಿಗೆ ಬಂದಿದ್ದರೋ ಹೇಗೆ ಹೇಳುವದು ! ಇಬ್ಬರೂ ಏಕಕಾಲಕ್ಕೆ ಕ್ಲಬ್ಬಿಗೆ ಬಂದಿರ ಲಿಲ್ಲವಾದರೆ ತಮ್ಮಿಬ್ಬರ ಭೇಟಿಯು ಮಾತೇ ಬರುತ್ತಿರಲಿಲ್ಲ. ಕ್ಲಬ್ಬಿಗೆ ರಾಜಾ ಸಾಹೇಬ ಬಂದ ಸಮಯದಲ್ಲೇ ಸರಕಾರರು ಕೈಯಲ್ಲಿ ಬ್ಯಾಟ ಹಿಡಿದು 'ಸಿಕ್ಸರ್' ಗಾಗಿ ಒಬ್ಬರೇ ಪ್ರಯತ್ನಿಸುತ್ತಿದ್ದುದನ್ನೂ ತಪ್ಪು ರೀತಿಯಲ್ಲಿ ಬ್ಯಾಟ್ ಹಿಡಿದು ಹೊಡೆಯಲು ಪ್ರಯತ್ನಿಸುತ್ತಿದ್ದುದನ್ನೂ ಕಂಡಿರದಿದ್ದರೆ ಸರಕಾರರಿಗೆ ಅವರ ತಪ್ಪು ತಿಳಿಸಿಕೊಡುವ ಸುಯೋಗ ರಾಜಾಸಾಹೇಬನಿಗೆ ಬರುತ್ತಿರಲಿಲ್ಲ.

ಅಷ್ಟು ಮಾತ್ರಕ್ಕೆ ಹತ್ತು ಲಕ್ಷ ರೂಪಾಯಿಗಳನ್ನು ಬಿಟ್ಟು ಹೋಗುವ ಆ ಮುದುಕ ಸರಕಾರ ಎಂಥ ವಿಚಿತ್ರ ಮನುಷ್ಯ !

ಹಣದ ವಿಚಾರ ಬಂದೊಡನೆ ಅವನ ಮನಸ್ಸು ತಿಳಿಯಾಯಿತು. ತಾನು ಮುಂಬಯಿಗೆ ಬಂದು ಸಾಧಿಸಬೇಕಾಗಿದ್ದ ಕಾರ್ಯಗಳ ಬಗ್ಗೆ ಯೋಚಿಸಹತ್ತಿದ. ಅದೆಲ್ಲ ಸರಿ, ಆದರೆ ಅತ್ತೀಗೇರಿ ರಾಜಾಸಾಹೇಬ್ ಎಂಬ ಬಿರುದಿನ ವಿಚಾರ ಹೇಗೆ ಬಗೆಹರಿಸಿಕೊಳ್ಳುವದು ?

ಪ್ರಮೀಲೆಯ ಮನೆಯ ಜೀವನ ಆತನಿಗೆ ಒಗ್ಗಿದ್ದಿತು. ಅಣ್ಣಾಸಾಹೇಬ ನಾಗಿ ಇರುವದರಲ್ಲಿಯೇ ಆತ ಆನಂದವನ್ನು ಕಂಡಿದ್ದ. ತನಗೊಂದು ಬಿರುದಿ ರುವದನ್ನೂ ಮರೆತುಬಿಡುವಷ್ಟು ಆತ ಆ ವಾತಾವರಣಕ್ಕೆ ಹೊಂದಿಕೊಂಡಿದ್ದ. ಪ್ರಮೀಲೆಗಾದರೋ ಈ ಜಗತ್ತಿನಲ್ಲಿ ವೈರಿಯಾಗಿರುವವನೆಂದರೆ ಅತ್ತೀಗೇರಿ ರಾಜಾಸಾಹೇಬ್ ಒಬ್ಬನೇ. ಈ ಗಂಭೀರ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವ ದಾದರೂ ಹೇಗೆ ?

ನಿಜವಾಗಿಯೂ ಯೋಚಿಸತಕ್ಕ ಸಂಗತಿಯೇ ಸರಿ. ಅವನ ಮನಸ್ಸಿನ ನೆಮ್ಮದಿ ಇಲ್ಲವಾಗಿ ಹೃದಯ ಜಡವಾಯಿತು. ಸುತ್ತಲೂ ಕದೀಮ ಸುತ್ತುತ್ತಿ ರುವದೂ ಅವನ ಲಕ್ಷಕ್ಕೆ ಬರಲಿಲ್ಲ. ಆತ ತನ್ನ ಮೈ ಇನ್ನಿಷ್ಟು ತಿಕ್ಕಲಿ ಎಂದು

ಕದೀಮ ಬಯಸುತ್ತಿರಬೇಕು. ಆದರೇನು? ಭಯಂಕರವಾದ ಸಮಸ್ಯೆಗಳನ್ನು ಬಿಡಿಸುವ ಅವಶ್ಯಕತೆಯಿರುವಾಗ ಬೆಕ್ಕಿನ ಪೈ ತಿಕ್ಕುತ್ತ ಕುಳಿತಿರುವದು ಜಾಣತನವಾದೀತೇ?

ಒಂದು ವೇಳೆ ಅವಳಿಗೆ ಆ ಸಂಗತಿಯನ್ನೇ ಹೇಳದಿದ್ದರೆ? ಆ ಯೋಜನೆ ಯಶಸ್ವಿಯಾದೀತೇ? ಲಗ್ನವನ್ನೂ ಬೇರೆ ಹೆಸರಿನಲ್ಲೇ ಮಾಡಿಕೊಳ್ಳುವದೇ?

ಎಲ್ಲಿಯೋ ಎಳೆತನದಲ್ಲಿ ಅಂಥದೇ ಒಂದು ನಾಟಕ ನೋಡಿದ ನೆನಪು ಅವನಿಗೆ ಬಂದಿತು. ಆದರಲ್ಲಿನ ಉದ್ದ ಮೀಸೆಯ ಯಾವನೋ ನೀಚನೊಬ್ಬ ಅಂದಿದ್ದ:

"ಈ ಹೆಂಗಸು ನನ್ನ ಹೆಂಡತಿಯೇ ಅಲ್ಲ" • ಎಂದು. ಆಗ ಅವನಿಗೂ ಅವನ ಸ್ನೇಹಿತರಾದ ಇತರ ಬಾಲಕರಿಗೂ ಬಹಳ ವಿಷಾದವಾಗಿತ್ತು. ಮುಂದಿನ ಭಾಗ ಮಾತ್ರ ನೆನಪಾಗಲಿಲ್ಲ. ಆ ನಟನು ಹೇಳಿದ್ದುದು ಸರಿಯೆಂದು ಸಿದ್ಧವಾಯಿತೋ ಏನೋ. ಅವನು ಎಷ್ಟು ಪ್ರಯತ್ನಿಸಿದರೂ ನೆನಪಾಗಲಿಲ್ಲ, ಏನೇ ಇರಲಿ, ಮುಂದಿನ ಪ್ರಶ್ನೆ ವಕೀಲರಿಗೆ ಸಂಬಂಧಿಸಿದುದು. ದಲಾಲ.... ದಲಾಲ....ಕಂಪನಿ ಅದನ್ನು ನೋಡಿಕೊಳ್ಳಬಹುದು. ಇನ್ನೂ ಸಮಯ ಬೇಕಾದಷ್ಟಿದೆ. ಅವರಿಗೇನೇ ಎಲ್ಲ ಸಂಗತಿಗಳನ್ನೂ ವಿವರವಾಗಿ ಬರೆದು ತಿಳುಹಿಸಿ ಅವರ ಅಭಿಪ್ರಾಯ ದೊರಕಿಸುವಷ್ಟು ಲಗ್ನದ ದಿನವೂ ದೂರವಿದೆ.

ಒಂದು ವೇಳೆ ಅದಕ್ಕೆ ಸಮ್ಮತಿ ಸೂಚಕ ಉತ್ತರ ವಕೀಲರಿಂದ ಬಂದಿತೆಂದು ತಿಳಿಯೋಣ. ಆದರೆ ಹಣದ ವಿಚಾರ ಬಗೆಹರಿಸಿಕೊಳ್ಳುವದು ಹೇಗೆ? ಸ್ಪಷ್ಟವಾದಿಯಂತೆ ತನಗೆ ಆಸ್ತಿಯೇ ಇಲ್ಲವೆಂದೂ ತನ್ನ ಉತ್ಪನ್ನವೆಂದರೆ ಒಂದು ಕ್ಲಬ್ಬಿನಲ್ಲಿ ಶಿಕ್ಷಕನಾಗಿರುವದಕ್ಕೆ ಸಿಗುತ್ತಿರುವ ಸಂಬಳ ಮಾತ್ರವೆಂದೂ ಹೇಳಿದ್ದನಲ್ಲವೇ? ಹೀಗಿರುವಾಗ ಆ ಹತ್ತು ಲಕ್ಷ ರೂಪಾಯಿಗಳ ವಿಚಾರವಾಗಿ ಅವಳಿಗೆ ಹೇಳುವದನ್ನು ಮರೆತಿದ್ದೆನೆಂದು ಹೇಳುವದು ಯೋಗ್ಯವಾಗಲಾರದು, ಅವಳೂ ನಂಬಲಾರಳು.

ಲಗ್ನದ ನಂತರ ಕೆಲ ದಿನಗಳು ಕಳೆದ ಮೇಲೆ ಓರ್ವ ಕಾಲ್ಪನಿಕ ಕಕ್ಷನನ್ನು ನಿರ್ಮಿಸಿ ಅವನನ್ನು ಕೊಂದುಬಿಡಬಹುದು, ಅಥವಾ ಅದೇ ಬಗೆಯ ಯಾವುದಾದರೊಂದು ದಾರಿ ಹುಡುಕಬಹುದು. ಅಂಥ ಘಟನೆಯ ಚಿತ್ರದ

ರೂಪರೇಖೆಗಳನ್ನೂ ಆತ ಕಲ್ಪಿಸಿದ: ತಾನು ಒಂದು ಮಧ್ಯಾಹ್ನ ಊಟ ಮಾಡುತ್ತ ಒಂದು ಪತ್ರವನ್ನು ಓದುವದು, ಆಗ ಅವಳು ಕೇಳುವಳು, "ಏನು ರಾಜ. ಹಾಗೇಕೆ ಉಸಿರು ಕರೆದಿರಿ? ಆ ಪತ್ರದಲ್ಲಿ ಭಯಂಕರವಾದ ಸುದ್ದಿ ಯೇನಾದರೂ ಇದೆಯೇ?" ಎಂದು. "ಏನಿಲ್ಲ, ನನ್ನ ಕಕ್ಕ ಸುಂದರರಾಯ ಸತ್ತು—ನನಗೆ ಹತ್ತು ಲಕ್ಷ ರೂಪಾಯಿಗಳನ್ನು ಬಿಟ್ಟುಹೋಗಿದ್ದಾನೆ" ಎಂದು ತಾನು ಹೇಳಿಬಿಡುವದು.

ಅಬ್ಬ, ಎಂಥ ಯೋಜನೆ! ತನ್ನ ವಿಚಾರ ಶಕ್ತಿಯ ಬಗೆಗೆ ಆತನಿಗೆ ಅಭಿಮಾನವೆನ್ನಿಸಿತು. ಆ ಯೋಜನೆ ಯಶಸ್ವಿಯಾಗುವವರ ವಿವರಗಳನ್ನು ಲೆಕ್ಕ ಹಾಕಹತ್ತಿದ: ತನ್ನ ಕಕ್ಕ ಸುಂದರರಾಯ ಸತ್ತುದನ್ನೂ ಹತ್ತು ಲಕ್ಷ ರೂಪಾಯಿ ಬಿಟ್ಟುಹೋದುದನ್ನೂ ಬರೆದು ತಿಳಿಸಲು ದಲಾಲ ಕಂಪನಿಯವರಿಗೆ ವಿನಂತಿಸಿಕೊಳ್ಳಬೇಕು. ಮಾಣಿಕಲಾಲನಿಗಂತೂ ಇಂಥ ವಿಷಯಗಳೆಂದರೆ ಬಲು ಹಿಗ್ಗು. ಕಾನೂನುಗಳ ವ್ಯಾಖ್ಯೆಗಳಲ್ಲಿನ ಕೆಲ ವಿಶಿಷ್ಟ ಶಬ್ದಗಳನ್ನು ಉಪ ಯೋಗಿಸಿ ಆ ಪತ್ರವನ್ನು ಎಲ್ಲರೂ ನಂಬುವಂತೆ ಬರೆಯುವ ಯೋಗ್ಯತೆಯೂ ಆತನಿಗಿದೆ. ಸತ್ಯ ಸಂಗತಿಗಳನ್ನು ನೇರವಾಗಿ ಪ್ರಮೀಲೆಗೆ ಹೇಳಬಯಸದೆ ಅವನ್ನು ಅವಳಿಗೆ ತಿಳಿಸಲೆಂದು ಬೇರೆ ದಾರಿ ಹಿಡಿದರೆ ಅದರಲ್ಲಿ ಮಾಣಿಕಲಾಲ ದಲಾಲನ ಸಹಾಯ ಅನಿವಾರ್ಯವೆಂದು ರಾಜಾಸಾಹೇಬನಿಗೆ ತೋರಿತು. ಅದ ರಿಂದ ತುಸು ಸಮಾಧಾನವೂ ಆಯಿತು. ಆ ಎಲ್ಲ ಜವಾಬ್ದಾರಿ ಅವನೊಬ್ಬ ನಿಗೆ ಭಾರವಾಗಬಹುದಿತ್ತು. ಮಾಣಿಕಲಾಲನೂ ಅರ್ಧ ಭಾರ ಹೊರುವನೆಂದ ಮೇಲೆ ಸಮಾಧಾನವಾಗದಿದ್ದೀತೇ? ಮಾಣಿಕಲಾಲನನ್ನು ಕೇಳದೆ ಯಾವ ಕಾರ್ಯಕ್ಕೂ ಕೈ ಹಾಕದಿರುವದೇ ಲೇಸು. ಈಗಲೇ ಆ ಮಾತುಗಳನ್ನೆಲ್ಲ ಯೋಚಿಸುತ್ತ ವೃಥಾ ಮನಸ್ಸಿಗೆ ಅಸಮಾಧಾನವನ್ನೇಕೆ ತಂದುಕೊಳ್ಳಬೇಕು? ಬೇಡ, ಸದ್ಯ ಆ ವಿಚಾರವೇ ಬೇಡವೆಂದು ನಿರ್ಧರಿಸಿಕೊಂಡ. ಯಾವುದಾದ ರೊಂದು ವಿಚಾರವನ್ನು ಅಥವಾ ಅಸಮಾಧಾನಕಾರಕ ಸಮಸ್ಯೆಯನ್ನು ಯೋಚಿ ಸುವದು ಬೇಡವೆಂದು ನಿರ್ಧರಿಸಿದ ಕ್ಷಣವೇ ಅದನ್ನು ಮನಸ್ಸಿನಿಂದೋಡಿಸಿ ಬಿಡ ಬಲ್ಲ ಜನರು ವಿರಳವಾದರೂ ಅಂಥವರಲ್ಲಿ ರಾಜಾಸಾಹೇಬನೂ ಒಬ್ಬನಾಗಿದ್ದ. ಹತ್ತು ಲಕ್ಷ ರೂಪಾಯಿಗಳ ವಿಚಾರವನ್ನು ಮಾಣಿಕಲಾಲ ದಲಾಲನ ಸಲಹೆ ಪಡೆಯದೆ ಯೋಚಿಸುವದೇ ಬೇಡವೆಂದು ನಿರ್ಧರಿಸಿಕೊಂಡ ಮರುಕ್ಷಣದಲ್ಲೇ

ಆತ ಅದನ್ನು ಮರೆತೂ ಬಿಟ್ಟ. ಸದ್ಯಕ್ಕೆ ಅತಿ ಮಹತ್ವದ್ದಾದ ವಿಚಾರ ಪ್ರಮೀಲೆಯ ಕುರಿತಾದುದು, ಸರಿ. ಅವಳತ್ತ ಅವನ ಮನಸ್ಸು ಹೊರಳಿತು.

ಪ್ರಮೀಲೆಯ ಕುರಿತು ಏನನ್ನೋ ಯೋಚಿಸಹೋದರೆ ಸುಶೀಲಾರಾಣಿಯ ಸಂಬಂಧ ಬಂದೇ ಬರುತ್ತಿದ್ದುದು ಅವನಿಗೆ ತುಸು ವಿಚಿತ್ರವಾಗಿ ಕಂಡಿತು ಆತ ಸುಶೀಲಳನ್ನು ಮರೆಯಲು ಪ್ರಯತ್ನಿಸಿ ವಿಫಲನಾಗಿದ್ದ. ಪ್ರಮೀಲೆಯ ಪ್ರತಿಯೊಂದು ಸದ್ಗುಣಗಳಿಗೆ ಎದುರಾಗಿ ಸುಶೀಲೆಯ ದುರ್ಗುಣಗಳು ಎದುರಿಗೆ ನಿಲ್ಲುವವು. ಪ್ರಮೀಲೆಗೆ ಸರಳರೇಖೆ ಎನ್ನುವದಾದರೆ ಸುಶೀಲೆ ಅಂಕುಡೊಂಕು; ಪ್ರಮೀಲೆ ಹಸನ್ಮುಖಿ—ಸುಸ್ವಭಾವಿ, ಸುಶೀಲೆ ಜಗಳಗಂಟಿ; ಪ್ರಮೀಲೆಯ ಸಹವಾಸದಲ್ಲಿ ಅದು ದುರ್ಲಭ; ಸುಶೀಲಾರಾಣಿ ಈವರೆಗೆ ಆತನೊಡನೆ ವರ್ತಿಸುತ್ತಿದ್ದ ರೀತಿಯನ್ನು ಮನಗಂಡಿದ್ದ ಅವನು, ತಾನೊಂದು ಕತ್ತೆಯೆಂದೇ ಆಕೆ ತಿಳಿದಿದ್ದಾಳೆಂದು ಅಭಿಪ್ರಾಯ ತಾಳಿದ್ದ. ಪ್ರಮೀಲೆಯ ರೀತಿಯೇ ಬೇರೆ. ಅವನನ್ನು ಒಳ್ಳೆಯವನು, ವಿಶಾಲಹೃದಯಿಯೆಂದೇ ಕರೆದಿದ್ದಳಾಕೆ.

ಅವರಿಬ್ಬರಲ್ಲಿ ಎಷ್ಟೊಂದು ಅಂತರ ! ಅವರಿಬ್ಬರ ಧ್ವನಿಗಳಲ್ಲೂ ವ್ಯತ್ಯಾಸವಿತ್ತು, ಪ್ರಮೀಲೆಯ ಧ್ವನಿ ಸೌಮ್ಯವಾಗಿಯೂ ಉತ್ತೇಜನಕಾರಿಯಾಗಿಯೂ ಶಾಂತಿದಾಯಕವೂ ಆಗಿತ್ತು. ಅದಕ್ಕೆ ಎಲ್ಲರೂ ಮೋಹಗೊಳ್ಳಬಹುದಾಗಿತ್ತು. ಸುಶೀಲಾರಾಣಿಯ ಧ್ವನಿ ಅದಕ್ಕೆ ತೀರ ವಿರುದ್ಧವಾದುದು. ಅವಳ ಪರಿಚಯವಾದಾಗಿನಿಂದಲೂ ಕೇಳುತ್ತ ಬಂದಿರಲಿಲ್ಲವೇ ? ಅವಳ ಧ್ವನಿಯೆಂದರೆ........ ಅದರ ನೆನಪು ತಂದುಕೊಳ್ಳತೊಡಗಿದ. ಅದೇಕೋ ಅವನ ಸ್ಮರಣಶಕ್ತಿ ಅವನಿಗೆ ಸಹಾಯ ನೀಡಲಿಲ್ಲ. ಹೀಗೆ ಯೋಚಿಸುತ್ತಿರುವಾಗಲೇ:

"ರಾಜಾಸಾಹೇಬ್...." ಎಂದು ಕರೆದುದು ಕೇಳಿಸಿತು.

ಗೇಟಿನ ಮುಂದಿರುವ ದಾರಿಯಲ್ಲಿ ಸುಶೀಲೆ ನಿಂತಿದ್ದಳು. ಅವನನ್ನು ಅವಳು ನೋಡುತ್ತಿದ್ದ ರೀತಿಯ ಮೇಲಿಂದ ಅವನಿಂದ ಏನನ್ನೋ ಬೇಡಿ ಪಡೆಯಲು ಬಂದಂತೆ ಕಾಣುತ್ತಿದ್ದಳು; ಪಶ್ಚಾತ್ತಾಪಪಡುತ್ತಿರುವವರ ದೈನ್ಯಭಾವ ಮುಖದಲ್ಲಿ ಮೂಡಿ ಬಂದಿತ್ತು.

"ನಾವು ಯಾವಾಗಲೂ ಭೇಟಿಯಾಗುವದು ಗೇಟಿನಲ್ಲಿಯೇ ಅಲ್ಲವೇ ?" ಅವಳು ನಸುನಗುತ್ತ ಕೇಳಿದಳು.

ಬೇಸರ ತರುವ ನಗು ಅದು !

"ರಾಜಾಸಾಹೇಬ್............" ಆವಳೇ ಮತ್ತೊಮ್ಮೆ ಅವನನ್ನು ಕರೆದು ಮೌನ ತಾಳಿ ಗೇಟಿನ ಬಾಗಿಲ ಮೇಲೆ ಕೈಯನ್ನಿಟ್ಟಳು. ಅವಳು ಬಂದುದರಲ್ಲಿ ಏನೋ ಉದ್ದೇಶವಿರಬಹುದೆಂದು ರಾಜಾಸಾಹೇಬನಿಗೆ ಖಾತ್ರಿಯಾಯಿತು. ಆತ ತುಸು ಚುರುಕು ಬುದ್ಧಿಯವನಾಗಿದ್ದರೆ ಅವಳ ಉದ್ದೇಶವನ್ನು ತರ್ಕಿಸಿಕೊಳ್ಳ ಬಹುದಿತ್ತು. ಆದರೆ ನಿಸರ್ಗವೂ ಆ ವಿಷಯದಲ್ಲಿ ಅವನಿಗೆ ದ್ರೋಹ ಬಗೆದಿತ್ತು. ಆವಳು ಬಂದುದರ ಉದ್ದೇಶ ಅವನಿಗೆ ತಿಳಿದುಬರಲಿಲ್ಲ.

ಗೇಟಿನ ಬಾಗಿಲ ಮೇಲೆ ಅವಳು ತನ್ನ ಎಡಗೈಯನ್ನು ಉದ್ದೇಶಪೂರ್ವಕ ವಾಗಿಯೇ ಇಟ್ಟಿದ್ದಳು. ಆದರೆ ಅವನ ಸ್ವಭಾವದ ರೀತಿಯೇ ಬೇರೆ. ಹೆಣ್ಣಿನ ಎಡಗೈಯೆಂದರೇನು? ಹೆಣ್ಣಿನ ಎಡಗೈ—ಮಾತ್ರ! ಅದರ ಮೂರನೆಯ ಬೆರಳಿನಲ್ಲಿ ಉಂಗುರವಿದ್ದರೂ ಅಷ್ಟೆ, ಬಿಟ್ಟರೂ ಅಷ್ಟೆ! ತನ್ನ ಎಡಗೈ ಅವನ ಲಕ್ಷ್ಯ ಸೆಳೆಯಲಿಲ್ಲವೆಂಬುದನ್ನು ಕಂಡ ಸುಶೀಲಾರಾಣಿ ಅದನ್ನು ಅಲ್ಲಿಂದ ತೆಗೆದು ಕೊಂಡಳು. ತಾನು ಬಂದಿದ್ದ ಕಾರ್ಯದ ಪ್ರಸ್ತಾಪ ಹೇಗೆ ಪ್ರಾರಂಭಿಸಬೇಕು ಎಂದು ಯೋಚಿಸಹತ್ತಿದಳು.

"ರಾಜಾಸಾಹೇಬ್, ನಿಮ್ಮೊಡನೆ ಮಾತಾಡುವದಿತ್ತು."

ಅವನು ಕುತೂಹಲದಿಂದ ಆವಳನ್ನು ನೋಡುತ್ತಿದ್ದ. ಹಿಂದೆ ನಡೆದು ಹೋದುದನ್ನು ನೆನಸಿಕೊಂಡರೆ ತಾನು ಆವಳ ಮುಂದೆ ಇಷ್ಟು ಧೈರ್ಯದಿಂದ ನಿಲ್ಲಬಹುದೆಂದು ಆತ ಭಾವಿಸಿರಲಿಲ್ಲ. ಆವಳಿಗೂ ತನಗೂ ಸಂಬಂಧವೇ ಇಲ್ಲ ವೆಂದು ಈಗ ಅತ ತಿಳಿದುಕೊಂಡಿದ್ದ, ಆವಳ ಬಗೆಗೆ ಅವನಿಗೆ ಆಸ್ಥೆಯೇ ಅನ್ನಿಸ ಲಿಲ್ಲ. ಆವಳು ಅವನ ಜೀವನದಿಂದ ಪಾರಾಗಿದ್ದಳು.

"ರಾಜಾಸಾಹೇಬ, ನಾನು ಮೂರ್ಖತನ ಮಾಡಿದ್ದೆ."

ಅವನು ಬಾಯಿ ತೆರೆಯಲಿಲ್ಲ. ಸಮಾಧಾನಕರ ಉತ್ತರವೂ ಸೂಚಿಸ ಲಿಲ್ಲ. "ಹೂಂ............" ಎಂಬ ಶಬ್ದವೊಂದೇ ಹೊರಬಂತು. ಅದರಲ್ಲಿ 'ಹೀಗಾಗುವದೆಂದು ನನಗೆ ಮೊದಲೇ ಗೊತ್ತಿತ್ತು' ಎನ್ನುವ ಭಾವವಿತ್ತು. ಆತ ಅವಳನ್ನೊಮ್ಮೆ ನೋಡಿದ. 'ಹೇಳು ಮುಂದಿನದನ್ನು ಹೇಳು' ಎನ್ನುವಂತಿತ್ತು ಆ ನೋಟ!

ಸುಶೀಲೆ ದಾರಿಯ ಕಡೆಗೆ ನೋಡುತ್ತ ಇಳಿಧ್ವನಿಯಲ್ಲಿ,

"ನಾನು ಮೂರ್ಖಳಂತೆ ನಡೆದುಕೊಂಡೆ. ಮೂರ್ಖಳಾಗಿ ವರ್ತಿಸಿ ನಿಮ್ಮನ್ನು ಕಳೆದುಕೊಂಡೆ. ಆ ಹುಡುಗಿಯೊಡನೆ ನಿಮ್ಮನ್ನು ಸುಂದರ್ ರೆಸ್ಟೋರೆಂಟಿನಲ್ಲಿ ನೋಡಿ ಸಿಟ್ಟಿಗೆದ್ದೆ, ಅಸೂಯೆಪಟ್ಟೆ. ನಿಮ್ಮನ್ನು ನಾನು ನಂಬ ಬೇಕಿತ್ತು, ಆದರೆ........ನಾನು ಮೂರ್ಖಳು........"

"ಸುಶೀಲಾರಾಣಿ, ನಿನಗೆ ಹಾಗೆ ಮಾಡಲು ಅಧಿಕಾರವಿದೆ, ಸ್ವಾತಂತ್ರ್ಯ ವಿದೆ."

"ಇಲ್ಲ, ನಾನು ಮೂರ್ಖಳು, ನಿಮ್ಮ ಕ್ಷಮೆ ಕೇಳಲು ಬಂದಿದ್ದೇನೆ."

"ಹಾಗೆಲ್ಲಾ ಮಾತಾಡುವ ಅವಶ್ಯಕತೆಯೇ ಇಲ್ಲ. ಕ್ಷಮಿಸುವದಾದರೂ ಏನಿದೆ ?"

ಅದಕ್ಕೆ ಸುಶೀಲ ವಿನಯದಿಂದ ಉತ್ತರ ಕೊಟ್ಟಳಾದರೂ ಅವನ ತಲೆ ಯನ್ನು ಆ ಗೇಟಿನ ಮೇಲೆ ಜಜ್ಜಿ ಬಿಡಬೇಕೆಂದೆನ್ನಿಸಿತ್ತು ಅವಳಿಗೆ. ಅವನ ಮೌನ ಅವಳ ತಾಳ್ಮೆಯನ್ನು ಕೆಣಕುತ್ತಿದ್ದಿತು. ಮೊದಲಿನ ದಿನಗಳಲ್ಲಿ ಇಂಥ ಸಂದರ್ಭ ಸಿಕ್ಕಿದ್ದರೆ ಅವನೇ ಓಡಿಬಂದು ಅಪ್ಪಿಕೊಳ್ಳಲು ಪ್ರಯತ್ನಿಸಬಹುದಾ ಗಿತ್ತು. ಧ್ವನಿಯನ್ನು ಬಹು ಪ್ರಯಾಸದಿಂದ ಅಂಕಿತದಲ್ಲಿರಿಸಿಕೊಂಡು,

"ನಾನನ್ನುವದೆಂದರೆ: ನಾನು ಬಂದದ್ದು ತಡವಾಯಿತೆ ? ನೀವು ಕ್ಷಮಿಸಲಾರಿರಾ ರಾಜಾಸಾಹೇಬ ? ನಾವಿಬ್ಬರೂ ಮೊದಲಿನಂತೆಯೇ ಇರ ಲಾರೆವೇ ? ಈಗಾದುದನ್ನು ಮರೆತು ಬಿಡಲಾರಿರಾ ?" ಎಂದು ಆಕೆ ಕೇಳಿ ದಳು.

"ಅದು ಹೇಗೆ ಸಾಧ್ಯ ?"

ರಾಜಾಸಾಹೇಬ ನುಡಿದುದು ಅಷ್ಟು ಮಾತ್ರ. ಅವಳೊಡನೆ ಆತ ಹೀಗೆ ವರ್ತಿಸುತ್ತಿದ್ದುದಕ್ಕೆ ಅನೇಕ ಕಾರಣಗಳಿದ್ದುದನ್ನು ಅವಳೇನು ಬಲ್ಲಳು ? ಅಬ್ಬ, ಅಂದಿನ ಘಟನೆಗಳು ! ಆ ಅನುಭವಗಳು ! ಇಳಿಹೊತ್ತಿನಿಂದ ಪ್ರಾರಂಭವಾ ದುವು ಮಧ್ಯರಾತ್ರಿ ಮೀರಿ ಹೋಗಿದ್ದರೂ ತೀರಿರಲಿಲ್ಲ. ಸುಶೀಲೆಯ ವರ್ತ ನೆಯ ನೆನಪಾಗಿ ಸ್ತ್ರೀಯ ಚಂಚಲ ಸ್ವಭಾವ ಕಂಡು ಮನಸ್ಸು ನೊಂದುದರಿಂದ ಅಂದಿನ ಘಟನೆಗಳು ಪ್ರಾರಂಭವಾಗಿದ್ದವು: ಲೀಲಾರಾಣಿಯ ಮನೆಗೆ ಹೋದುದು, ವಿಲಾಸರಾಯ-ಸುಶೀಲಳ ಲಗ್ನದ ಸುದ್ದಿ ಕೇಳಿದುದು, ಅಲ್ಲಿಂದ ಹೊರಬಿದ್ದು ವೇಗದಿಂದ ನಡೆದು ಬಂದು ಪ್ರಮೀಲೆಯ ಮನೆ ಸೇರಿದುದು;

ಅನಂತರ ಗುಂಡಿನ ಸಪ್ಪಳ, ಆ ಶವ; ಆ ಶವ ಹೊತ್ತುಕೊಂಡು ಹೋಗಿ ಲೀಲಾರಾಣಿಯ ಮನೆಯ ಆವರಣದಲ್ಲಿ ಬಿಸಾಕಿ ಬಂದುದು; ಅದಾದ ನಂತರ ಪ್ರಮೀಲೆ ಆತನನ್ನು ಪ್ರೀತಿಸುತ್ತಿದ್ದುದು ತಿಳಿದುದು ! ಈಗ ಅವನು ಅವನಾಗಿರಲಿಲ್ಲ. ಅವನ ಮನಸ್ಸು ಬೇರೆ ಏನನ್ನೂ ಗುರುತಿಸಿಕೊಳ್ಳಲು ಸಿದ್ಧವಿರಲಿಲ್ಲ ! ಹಿಂದೊಮ್ಮೆ ತಾನು ಪ್ರೀತಿಸಿದ್ದ ಹುಡುಗಿಗೆ ಏನೆಂದು ಉತ್ತರ ಕೊಡಬೇಕೆಂಬುದೂ ಅವನಿಗೆ ಹೊಳೆಯುವಂತಿರಲಿಲ್ಲ.

"ನಿನ್ನ ಅಭಿಪ್ರಾಯವೇನು, ಸುಶೀಲಾ ?"

ಸುಶೀಲೆಯ ಸ್ವಭಾವಕ್ಕೆ ತಾಳ್ಮೆಯು ಪರಿಚಯವಿಲ್ಲವಾದರೂ ಅವಳು ಬಹು ಪ್ರಯತ್ನದಿಂದ ತಾಳ್ಮೆ ತಂದುಕೊಳ್ಳಲು ಹೆಣಗುತ್ತಿದ್ದಳು. ಆಕೆಯ ಅಭಿಪ್ರಾಯ ತಿಳಿದುಕೊಳ್ಳಲಾರದ ಗಂಡಸು ಜೀವಿಸುವದಾದರೂ ಏಕೆ ? ಎಂದುಕೊಂಡಳು. ತನ್ನ ಅಭಿಪ್ರಾಯವನ್ನು ಸ್ಪಷ್ಟವಾದ ಶಬ್ದಗಳಲ್ಲಿ ಹೇಳಬೇಕಾದ ಪ್ರಸಂಗ ಬರಬಹುದೆಂದು ಅವಳು ಭಾವಿಸಿರಲಿಲ್ಲ. ಆದರೆ ಹಾಗೆ ಮಾಡದಿದ್ದರೆ ಅವನಿಗೆ ತಿಳಿಯುವಂತೆಯೂ ಇರಲಿಲ್ಲ.

"ನನ್ನ ಅಭಿಪ್ರಾಯವೆಂದರೆ, ನಾವು ಮತ್ತೊಮ್ಮೆ ಲಗ್ನದ ನಿಶ್ಚಯಮಾಡಿಕೊಳ್ಳಬಹುದೆ ?"

ರಾಜಾಸಾಹೇಬನ ದಣಿದ ಮೆದುಳಿನ ಒಂದು ಕೀಲವೇ ತಪ್ಪಿ ಹೋದಂತೆನ್ನಿಸಿತು. ಇದು ಅತಿಯಾಯಿತು, ಯೋಗ್ಯವೂ ಅಲ್ಲ. ಇಡಿಯ ದಿನವನ್ನೇ ಗೊಂದಲದಲ್ಲಿ ಕಳೆದ ಯಾರಿಗೂ ಆ ಪ್ರಶ್ನೆ ಅತಿಯಾದುದೇ ! ಹೀಗೆ ಪ್ರಶ್ನೆಗಳ ಸುರಿಮಳೆ ಕರೆಯುತ್ತಿರುವ ಆಕೆಯ ಉದ್ದೇಶವೇನು ? ಇನ್ನು ಮೇಲೆ ಅವರು ಲಗ್ನವಾಗುವ ಮಾತಾದರೂ ಎಲ್ಲಿಯದು ? ಅವಳು ಬೇರೆಯವನೊಬ್ಬನನ್ನು ಲಗ್ನವಾಗಲು ಒಪ್ಪಿದ್ದಳು, ಆತನೂ ಅಷ್ಟೆ ! ಈ ಎಲ್ಲ ವಿಚಾರ ಬಹಿರಂಗ ಪಡಿಸಲೆಂದು,

"ನಿನ್ನ ಲಗ್ನ ನಿಶ್ಚಿತವಾಗಿದೆ........" ಎಂದ.

"ವಿಲಾಸರಾಯನ ಬಂಧನವನ್ನು ಕಡಿದುಕೊಂಡಿರುವೆ."

"ಹಾ, ಎಂದು ?"

"ಇಂದೇ, ಇದೇ ರಾತ್ರಿ. ಅವನ ನಿಜ ಸ್ವಭಾವದ ಪರಿಚಯವಾಯಿತು, ಒಂದು ವಿಚಿತ್ರ ಸಂಗತಿ ನಡೆಯಿತು: ನಿಮಗೆ ಅದರ ಮಹತ್ವವೆನ್ನಿಸಲಾರದು,

ಆದರೆ ನನಗೆ ಮಾತ್ರ ಅದರಿಂದ ಅವನ ಸ್ವಭಾವದ ಅರಿವಾಯಿತು. ಲೀಲಾ ರಾಣಿ ಒಂದು ಮಂಗವನ್ನು ಸಾಕಿದ್ದಳು........, ಅದು ತನ್ನನ್ನು ಕಚ್ಚಿತೆಂಬ ಕಾರಣದಿಂದ ಅದನ್ನು ಗುಂಡಿಕ್ಕಿ ಕೊಂದ."

"ಯಾರು, ವಿಲಾಸರಾಯನೇ ?"

"ಹೌದು, ಅವನಿಂದ ಅಂಥ ನೀಚ ಕ್ರೂರ ಕೃತಿ ನಡೆಯಬಹುದೆಂದು ನಾನು ತಿಳಿದಿರಲಿಲ್ಲ. ಅದರಿಂದ ನನಗೆ ವ್ಯಸನವಾಗಿ ಅದೇ ಕ್ಷಣ ಅದೇ ಸ್ಥಳ ದಲ್ಲಿ ಅವನು ಕೊಟ್ಟಿದ್ದ ಉಂಗುರವನ್ನು ಅವನ ಮುಖದ ಮೇಲೆ ಬಿಸಾಕಿದೆ. ಅದರಿಂದ ನನಗೆ ಎಷ್ಟು ಸಮಾಧಾನವೆನ್ನಿಸಿತು ! ಅಂಥವನೊಡನೆ ನಾನು ಲಗ್ನದ ಮಾತು ಕೊಟ್ಟುದೇ ಆಶ್ಚರ್ಯದ ಮಾತು."

ತನ್ನೊಡನೆ ಮಾತಾಡುವವರ ಮಾತುಗಳನ್ನೆಲ್ಲ ರಾಜಾಸಾಹೇಬ ನಂಬಿ ಬಿಡುತ್ತಿದ್ದನೇನೋ ಸರಿ. ಆದರೆ ಒಮ್ಮೆ ಆ ನಂಬಿಗೆ ತಪ್ಪೆಂದು ಅವನಿಗೆ ಕಂಡು ಬಂದುದಾದರೆ ಮುಂದೆ ಅವರು ನಿಜವನ್ನೇ ಹೇಳಿದರೂ ನಂಬದಿರುವ ಸ್ವಭಾ ವವೂ ಅವನದಾಗಿತ್ತು. ಸರಳ ಸ್ವಭಾವದ ಎಲ್ಲ ಜನರಂತೆ ಅವನೂ ಅಂಥ ಮಾತುಗಳ ಬಗ್ಗೆ ಮುಂದೆ ಎಚ್ಚರಿಕೆ ವಹಿಸುತ್ತಿದ್ದ. ಅಂತೆಯೇ, ಸುಶೀಲೆ ಎಷ್ಟೇ ಪ್ರಭಾವಶಾಲಿಯಾದ ರೀತಿಯಲ್ಲಿ ಅವನ ಮನವೊಲಿಸಲು ಪ್ರಯತ್ನಿಸು ತ್ತಿದ್ದರೂ ಆತ ಸ್ಥಿರವಾಗಿದ್ದ. ಹಿಂದಿನ ರಾತ್ರಿ ಅವಳ ಭೇಟಿಯಾದಾಗಲೇ ಅವಳನ್ನು ಎಂದಿಗೂ ನಂಬಬಾರದೆಂದು ನಿಶ್ಚಯ ಮಾಡಿಕೊಂಡಿದ್ದ. ಅವಳು ಮಾತಾಡುವುದರ ಹಿಂದೆ ಒಂದು ಗಹನ ಉದ್ದೇಶವಿರುವದೆಂದು ಮೊದಲಿನಿಂ ದಲೂ ತಿಳಿದುಕೊಂಡಿದ್ದ. ಉದ್ದೇಶ ಇಂಥದೇ ಎಂದು ಗುರುತಿಸಲು ಅಸಮರ್ಥ ನಾಗಿದ್ದರೂ ಉದ್ದೇಶವಿರುವುದರ ಬಗ್ಗೆ ಅವನಿಗೆ ಸಂಶಯವೇ ಇರಲಿಲ್ಲ.

"ನಾನು ಏನೋ ಒಂದು ಹುಚ್ಚು ಕಲ್ಪನೆಯಿಂದ ಅವನನ್ನು ಲಗ್ನವಾ ಗಲು ಒಪ್ಪಿದ್ದೆ. ನಿಮ್ಮೊಡನೆ ಸಿಟ್ಟಾದುದಕ್ಕೂ ಅದೇ ಕಾರಣ. ಅಂತೂ ಮಾಡಬಾರದುದನ್ನು ಮಾಡಿದ್ದೆ, ರಾಜಾಸಾಹೇಬ........"

ಈಗಲೂ ಅವಳ ಮಾತಿನಲ್ಲಿ ಅವನಿಗೆ ನಂಬಿಕೆ ಹುಟ್ಟಲಿಲ್ಲ. ಅವಳು ಹೇಳುತ್ತಿದ್ದುದು ಸತ್ಯವಾಗಿರಬಹುದು, ಅವಳು ಹೇಳುವ ರೀತಿಯ ಮೇಲಿಂದ ಅವಳು ಮೂರ್ಖಳಂತೆ ವರ್ತಿಸಿದ್ದುದು ನಿಜವೆಂದು ತೋರುವಂತಿದ್ದರೂ ಆತ ನಿಗೆ ಅವಳ ಮಾತಿನಲ್ಲಿ ನಂಬಿಕೆಯಾಗಲಿಲ್ಲ. ಅವನು ತುಸು ಗೊಂದಲದಲ್ಲಿ

ಜಿದ್ದು ಯೋಚಿಸುತ್ತಿರುವಾಗಲೇ, ಅವನ ಮನ ತಿರುಗಿಸಲೆಂದು ಸುಶೀಲೆ ಬೇರೊಂದು ತಪ್ಪುದಾರಿ ಹಿಡಿದಳು. ಆ ಒಂದು ವಿಷಯ ಬಚ್ಚಿಡಲು ಆಕೆ ಶಕ್ತಿ ಮೀರಿ ಪ್ರಯತ್ನಿಸಿದ್ದಳಾದರೂ ಅದು ಆವಳ ಹೃದಯದಲ್ಲಿ ಅಡಗಿ ಕೂತಿರಲಾರದೆ ಹೊರಕ್ಕೆ ಬಂದಿತು.

"ಸುಂದರರಾವ್ ಸರಕಾರ ಎಷ್ಟು ಒಳ್ಳೆಯವರು, ರಾಜಾಸಾಹೇಬ !"

ಅವನ ಯೋಚನೆಗಳೆಲ್ಲ ಮಾಯವಾಗಿ ಸಮಾಧಾನದ ಉಸಿರೊಂದು ಹೊರಬಂದಿತು. ಆತನ ಕಲ್ಪನಾಶಕ್ತಿ ಅದ್ಭುತವಾಗಿದ್ದಿತಾದರೂ ಆತ ಆಗ ಗೊಂದಲದಲ್ಲಿ ಬಿದ್ದಿದ್ದನಲ್ಲವೇ ? ಈಗ ಅವನಿಗೆ ಎಲ್ಲವೂ ಹೊಳೆಯಿತು. ಅವಳ ಉದ್ದೇಶ ತಿಳಿದುಕೊಳ್ಳಲು ತಡವಾಗಲಿಲ್ಲ.

"ಹಾಗಾದರೆ ನನ್ನ ಪತ್ರ ನಿನಗೆ ಮುಟ್ಟಿದೆ."

"ಹೌದು, ಥಿಯೆಟರಿನವರು ಇಲ್ಲಿಗೆ ರವಾನಿಸಿದ್ದರು. ನಿನ್ನೆಯೇ ನನ್ನ ಕೈಸೇರಿತು."

ತಾನು ಮಾತಾಡಿದುದು ತಪ್ಪಾಯಿತೆಂದು ಅವಳಿಗೆ ತಿಳಿಯಲು ತುಸು ತಡವಾದರೂ ರಾಜಾಸಾಹೇಬ ಆ ತಪ್ಪನ್ನು ತಿಳಿದುಕೊಳ್ಳುವಷ್ಟು ಸೂಕ್ಷ್ಮ ಬುದ್ಧಿಯವನಲ್ಲವೆಂಬುದನ್ನು ನೆನಸಿಕೊಂಡು ಅವನ ಮುಖ ನೋಡಿ ಪರೀಕ್ಷಿಸಿದಳು. ಅವನಿಗೆ ಆ ತಪ್ಪು ತಿಳಿದಿಲ್ಲವೆಂದು ಖಚಿತವಾಯಿತು.

"ಅದು ಎಲ್ಲೆಲ್ಲಿಯೋ ಹೋಗಿತ್ತು. ಕಂಪನಿ ಹೋದ ಕಡೆಗಳಲ್ಲೆಲ್ಲ ಸಂಚಾರ ಮಾಡಿ ನಮ್ಮ ಮನೆ ಕಂಡು ಇಲ್ಲಿಗೆ ಬಂತು."

"ಸರಿ."

ಮತ್ತೆ ಮೌನ. ಸುಶೀಲೆ ಒಂದು ಹೆಜ್ಜೆ ಮುಂದೆ ಬಂದು,

"ರಾಜಾಸಾಹೇಬ...." ಎಂದು ಮೃದು ಸ್ವರದಲ್ಲಿ ಕರೆದಳು.

ಅವನು ಕಣ್ಣು ಮುಚ್ಚಿಕೊಂಡ. ಅವನು ಹೆದರಿಕೊಂಡಿದ್ದ ಸಮಯ ಈಗ ಬಂದಿತು. ಅವಳು ಕಪಟಿಯಾಗಿರಲಿ, ವಂಚಕಳಾಗಿರಲಿ, ಅದೇನು ಮಹತ್ವದ್ದಲ್ಲ. ಅವಳೋರ್ವ ಹೆಂಗಸು—ತಾನೊಬ್ಬ ಗಂಡಸು. ಹೆಚ್ಚಿನ ಯಾವ ಸಂಬಂಧವೂ ಆತನಿಗೆ ಬೇಕಾಗಿರಲಿಲ್ಲ.

"ಹೇಳಲು ವಿಷಾದವೆನ್ನಿಸುತ್ತಿದೆ, ಆದರೆ ಇನ್ನು ನನ್ನ ನಿನ್ನ ಸಂಬಂಧ ಸಾಧ್ಯವಾಗಲಾರದು." ಎಂದು ಆತ ಹೇಳಬೇಕೆಂಬುದನ್ನು ಹೇಳಿ ಮುಗಿಸಿದ.

ಸುಶೀಲೆ ಅವನನ್ನು ಆಶ್ಚರ್ಯದಿಂದ ನೋಡಿದಳು. ಇಂಥ ಖಂಡ ತುಂಡ ಉತ್ತರವನ್ನು ಆಕೆ ನಿರೀಕ್ಷಿಸಿರಲಿಲ್ಲ. ಅದನ್ನು ಎದುರಿಸುವ ಸಿದ್ಧತೆಯನ್ನೂ ಅವಳು ಮಾಡಿಕೊಂಡಿರಲಿಲ್ಲ.

"ರಾಜಾಸಾಹೇಬ...."

"ಕ್ಷಮಿಸು."

"ಆದರೆ....ರಾಜಾಸಾಹೇಬ...."

ಅವನ ತುಟಿಗಳು ಮತ್ತಿಷ್ಟು ಬಿಗಿಯಾದವು. ತನ್ನ ನಿರ್ಣಯ ತಿಳಿಸಿದ ನಂತರ ಇಂಥ ಕಠಿಣ ಪ್ರಸಂಗ ಬರುವದೆಂದು ಆತ ಮೊದಲೇ ತಿಳಿದಿದ್ದ.

"ರಾಜಾಸಾಹೇಬ, ನಾನೆಲ್ಲವನ್ನೂ ತಿಳಿಸಿ ಹೇಳಿದ್ದೇನೆ. ಅದು ಹೇಗೆ?"

"ನನಗೆ ಗೊತ್ತಿದೆ."

ಸುಶೀಲಳ ಕಣ್ಣುಗಳು ಅಗಲವಾದವು.

"ನೀವು ನನ್ನನ್ನು ಪ್ರೀತಿಸುತ್ತಿದ್ದಿರೆಂದು ನಾನು ಭಾವಿಸಿದ್ದೆ." ಅವಳು ಅವನ ಅಂಗಿಯ ತೋಳನ್ನು ಹಿಡಿದಿದ್ದಳು, ಧ್ವನಿಯೂ ಬಿರುಸಾಗಿತ್ತು "ಮೂರ್ಖನಂತೆ ವರ್ತಿಸಬೇಡಿರಿ ರಾಜಾಸಾಹೇಬ. ನೀವೇನು ಮಗುವೇ? ಇಷ್ಟೂ ತಿಳಿಯುವದಿಲ್ಲವೆ. ನಾನು ನಾಚಿಕೆಗೇಡಿಯಂತೆ ನನ್ನ ಹೃದಯವನ್ನೇ ನಿಮ್ಮ ಮುಂದೆ ಬಾಗಿಸಿರುವೆ...." ತುಸು ನಕ್ಕು, "ನನ್ನನ್ನು ನೀವು ಲಗ್ನವಾಗಬೇಕೆಂದು ಬೇಡಿಕೊಳ್ಳುತ್ತಿರುವೆ. ನಿಮ್ಮೊಡನೆ ನಾನು ಸರಿಯಾಗಿ ವರ್ತಿಸಲಿಲ್ಲವೆಂಬುದು ನಿಜ. ಆದರೆ ಅದರ ಕಾರಣವನ್ನೂ ವಿವರಿಸಿದ್ದೇನೆ. ಎಲ್ಲ ತಪ್ಪೂ ನನ್ನದಲ್ಲ. ನಾನೂ ಮನುಷ್ಯಳೇ ಅಲ್ಲವೇ? ತಪ್ಪು ಮಾಡಿದ್ದರೂ ತಿದ್ದಿಕೊಳ್ಳಲು ಯತ್ನಿಸುತ್ತಿರುವೆ. ನಾನು...."

"ಸುಶೀಲಾ ಕೇಳು, ನಾನು ಬೇರೊಬ್ಬಳನ್ನು ಲಗ್ನವಾಗಲು ವಚನವಿತ್ತಿದ್ದೇನೆ."

ಅವಳು ತಟ್ಟನೆ ಹಿಂದೆ ಸರಿದಳು. ತನಗೆ ಸೋಲುಂಟಾಯಿತೆಂಬ ಕಲ್ಪನೆ ಮೊದಲ ಬಾರಿಗೆ ಅವಳಿಗೆ ಬಂದಿತು. ಅವಳು ಅನೇಕ ಘಟನೆಗಳನ್ನೂ ತೊಂದರೆಗಳನ್ನೂ ನಿರೀಕ್ಷಿಸಿದ್ದಳು. ಆದರೆ ಇಂಥ ಪ್ರಸಂಗ ಮಾತ್ರ ಅಪೇಕ್ಷಿಸಿರಲಿಲ್ಲ. ತನ್ನ ದೈವ ತನ್ನೊಡನೆ ಆಟವಾಡುತ್ತಿದ್ದುದಕ್ಕಾಗಿ ಸಿಟ್ಟುಬಂದಿತು.

ತನ್ನಲ್ಲಿದ್ದ ಆಕರ್ಷಣೆಯನ್ನೆಲ್ಲ ಉಪಯೋಗಿಸಿ ಅವನ ಮನವೊಲಿಸಲು ಪ್ರಯತ್ನ ಪಟ್ಟು ಸೋತಿದ್ದಳು.

ಇದೇ ಸಮಯದಲ್ಲಿ ವಿಲಾಸರಾಯ ಲೀಲಾರಾಣಿಯ ಮನೆಯಲ್ಲಿನ ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತು ಒಂದರ ಹಿಂದೊಂದರಂತೆ ಸಿಗರೇಟು ಸೇದುತ್ತಿದ್ದ. ಸುಶೀಲಳೂ ಆತನ ಬಗೆಗೆ ಎಷ್ಟೊಂದು ಪ್ರೇಮ ತಾಳಿದ್ದಳೆಂಬುದು ಅವನಿಗಾಗ ತಿಳಿದಿದ್ದರೆ ಅವನಿಗೆ ಆನಂದವಾಗುತ್ತಿತ್ತೋ, ಏನೋ !

"ಲಗ್ನದ ನಿಶ್ಚಯವಾಗಿದೆಯೇ ಹಾಗಾದರೆ ?" ಸುಶೀಲೆ ಕೇಳಿದಳು

"ಹೌದು."

ಸುಶೀಲೆ ನಗುವನ್ನು ತಂಮಕೊಳ್ಳುತ್ತ,

"ಸರಿ, ಎಷ್ಟು ಬೇಗ ನಿಶ್ಚಿತವಾಗಿದೆಯಲ್ಲ ! ಯಾರೊಡನೆ ?" ಎಂದಳು.

"ಪ್ರಮೀಲಾ ಸರಕಾರಳೊಡನೆ...."

"ನನಗಂತೂ ಅವಳ ಬಗ್ಗೆ ಗೊತ್ತಿಲ್ಲ, ಅವಳಾರು ? ಸುಂದರ್ ರೆಸ್ಟೋರೆಂಟಿನಲ್ಲಿ ನಿಮ್ಮ ಜೊತೆಗಿದ್ದವಳೇ ?"

"ಅಲ್ಲ."

"ಹಾಗಿದ್ದರೆ ಯಾರು ?"

"ಸುಂದರರಾವ್ ಸರಕಾರರ ಸೋದರಸೊಸೆ. ಆ ಹಣವೆಲ್ಲ ಅವಳಿಗೆ ಸೇರಬೇಕಾಗಿತ್ತು. ಅವಳಿಗೆ ನನ್ನಿಂದೇನಾದರೂ ಸಹಾಯ ಮಾಡಲು ಸಾಧ್ಯವೇನೋ ಎಂದು ನೋಡಲು ನಾನು ಮುಂಬಯಿಗೆ ಬಂದಿದ್ದೆ...."

"ನೀವು ಅವಳನ್ನು ಲಗ್ನವಾಗಲಿರುವಿರಾ ? ಅಬ್ಬ, ಎಂಥ ಪ್ರೇಮ— ಅನುಕೂಲ ಪ್ರೇಮ. ಅವಳಿಗೂ ಎಂಥ ಅನುಕೂಲ ಯೋಜನೆ ! ನಿಮ್ಮಿಬ್ಬರ ಈ ಸಂಬಂಧವನ್ನು ಮೊದಲು ಸೂಚಿಸಿದವರಾರು ?"

ರಾಜಾಸಾಹೇಬ ತೀಕ್ಷ್ಣವಾಗಿ ಉಸಿರೆಳೆದುಕೊಂಡ. ಮುಂದೆ ಬರುವ ಅಸಮಾಧಾನದ ಪ್ರಸಂಗ ತಪ್ಪಿಸಿಕೊಳ್ಳಲು ಆತ ಬಯಸಿದರೂ ಅದು ತಪ್ಪುವಂತೆ ಕಂಡುಬರಲಿಲ್ಲ.

ಈವರೆಗೆ ಸೌಮ್ಯವಾಗಿದ್ದ ಸುಶೀಲೆ ಬದಲಾದಳು. ಆ ಸೌಮ್ಯತೆಯ ಹಿಂದೆ ಅಡಗಿದ್ದ ಬೆಂಕಿಯ ಕಿಡಿಗಳು ಪ್ರಜ್ವಲಿಸಹತ್ತಿದವು. ಅವಳು ಕೋಪದಿಂದ,

"ಬುದ್ಧಿಗೇಡಿ ರಾಜಾಸಾಹೇಬ್, ನಿನಗೆ ಕಣ್ಣುಗಳೂ ಇಲ್ಲವೇನು ? ಈ ಹುಡುಗಿ ನಿನ್ನಲ್ಲಿನ ಹಣವನ್ನೇ ನೋಡುತ್ತಿದ್ದುದು ಗೊತ್ತಾಗುವದಿಲ್ಲವೇ? ಚಿಕ್ಕ ಮಗುವೂ ಅದನ್ನು ಗುರುತಿಸಿಕೊಳ್ಳಬಹುದು." ಅವನನ್ನು ಏಕವಚನದಿಂದಲೇ ಸಂಬೋಧಿಸಿ ಹೇಳಿದಳು.

ರಾಜಾಸಾಹೇಬ ಗಂಭೀರ ನೋಟವೊಂದನ್ನು ಅವಳತ್ತ ಬೀರಿ,

"ನೀನು ಅವಳ ಬಗ್ಗೆ ತಪ್ಪು ತಿಳಿದಿರುವಿ. ನಾನಾರೆಂಬುದೇ ಅವಳಿಗೆ ಗೊತ್ತಿಲ್ಲ." ಎಂದ.

"ನೀನಾರೆಂಬುದೂ ಅವಳಿಗೆ ಗೊತ್ತಿಲ್ಲವೇ ? ನೀನನ್ನುವದರ ಅರ್ಥ ವೇನು ? ಅವಳ ಮಾವ ತನ್ನ ಹಣ ಬಿಟ್ಟು ಹೋದುದು ನಿನಗೆಂದು ಈಗಾಗಲೇ ಅವಳಿಗೆ ತಿಳಿದಿರಬೇಕು."

"ನಾನೇ ಅತ್ತಿಗೇರಿ ರಾಜಾಸಾಹೇಬನೆಂದು ಆಕೆ ಅರಿಯಳು. ಬೇರೆ ಹೆಸರನ್ನಿಟ್ಟುಕೊಂಡು ನಾನು ಮುಂಬಯಿಗೆ ಬಂದಿದ್ದೇನೆ. ನನ್ನನ್ನು ಅವಳು ಅಣ್ಣಾಸಾಹೇಬ ಅತ್ತೀಗೇರಿ ಎಂದು ಮಾತ್ರ ಬಲ್ಲಳು."

ಕ್ಷಣಕಾಲ ಅವಳು ಸುಮ್ಮನಾಗಿ,

"ನಿಮಗೆ ಆವಳ ಪರಿಚಯವಾದುದು ಹೇಗೆ?" ಎಂದು ಶಾಂತಳಾಗಿಯೇ ಕೇಳಿದಳು.

"ಅವಳ ಅಣ್ಣ ನನಗೆ ಇಲ್ಲಿ ಅಕಸ್ಮಾತ್ ಸಿಕ್ಕಿದ್ದ."

"ಅಕಸ್ಮಾತ್........"

"ಹೌದು. ಆಕಸ್ಮಾತ್ತಾಗಿ. ಗೊಬ್ಬೂರಿನ ಪರಿಚಿತರೊಬ್ಬರು ತಮ್ಮ ಇಲ್ಲಿನ ಮನೆಯನ್ನು ನನಗೆ ಇರಲು ಕೊಟ್ಟಿದ್ದರು. ಅವನಿಗೆ ಈ ಸರಕಾರ ಕುಟುಂಬದ ಗುರುತೂ ಇದೆ. ಒಂದು ದಿನ ಪ್ರಮೀಲೆಯ ಅಣ್ಣ ತನ್ನ ಆ ಗೆಳೆಯನನ್ನು ನೋಡಲು ಬಂದ. ನನಗೂ ಆವನಿಗೂ ಪರಿಚಯವಾಗಿ ಸ್ನೇಹ ಬೆಳೆಯಿತು.

"ನಿಮ್ಮಿಬ್ಬರಿಗೂ ಗೆಳೆಯನಾಗಿರುವ ಆ ಮನೆಯಾತ ಮುಂಬಯಿ ಬಿಟ್ಟು ಹೋಗಿ ಬಹಳ ದಿನಗಳಾದುವೇನು ?"

"ನಾಲ್ಕಾರು ತಿಂಗಳು."

"ಅಷ್ಟೊಂದು ಅವಧಿಯಲ್ಲಿ ಈ ನಿನ್ನ ಮಿಸ್ಟರ್ ಸರಕಾರನಿಗೆ ಅವನ ಸ್ನೇಹಿತ ಊರಲ್ಲಿಲ್ಲದಿದ್ದುದು ತಿಳಿದಿರಲಿಲ್ಲವೇ ? ಹಾಗಿದ್ದರೆ ಅವರೊಳ್ಳೆಯ ಗೆಳೆಯರು ! ಮುಂದೇನಾಯಿತು ?"

"ಕಮಲಾಕಾಂತ ಸರಕಾರ ನನ್ನನ್ನು ಇಲ್ಲಿಗೆ ಬರಲು ಆಮಂತ್ರಿಸಿದ."

ತಮ್ಮ ಮನೆಗೇ ?"

"ಹೌದು. ಅವರು ವಾಸವಾಗಿರುವ ಈ ಮನೆಗೆ."

"ಜೇನು ಸಾಕಿರುವ ಹುಡುಗಿಯೇ ಪ್ರಮಿಲಾ ಸರಕಾರಳೇನು ?"

"ಹೌದು."

ಅವಳ ಕಣ್ಣುಗಳು ತೇಜಃಪುಂಜವಾದವು. ಧ್ವನಿಯೂ ಮೇಲಕ್ಕೇರಿತು.

"ಅಯ್ಯೋ ರಾಜಾಸಾಹೇಬ, ನೀನೊಂದು ಮಗು, ತಿಳುವಳಿಕೆಯಿಲ್ಲದ ಮಗು ! ಖಂಡಿತವಾಗಿ ಅವಳು ನಿಮ್ಮ ಹಣದ ಮೇಲೆ ದೃಷ್ಟಿಯನ್ನಿರಿಸಿದ್ದಾಳೆ. ಅವರಿಬ್ಬರಿಗೂ ಅತ್ತೀಗೇರಿಯ ರಾಜಾಸಾಹೇಬ ನೀವೇ ಎಂದು ತಿಳಿದಿಲ್ಲವೆನ್ನುವಿರಲ್ಲವೇ ? ನಿಮ್ಮ ಸ್ವಭಾವವೇ ಹಾಗೆ, ಎಲ್ಲರನ್ನೂ ನಂಬಿ ಬಿಡುವದು. ಕಮಲಾಕಾಂತ ಆಕಸ್ಮಾತ್ತಾಗಿ ಭೆಟ್ಟಿಯಾಗಿ ಇಲ್ಲಿ ಬಂದಿರಲು ಆಮಂತ್ರಿಸಿದನಂತೆ ! ಆತ ಆಮಂತ್ರಿಸದೇನು ಮಾಡಿಯಾನು ? ಅವನ ಕೆಲಸ ಅವನಿಗೆ ಗೊತ್ತಿಲ್ಲವೇ ? ನೀವು ಆ ಹುಡುಗಿಯನ್ನು ಲಗ್ನವಾಗಲಿದುವಿರಿ, ಸರಿ. ಅವರ ಹಣ ಅವರಿಗೆ ಸಿಕ್ಕಂತಾಯಿತು. ಶಹಬ್ಬಾಸ್ ! ಅಹಾ ರಾಜಾಸಾಹೇಬ, ನಿಮ್ಮ ಬುದ್ಧಿ ಅಮೋಘವಾದುದು ! ನಿಮ್ಮ ಬುದ್ಧಿಗೇಡಿತನ ಕಂಡು ಬಹಳ ವಿಷಾದವೆನ್ನಿಸುತ್ತದೆ."

ಅವಳು ಹೊರಳಿದಳು. ಮುಂದೆ ಹೋಗುತ್ತಿದ್ದಂತೆ ಕತ್ತು ತಿರುಗಿಸಿ,

"ನಮಸ್ಕಾರ, ಬರುತ್ತೇನೆ." ಎಂದಳು.

ದಾರಿಯಮೇಲೆ ಹೋಗುತ್ತಿದ್ದ ಅವಳ ನಗು ಇನ್ನೂ ಕೇಳಬರುತ್ತಿದ್ದಿತು.

ಲೀಲಾರಾಣಿಯ ಮನೆಯ ಒಂದು ಕೋಣೆಯಲ್ಲಿ ವಿಲಾಸರಾಯ ಒಂದರ ಹಿಂದೆ ಮತ್ತೊಂದರಂತೆ ಸಿಗರೇಟು ಸೇದುತ್ತಲಿದ್ದ. ಅವನ ಜೊತೆಗಿದ್ದವರೆಂದರೆ ಅವನ ತಲೆಯಲ್ಲಿ ತುಂಬಿದ್ದ ವಿಚಾರಗಳು ಮಾತ್ರ. ಆ ಒಂದು ತಾಸಿನಲ್ಲಿ ಸರದಾರರೊಮ್ಮೆ ಆ ಕೋಣೆಯಲ್ಲಿ ಇಣಿಕಿ ನೋಡಿ ತಿರುಗಿ ಹೋಗಿದ್ದರು. ಶಹಾ ಒಮ್ಮೆ ಬಂದು ವಿಲಾಸರಾಯನೊಡನೆ ಮಾತು ಬೆಳಸಿದ್ದ. ಆದರೆ ವಿಲಾಸರಾಯನ ಸಹವಾಸದಲ್ಲಿ ಉತ್ಸಾಹ, ನಗೆ, ಮೋಜುಗಳಿಗೆ ಆಸ್ಪದ ಸಿಗದೆ ಹೊರಟುಹೋಗಿದ್ದ. ಹೀಗೆ ವಿಲಾಸರಾಯ ತನ್ನಷ್ಟಕ್ಕೆ ತಾನೇ ಆಲೋಚನೆ ನಡಸಿದ್ದ, ಅಂತರಾತ್ಮನೊಡನೆ ಮಾತಾಡುತ್ತಿದ್ದ !

ಅಂತರಾತ್ಮ ಎಂದಿಗೂ ಒಳ್ಳೆಯ ಗೆಳೆಯನಾಗಲಾರದು. ಹೃದಯದ ಯಾವುದೋ ಒಂದು ಮೂಲೆಯಲ್ಲಿ ಕತ್ತಲೆಯಲ್ಲಿ ಅಡಗಿ ಕುಳಿತ ಅಂತರಾತ್ಮ ಮನುಷ್ಯನಿಂದ ಅಸಾಧ್ಯವೆನ್ನಿಸುವದನ್ನೇ ನಿರೀಕ್ಷಿಸುವದು. ಮನುಷ್ಯನ ಅಸಹಾಯಕತೆ—ಅಶಕ್ತತೆಯನ್ನು ಮೂದಲಿಸಿ ಇನ್ನಿಷ್ಟು ವ್ಯಸನ ಮತ್ತು ದುಃಖ ಹೆಚ್ಚಿಸುವದು. ರಾತ್ರಿಯ ಬಹುಭಾಗ ನಿದ್ರೆಯಿಲ್ಲದೆ ಅಂತರಾತ್ಮನ ಸಹವಾಸದಲ್ಲಿ ಕಳೆದು ಹೋದನಂತರ ಒಂದು ತತ್ವದ ನೆನಪಾಯಿತು: ಈ ಶರೀರವೆಂದರೇನು ? ಮಾಂಸದ ಮುದ್ದೆ, ಒಂದಿಲ್ಲೊಂದು ದಿನ ಬಿದ್ದು ಹೋಗಿ ಮಣ್ಣಿನೊಡನೆ ಸೇರಿ ಬೀಳುವದು. ಪ್ರತಿ ದಿನ ರಾತ್ರಿ ಊಟವಾದ ನಂತರ ಮಲಗುವ ವರೆಗಿನ ವೇಳೆಯನ್ನು ಆನಂದದಿಂದ ಕಳೆಯುವದು ವಿಲಾಸರಾಯನ ರೂಢಿ. ಆದರೆ ಇಂದಿನ ರಾತ್ರಿ ಇತರ ರಾತ್ರಿಗಳಿಗೆ ತೀರ ವಿರುದ್ಧವಾಗಿತ್ತು. ಕೆಲ ಸಮಯದ ಹಿಂದೆ ನಡೆದು ಹೋದ ಘಟನೆಗಳಿಂದ ಅವನ ಮನಸ್ಸಿಗೆ ಬಲವಾದ ಪೆಟ್ಟು ಬಿದ್ದಿತ್ತು.

ಓರ್ವ ಬಡಕಲು ದೇಹದ ತೀಕ್ಷ್ಣ ದೃಷ್ಟಿಯ ದಪ್ಪ ಮೀಸೆಯ ಮನುಷ್ಯನನ್ನು ಕಲ್ಪಿಸಿಕೊಂಡು ವಿಲಾಸರಾಯನ ಎದುರಿಗೆ ನಿಲ್ಲಿಸಿ ಅದನ್ನೇ ಅಂತರಾತ್ಮ ಎಂದು ಕರೆದು ಅವರ ಸಂಭಾಷಣೆಯನ್ನು ಮುಂದುವರಿಸುವಾ.

ವ್ಯಂಗವಾಗಿ ನಗುತ್ತ ಅಂತರಾತ್ಮ ಹೇಳಿದ:

"ವಿಲಾಸರಾಯಾ, ನೀನು ನಾಳಿನ ದಿನ ಈ ಸ್ಥಳದಿಂದ ಹೊರಟು ಹೋಗು. ಇಷ್ಟೆಲ್ಲ ನಡೆದು ಹೋಗಿದ್ದರೂ ನೀನು ಇಲ್ಲಿಯೇ ಇರುವದೇ ? ಹುಡುಗತನದ ಪರಿಣಾಮ ಗೊತ್ತಾಯಿತೇ ?"

ವಿಲಾಸರಾಯ ತುಸು ಮುದುಡಿಕೊಂಡ. ಅಂತರಾತ್ಮನ ಮಾತುಗಳು ಸಾಗಿದವು.

"ಆ ನಿನ್ನ ಪಿಸ್ತೂಲು, ನೀನು ಆ ಮನುಷ್ಯನನ್ನು ಬೆನ್ನತ್ತಿದುದು, ಅಡಗಿ ಕುಳಿತುದುದರ ಕಾರಣವೇನು ? ನೀನು ಮೂರ್ಖನೆಂದಂತಾಗಲಿಲ್ಲವೆ ? ನಿನ್ನ ವಯಸ್ಸಿಗೆ ಅದು ಸರಿಯಾದುದೇ? ನಡುವಯಸ್ಸಿಗೆ ಬಂದರೂ ಹುಡುಗತನದ ಆ ಮಂಗಬುದ್ಧಿ ಹೋಗಿಲ್ಲವಲ್ಲ ? ನಾಳೆ ಮೊದಲನೇ ಟ್ರೇನಿನಿಂದಲೇ ಹೊರಡು. ನೀನಿನ್ನೂ ಚಿಕ್ಕ ಮಗುವೆಂದು ತಿಳಿದುಕೊಳ್ಳಬೇಡ. ನಿನ್ನ ಗೌರವವನ್ನುಳಿಸಿ ಕೊಳ್ಳಬೇಕಿದ್ದರೆ ಇನ್ನೊಮ್ಮೆ ರಾತ್ರಿಯಲ್ಲಿ ಗುಡ್ಡಗಳಲ್ಲಿ ಅಥವಾ ಗಿಡಗಂಟಿಗಳಲ್ಲಿ ಹಾಗೆ ಅಡಗುವ ಸಾಹಸ ಮಾಡಬೇಡ, ತಿಳಿಯಿತೇ ?"

ವಿಲಾಸರಾಯ ಮತ್ತೊಂದು ಸಿಗರೇಟು ಹೊತ್ತಿಸಿ ಹಟವಾದಿಯಂತೆ ಸೇದಹತ್ತಿದ. ಮೇಲೆ ಅಂತರಾತ್ಮ ಹೇಳಿದ್ದೆಲ್ಲವೂ ಸುಳ್ಳು ಎಂದು ಸಾಧಿಸ ಹೊರಟು ಆತ ವಿಫಲನಾಗುತ್ತಿದ್ದ. ಸಿಗರೇಟಿನ ಬೆಂಕಿ ಬೆರಳು ಸುಟ್ಟದ್ದರಿಂದ ಅದನ್ನು ಬಿಸಾಕಿದ. ತನ್ನ ಪ್ಯಾಂಟಿನ ಜೇಬಿನಲ್ಲಿದ್ದ ಉಂಗುರವನ್ನು ಹೊರಕ್ಕೆ ತೆಗೆದು ನೋಡಹತ್ತಿದ.

"ಅಹಾ, ಎಷ್ಟು ಸುಂದರವಾಗಿದೆಯಲ್ಲ ! ಅಲ್ಲವೇ ?" ಅಂತರಾತ್ಮನ ಪ್ರಶ್ನೆ.

ವಿಲಾಸರಾಯ ನಿಡಿಯುಸಿರು ಎಳೆದುಕೊಂಡ. ಸುಶೀಲೆ ಆ ಉಂಗುರ ವನ್ನು ನೆಲಕ್ಕೆ ಚೆಲ್ಲಿದ ಕ್ಷಣದಲ್ಲಿ, ಮೊದಲೇ ಗಾಯಗೊಂಡಿದ್ದ ಆತನ ಹೃದ ಯದ ಮೇಲೆ ಯಾರೋ ಬರೆ ಕೊಟ್ಟಂತಾಗಿದ್ದುದನ್ನು ನೆನಸಿಕೊಂಡ. ಅಂತ ರಾತ್ಮನಿಗೆ ಮತ್ತೊಮ್ಮೆ ಸಂಧಿ ಸಿಕ್ಕಿತು, ಮೂದಲಿಸಲು ಪ್ರಾರಂಭಿಸಿತು.

"ನಿನ್ನ ಮೂರ್ಖತನದಿಂದಾಗಿ ನೀನು ಅವಳನ್ನು ಕಳೆದುಕೊಂಡಿ. ನಿನ್ನ ವರ್ತನೆಯ ಬಗ್ಗೆ ನನಗೆ ಆಶ್ಚರ್ಯವೆನ್ನಿಸುತ್ತದೆ. ಹದಿನಾಲ್ಕರ ಹುಡುಗನಂತೆ ಪಿಸ್ತೂಲು ಹಿಡಿದು ಓಡಾಡುವದೇ ? ಆದದ್ದು ಆಗಿ ಹೋಯಿತು, ವ್ಯಸನ ವೇಕೆ ! ಲಗ್ನ ರದ್ದುಗೊಳಿಸಿ ಎಲ್ಲರಿಗೂ ತಿಳಿಸು. ನಿನ್ನ ಆಪ್ತೇಷ್ಟರಿಗೂ

ವಾದ್ಯದವರಿಗೂ ಇನ್ನಾರಿಗಾದರೂ ಲಗ್ನದ ವಿಚಾರ ತಿಳಿಸಿದ್ದರೆ ಅವರಿಗೆಲ್ಲರಿಗೂ ಈ ಸುದ್ದಿ ಕಳಿಸು. ವಿಲಾಸರಾಯಾ, ನಿನ್ನ ಹಣೆಗೆ ಬಾಸಿಂಗ-ಬಲ ಇದ್ದಂತೆ ಕಾಣುವದಿಲ್ಲ. ಮೂರ್ಖ....ಮೂರ್ಖ....ಶತಮೂರ್ಖ! ನಿನ್ನ ಮನೆಯಲ್ಲಿ ಪುಟ್ಟ ಪಾದಗಳು ಓಡಾಡುವದನ್ನು, ಅಪ್ಪಾ ಎಂದು ನಿನ್ನನ್ನು ಕರೆಯುವದನ್ನು ಇವು ಯಾವುದನ್ನೂ ನೀನು ಬೇಡಿ ಬಂದಂತಿಲ್ಲ. ಬುದ್ಧಿಗೇಡಿ ವಿಲಾಸರಾಯ! ತಲೆಬುರುಡೆಯೊಂದನ್ನೇ ಹೊತ್ತು ಬಂದ ಮಂಗ ವಿಲಾಸರಾಯ! ಮೆದುಳಿಲ್ಲದ ವಿಲಾಸರಾಯ....ಹಹ್ಹಾ...."

ವಿಲಾಸರಾಯನ ಅಂತರಾತ್ಮ ತುಸು ಕಠೋರವಾಗಿ ಮಾತಾಡಿದ್ದರೂ ಅದರಲ್ಲಿ ಅಸತ್ಯವಿರಲಿಲ್ಲ. ಪ್ರತಿ ಶಬ್ದ ಸತ್ಯವಾಗಿತ್ತು. ಆ ಉಂಗುರವನ್ನು ಜೇಬಿನಲ್ಲಿರಿಸಿಕೊಂಡು ತಲೆಗೆ ಎರಡೂ ಕೈ ಹಚ್ಚಿಕೊಂಡು ಕುಳಿತ, ವಿಲಾಸರಾಯ.

ಸುಶೀಲಳನ್ನು ಕಳೆದುಕೊಂಡುದಂತೂ ಸತ್ಯ. ಅವಳು ಆತನನ್ನು ದೂರ ಚೆಲ್ಲಿದ್ದಳು. ಆ ನಾರೀ ರತ್ನ ಇನ್ನು ಮುಂದೆ ಅವನ ಜೊತೆಗೆ ಕುಳಿತು ಊಟ ಮಾಡಲು ಸಾಧ್ಯವೇ? ಅವಳೊಡನೆ ವಿಲಾಸರಾಯ ತನ್ನೂರಿಗೆ ಹೋಗಿದ್ದರೆ ಅವಳ ಸೌಂದರ್ಯವನ್ನೇ ಎಲ್ಲರೂ ನೋಡಬಹುದಿತ್ತು! ಊರಿನ ಚಿಂತೆಯಲ್ಲ ಅದು! ಆತ ತನಗಾಗಿಯೇ ದುಃಖಿಸುತ್ತಿದ್ದ. ಅವಳಿಲ್ಲದೆ ಆತ ಆ ಊರಲ್ಲಿ ವಾಸವಾಗಿರುವದಾದರೂ ಹೇಗೆ ಸಾಧ್ಯ?

ಹೀಗೆ ವ್ಯಸನದಲ್ಲಿ ತುಸು ಸಮಯ ಕಳೆದ ನಂತರ ಅವನ ಅಂತರಾತ್ಮ ಅವನನ್ನು ದಿಟ್ಟಿಸಿ ನೋಡಿ,

"ನೀನೊಂದು ವಿಚಿತ್ರ ಪ್ರಾಣಿ...." ಎಂದಿತು.

"ಅಂದರೆ?"

"ಅವಳನ್ನು ಕಳೆದುಕೊಂಡುದಕ್ಕೆ ನಿನಗೆ ಸಮಾಧಾನವಾಗಿಲ್ಲವೆ? ಅವಳೊಡನೆ ನಿನ್ನ ಲಗ್ನ ತಪ್ಪಿತಲ್ಲ ಎಂದು ಆನಂದವಾಗಲಿಲ್ಲವೆ, ಪೀಡೆ ತೊಲಗಿತೆಂದು? ನೀನು ಬೇರೆಯವರನ್ನು ಮೋಸ ಮಾಡಬಹುದು, ನನ್ನನ್ನು ಮಾತ್ರ ಸಾಧ್ಯವಿಲ್ಲ. ನಿನಗೆ ಹರ್ಷವಾಗಿದೆ ಆನಂದವಾಗಿದೆ...."

ಅಂತರಾತ್ಮನ ಈ ಮಾತುಗಳಿಂದ ವಿಲಾಸರಾಯನಲ್ಲಿ ಕೋಲಾಹಲವೇ ಎದ್ದಿತು. ಮೇಲಾಗಿ ಅವುಗಳಲ್ಲಿ ಕಾಲ್ಪನಿಕವಾದುದೇನೂ ಇರಲಿಲ್ಲ. ಅವನು

ಹಾಗೆ ಯೋಚಿಸುತ್ತಿದ್ದುದೂ ನಿಜವೇ ಆಗಿತ್ತು. ಆದರೆ ಅಷ್ಟೊಂದು ಸ್ಪಷ್ಟ ಶಬ್ದವನ್ನು ಅವನ ಅಂತರಾತ್ಮ ನುಡಿದು ಅವನ ಅಭಿಪ್ರಾಯವನ್ನು ನಿಷ್ಠುರವಾಗಿ ಬಯಲಿಗೆಳೆದಿತ್ತು. ಸಂಕಟದೊಳಗಿಂದ ಪಾರಾದೆನಲ್ಲ ಎಂದು ಅವನಿಗೆನ್ನಿಸಿದ್ದುದೂ ನಿಜವೇ. ಅರ್ಧ ತಾಸಿನ ಹಿಂದೆಯೇ ಆತನಿಗೆ ಅಂಥ ಸಮಾಧಾನವಾದುದು ಈಗ ಅವನ ನೆನಪಿಗೆ ಬರುತ್ತಿದ್ದಿತು. ಆ ವಿಚಾರ ಆತನಲ್ಲಿ ಹೇಗೆ ಬಂದಿತೆಂದು ಹೇಳಲು ಆತ ಅಸಮರ್ಥನಾಗಿದ್ದರೂ ಆ ವಿಚಾರ ಬಂದ ಬಗ್ಗೆ ಅವನಿಗೆ ಸಂಶಯವೇ ಉಳಿಯಲಿಲ್ಲ. ನರಕದಿಂದ ಪಾರಾದ ಅನುಭವವಾಗಿರಲಿಲ್ಲವೇ, ತನಗೆ? ಅಂತರಾತ್ಮ ಹೇಳತೊಡಗಿತು.

"ನಿನ್ನ ಆತ್ಮವನ್ನೇ ವಂಚಿಸಬೇಡ, ವಿಲಾಸರಾಯ. ಆದರೊಡನಾದರೂ ಪ್ರಾಮಾಣಿಕನಾಗಿರು. ಪ್ರಾಮಾಣಿಕತನಕ್ಕೂ ನಿನ್ನಲ್ಲಿ ಕೊರತೆ ಇದೆ, ಅನ್ನು. ನಡೆದುಹೋದ ಸಂಗತಿಗಳನ್ನು ಸ್ಪಷ್ಟವಾಗಿ ಪರೀಕ್ಷಿಸಿ ನೋಡು. ಲಗ್ನದ ಮಾತು ಎಂದರೆ ನೀನು ಯಾವಾಗಲೂ ಹಿಂದೆ ಸರಿಯುವಿ. ಲಗ್ನ ಎಂಬ ಶಬ್ದ ಕೇಳಿದರೇ ಸಾಕು, ನಿನ್ನ ಮನಸ್ಸಿಗೆ ಭಯ. ಲಗ್ನದ ದಿನ ಸಾರ್ವಜನಿಕವಾಗಿ ನಿನ್ನನ್ನೇ ನೀನು ಮೆರೆದಾಡಿಸಲು ಇಚ್ಛಿಸುವದಿಲ್ಲ. ಯೋಚಿಸು, ಎಲ್ಲರ ಎದುರಿನಲ್ಲಿ ನಿಂತು ಅಕ್ಷೀಕಾಳು ಹಾಕಿಸಿಕೊಳ್ಳಬೇಕಾದ ದೃಶ್ಯ ಕಲ್ಪಿಸಿಕೊಂಡು ನೋಡು! ಅನಂತರ ಆ ಹುಡುಗಿಯೊಡನೆ ನೀನು ಸುಖಿಯಾಗಿರಬಹುದೆಂದು ಭಾವಿಸುವದಾದರೂ ಯಾವ ಆಧಾರಗಳ ಮೇಲೆ? ಅವಳ ಸೌಂದರ್ಯವೊಂದನ್ನು ಬಿಟ್ಟರೆ ಅವಳ ಬೇರಾವ ಗುಣಗಳ ಪರಿಚಯುವಿದೆ ನಿನಗೆ? ಅವಳು ಸುಂದರಿಯೆನ್ನುವ ಮಾತನ್ನು ನಾನೂ ಒಪ್ಪಿಕೊಳ್ಳುತ್ತೇನೆ. ಆದರೆ............ ಬಾಹ್ಯರೂಪವೊಂದೇ ಗೃಹಿಣಿಗೆ ಅಗತ್ಯವಾದ ಗುಣವಲ್ಲ. ಅದೊಂದಿದ್ದರೆ ದಾಂಪತ್ಯ ಜೀವನ ಸುಖಮಯವಾಗುವದೆಂದು ನೀನು ನಂಬಿದ್ದರೆ, ತಪ್ಪು. ಅಪ್ಸರೆಯ ರೂಪದವಳಿಗಿಂತಲೂ ಸಾದಾ ಹೆಣ್ಣೊಂದು ಉತ್ತಮ ಗೃಹಿಣಿಯಾಗಬಲ್ಲಳೆಂಬುದು ನಿನಗೆ ಈಗಾಗಲೇ ತಿಳಿದಿದೆ. ಅವಳು ಕಠಿಣ ಹೃದಯದವಳಲ್ಲವೇ? ಅವಳ ಮನಸ್ಸು ಹೃದಯಗಳೆರಡೂ ಕಬ್ಬಿಣದಂತಿವೆ. ಆದನ್ನೇ ಪ್ರಾಮಾಣಿಕವಾಗಿ ಒಪ್ಪು.

ನೀನು ಲಗ್ನವಾಗಲು ಇಚ್ಛಿಸುತ್ತಿರುವಿಯೆಂದು ಭಾವಿಸೋಣ. ಅಂಥ ಅವಶ್ಯಕತೆಯೇ ನಿನಗಿಲ್ಲವೆಂದು ನನ್ನ ಅಭಿಪ್ರಾಯ. ನಿನಗೆ ಕೈತುಂಬ ಕೆಲಸ

ಗಳಿಲ್ಲವೇ ? ಅದರಲ್ಲೂ ಈ ಹುಡುಗಿ ಮಾತ್ರ ಖಂಡಿತ ಬೇಡ. ಬೇರೆ ಇನ್ನಾವಳಾದರೂ ಸಿಕ್ಕರೆ ಅಡ್ಡಿಯಿಲ್ಲ. ನೀನು ತಾರುಣ್ಯ ದಾಟಿ ಮಧ್ಯಮ ವಯಸ್ಸು ಮುಟ್ಟಿರುವಿ. ಈ ವಯಸ್ಸಿಗನುಸಾರವಾಗಿ ಶಾಂತ ಸುಖಮಯ ಜೀವನವನ್ನು ನೀನು ಬಯಸುವದು ಸಹಜ. ಆ ಹರೆಯದ ಹುಡುಗಿಗೆ ರೋಮಾಂಚಕಾರಿ ಜೀವನ ಬೇಕು. ಹತ್ತಿಪ್ಪತ್ತು ವರ್ಷಗಳಿಂದ ನಿನಗೆ ಅಂಟಿಕೊಂಡ ಕೆಲವು ಚಟಗಳೂ ಸ್ವಭಾವ ಗುಣಗಳೂ ಇವೆ. ಅವೆಲ್ಲವನ್ನೂ ಅವಳು ಸಮಾಧಾನದಿಂದ ನೋಡಿಕೊಳ್ಳಬಹುದೇ ? ಒಂದು ವೇಳೆ ನೀನು ಅವಳನ್ನು ಮನಸ್ಸಿನಿಂದ ಪ್ರೀತಿಸಿದ್ದೆಯಾದರೆ ಅಥವಾ ಅವಳು ಅನೇಕ ದಿನಗಳಿಂದ ನಿನ್ನನ್ನು ಬಲ್ಲವಳಾಗಿದ್ದರೆ, ಆ ಮಾತು ಬೇರೆ; ಪರಸ್ಪರರ ಗುಣ-ಸ್ವಭಾವಗಳ ಪರಿಚಯವಿದ್ದ ನೀವಿಬ್ಬರೂ ಹೊಂದಿಕೊಂಡು ಆನಂದದಿಂದ ಕಾಲ ಕಳೆಯಬಹುದಿತ್ತು. ಆದರೆ ನಿನಗೆ ಅವಳಲ್ಲಿ ಪ್ರೇಮವೇ ಇಲ್ಲ. ಅವಳ ಸೌಂದರ್ಯಕ್ಕೆ ಮೋಹಿತನಾದವನು ನೀನು. ನಿನ್ನ ಉಂಗುರವನ್ನು ಆಕೆ ವಾಪಸು ಕೊಟ್ಟ ಗಳಿಗೆಯೆಂದರೆ ನಿನ್ನ ಜೀವನದ ಶುಭ ಗಳಿಗೆಯೆಂದು ತಿಳಿದುಕೊಳ್ಳಬೇಕೆಂದು ನನ್ನ ಇಚ್ಛೆ. ಆ ಶುಭ ಗಳಿಗೆಯ ವಾರ್ಷಿಕೋತ್ಸವ ನೆರವೇರಿಸುತ್ತ ಹೋಗು. ಅದರ ನೆನಪಿಗಾಗಿ ದಾನ ಕೊಡು. ಅದರ ನೆನಪಿನಲ್ಲಿ ಒಂದು ಆಸ್ಪತ್ರೆಯನ್ನೋ ಇನ್ನೇನನ್ನೋ ಕಟ್ಟಿಸು. ಆ ಗುಡ್ಡ-ಗಿಡಗಂಟೆಗಳಲ್ಲಿ ರಾತ್ರಿಯಲ್ಲಿ ಹುಡುಗತನದಿಂದ ಸುತ್ತುವದನ್ನು ಬಿಡು ವಿಚಾರವಂತ ಮನುಷ್ಯನಾಗಿ ಬಾಳು."

ವಿಲಾಸರಾಯನಿಗೆ ಅಂತರಾತ್ಮನ ಮಾತಿನಲ್ಲಿ ನಂಬುಗೆಯಾಯಿತು, ಚೇತನೆಯೂ ಬಂದಿತು. ಅಂತರಾತ್ಮನ ಮಾತು ಸಾಗಿಯೇ ಇದ್ದವು.

"ಲಗ್ನ ! ಲಗ್ನವೆಂದರೇನು ? ಗುಲಾಮಗಿರಿ ! ನಿನ್ನ ವ್ಯಕ್ತಿತ್ವ ಕಳೆದುಕೊಂಡು ವಿವೇಕಕ್ಕೆ ವಿರುದ್ಧವಾಗಿ ವರ್ತಿಸುವದು ! ಲಗ್ನವಾಗಿರುವವರ ಸಂಕಟಗಳನ್ನು ನೀನೇನು ನೋಡಿರುವದಿಲ್ಲವೇ ? ಅದೂ ಇರಲಿ. ಲಗ್ನವಾಗಿ ಸಂಕಟ ಪಡುವವರ ಬಗ್ಗೆ ಆಧುನಿಕ ಕಾದಂಬರಿಗಳಲ್ಲಿಯಾದರೂ ಓದಿಲ್ಲವೇ ? ಆ ಲೇಖಕರೇನು ಸಾಮಾನ್ಯರೇ ? ಧೂರ್ತರು ! ಅವರು ಎಲ್ಲವನ್ನು ಅನುಭವಿಸಿ ನೋಡಿಕೊಂಡೇ ಮುಂದಿನವರ ಎಚ್ಚರಿಕೆಗಾಗಿ ಬರೆದಿರುತ್ತಾರೆ. ನಿನ್ನ ಉದ್ಯೋಗದ ಬಗ್ಗೆ ನಿನ್ನ ಹೆಂಡತಿಯ ಮುಂದೆ ಹೇಳುತ್ತ ಕೂತರೆ ನಿನ್ನಲ್ಲಿ ಪ್ರೀತಿಯೇ ಇಲ್ಲವೆನ್ನುವಳು; ಹೇಳುವದನ್ನು ಬಿಟ್ಟರೆ ನಿನ್ನ ಜೀವನ ಸಂಗಾತಿ

ಯಾಗಿರುವವಳಿಗೆ ನಿನ್ನ ಕಷ್ಟಸುಖಗಳಲ್ಲಿ ಸಮಭಾಗಿಯಾಗಿರಲು ಅವಕಾಶವೇ ಇಲ್ಲ ಎನ್ನುವಳು. ಅವಳಿಗಾಗಿ ನೀನು ಪ್ರೀತಿಯಿಂದ ಬೆಲೆಯುಳ್ಳ ಸೀರೆಕುಪ್ಪಸ ವಸ್ತ್ರ ಒಡವೆಗಳನ್ನು ತರುತ್ತ ಹೋದೆಯಾದರೆ, ನೀನು ಅವಳನ್ನು ಒಂದು ಗೊಂಬೆಯೆಂದು ಭಾವಿಸಿ ಅವಳನ್ನು ಶೃಂಗರಿಸುತ್ತ ಹೊರಟಿರುವಿಯೆಂದು ದೂರುವಳು. ಅವನ್ನು ನೀನು ಕೊಡಲಿಲ್ಲವಾದರೆ ನೀನೊಬ್ಬ ಜಿಪುಣನೆಂದು ರಂಭಾಟ ಮಾಡುವಳು. ಲಗ್ನ ಎಂದರೆ ಇದೇ ನೋಡು. ಎಡಗಡೆ ಕಪಾಳಕ್ಕೆ ಮಾತ್ರ ಹೊಡೆತ ಬಿತ್ತೆಂದು ನೀನು ಭಾವಿಸುವದರಲ್ಲೇ ಬಲಗಡೆಯ ಕಪಾಳಕ್ಕೆ ಬಿದ್ದೇ ತೀರುವದು. ನಿನಗೆ ಈ ಯಾವ ತೊಂದರೆಯೂ ಬೇಡ, ವಿಲಾಸರಾಯ."

"ಅಂತರಾತ್ಮಾ, ನೀನು ಹೇಳಿದುದೆಲ್ಲ ನಿಜವಾಗಿದೆ. ನನಗೆ ಮೊದಲೇ ಇದೆಲ್ಲ ತಿಳಿಯದಿದ್ದುದು ಆಶ್ಚರ್ಯದ ಸಂಗತಿ." ವಿಲಾಸರಾಯನಿಗೆ ಗೆಲುವಿನಿಂದ ನಗುವಂತೆನಿಸುತ್ತಿತ್ತು. ಆತ ಒಂದು ನಿರ್ದಿಷ್ಟ ನಿಶ್ಚಯಕ್ಕೆ ಬಂದು ತಲುಪಿದ್ದ.

ಅಷ್ಟರಲ್ಲಿ ಯಾರೋ ಬಾಗಿಲು ತೆರೆದ ಸಪ್ಪಳವಾಯಿತು. ಶಹಾನೇ ಬಂದಿರಬೇಕು ಎಂದು ಆತ ಕಲ್ಪಿಸಿದ ಪಾಪ! ತುಸು ಸಮಯದ ಹಿಂದೆ ಶಹಾ ಬಂದಿದ್ದಾಗ ವಿಲಾಸರಾಯ ಕಠೋರನಂತೆ ವರ್ತಿಸಿದ್ದ. ಈಗಲಾದರೂ ಅವನೊಡನೆ ಮನಸ್ಸು ಬಿಚ್ಚಿ ಮಾತಾಡಬೇಕೆಂದು ನಿರ್ಧರಿಸಿದ.

ಬಾಗಿಲು ಪೂರ್ತಿ ತೆರೆಯಿತು. ಸುಶೀಲೆ ಕೋಣೆಯನ್ನು ಪ್ರವೇಶಿಸಿದಳು. ಮೌನ. ಅವನನ್ನೇ ನೋಡುತ್ತ ನಿಂತಿದ್ದ ಅವಳ ಆ ನೋಟ ಕಂಡು ಅವನಿಗೆ ಅಚ್ಚರಿಯಾಯಿತು. ಹಿಂದೆ ನಡೆದುಹೋದ ಘಟನೆಯ ಪೂರ್ವದಲ್ಲಿ ಅವಳ ಈ ನೋಟವನ್ನು ಆತ ಕಂಡಿದ್ದರೆ, ಅವಳು ಏನನ್ನೋ ಯಾಚಿಸುತ್ತಿರುವಳೆಂದೇ ತಿಳಿದುಕೊಳ್ಳಬಹುದಿತ್ತು. ಆ ನೋಟದಲ್ಲಿ ಪಶ್ಚಾತ್ತಾಪ-ವಿನಯ ತುಂಬಿಕೊಂಡಿದ್ದವು. ಮನೆಯಿಂದ ಓಡಿಹೋದ ಮಗಳು ತಿರುಗಿ ಮನೆ ಸೇರುವಾಗಿನ ಭಾವ ಅವಳ ಮುಖದಲ್ಲಿತ್ತು.

"ವಿಲಾಸರಾಯರೇ........" ವಿಷಾದಪೂರಿತ ಮಂದಹಾಸವೊಂದನ್ನು ಆತ ಕಂಡ. ಮೊದಲಿಗಿಂತ ಅವಳು ಸುಂದರಿಯಾಗಿ ಕಂಡಳು. ಅವಳ ಮುಖದ ಮೇಲೆ ಒಂದು ವಿಶಿಷ್ಟ ಕಳೆ ಬಂದು ಅವಳ ಕಣ್ಣುಗಳು ಥಳಥಳಿಸುತ್ತಿದ್ದವು. ವಿಲಾಸರಾಯನ ಮನಸ್ಸಿನಲ್ಲಿ ವಿಚಿತ್ರ ಅನುಭವವಾಗತೊಡಗಿತು. ಅದೇ ಮನಸ್ಸು ಈಗೊಂದು ಕ್ಷಣದ ಹಿಂದೆ ಎಂಥ ನಿರ್ಧಾರಕ್ಕೆ ಬಂದಿದ್ದಿತಲ್ಲ!

ಗಂಡಸು ಎಂದರೆ ಎಂಥ ವಿಚಿತ್ರ ಪ್ರಾಣಿ ! ತನ್ನ ವಿವೇಕದ ಬಗ್ಗೆ ಅಭಿಮಾನಪಡುವದೂ ತಡವಿಲ್ಲ, ಥಳಥಳಿಸುವ ಎರಡು ಕಣ್ಣುಗಳನ್ನು ಕಂಡೊಡನೆ ಕರಗಿಬಿಡುವದೂ ತಡವಿಲ್ಲ. ಒಂದೇ ನಿಮಿಷದ ಹಿಂದೆ ಲಗ್ನದ ವಿಚಾರವನ್ನು ಗಂಭೀರವಾಗಿ ಯೋಚಿಸಿ, ತನ್ನ ಬುದ್ಧಿಮತ್ತೆಯನ್ನೂ ವಿಚಾರ ಸರಣಿಯನ್ನೂ ಹೊಗಳಿಕೊಳ್ಳುತ್ತ, ಲಗ್ನದ ಜಂಜಾಟದಲ್ಲಿ ಸಿಕ್ಕಿ ತೊಳಲುವ ಗಂಡಸರ ಬಗ್ಗೆ ಕನಿಕರ ತಾಳಿದ್ದ. ಈಗ ಅವನ ಆ ಎಲ್ಲ ನಂಬುಗೆ ನಿಶ್ಚಯಗಳು ಮಾಯವಾಗ ತೊಡಗಿದ್ದವು, ಅವನ ವಿವೇಕ ಮರೆಯಾದಂತಿತ್ತು. ಆತ ವಾಸ್ತವ ಪ್ರಪಂಚಕ್ಕೆ ಬರಹತ್ತಿದ್ದ. ಅಷ್ಟರಲ್ಲೇ ಅವನ ಅಂತರಾತ್ಮ ಮುಂದೆ ಬಂದು ಅವನನ್ನು ಎಚ್ಚರಿಸಿತು:

"ವಿಲಾಸರಾಯ, ಜೋಕೆ—ಎಚ್ಚರಿಕೆ !"

ವಿಲಾಸರಾಯ ಅದನ್ನು ತುಚ್ಛೀಕರಿಸಿದ. ಸುಶೀಲೆಯ ಕಣ್ಣಿನ ಬೆಳಕು ಅವನ ಲಕ್ಷ ಸೆಳೆದಿತ್ತು. ಅವಳ ಮುಖದ ಕಾಂತಿ ಮೋಡಿಯಾಟ ಹೂಡಿತ್ತು.

"ವಿಲಾಸರಾಯರೇ, ನಿಮ್ಮೊಡನೆ ಮಾತಾಡುವದಿದೆ."

"ಏ ಹುಚ್ಚಾ, ಅವಳ ಮಾತಿಗೆ ಮರುಳಾಗಬೇಡ. ಏನಾದರೂ ವ್ಯವಹಾರವಿದ್ದರೆ ಮಾತ್ರ ವಿಲಾಸರಾಯನ ಭೆಟ್ಟಿ ಸಾಧ್ಯ, ಎಂದು ಹೇಳಿ ಬಿಡು. ಅವಳಿಂದ ಪಾರಾಗು, ಹೂಂ—ಏಳು...."

ಅಂತರಾತ್ಮನ ಸೂಚನೆಯಂತೆ ವಿಲಾಸರಾಯ ಏಳಲಿಲ್ಲ. ಸುಶೀಲೆ ಸಮೀಪಕ್ಕೆ ಬಂದಳು, ಅದೇ ವಿಷಾದಪೂರಿತ ನಗುವಿನೊಡನೆ. ವಿಲಾಸರಾಯನ ಒಂದುನೂರಾ ಎಂಭತ್ತೇಳು ಪೌಂಡು ತೂಕದ ದೇಹದಲ್ಲಿ ವಿದ್ಯುತ್ಸಂಚಾರವಾದಂತೆ ಭಾಸವಾಯಿತು. ತಲೆಯಿಂದ ಪ್ರವೇಶಿಸಿ ಬೆನ್ನು ಹುರಿಗುಂಟ ಇಳಿದು ಪಾದಗಳೊಳಗಿಂದ ಪಾರಾಗಿ ಆ ವಿದ್ಯುತ್ಪ್ರಭೆ ದಾಟಿ ಹೋಯಿತು. ಲಗ್ನದ ವಿಚಾರದಲ್ಲಿ ತಾತ್ಸಾರಭಾವ ತಾಳಿದ್ದುದನ್ನು ಆತ ಈಗ ಮರೆತುಬಿಟ್ಟಿದ್ದ. ದಾಂಪತ್ಯಜೀವನವೇ ನಿಜವಾದ ಸುಖಜೀವನವೆಂದು ಆತ ನಂಬಿದ. ಬ್ರಹ್ಮಚಾರಿಗಳೆಂದರೆ ಮರುಭೂಮಿಯಲ್ಲಿರುವ ಹೇಸರಗತ್ತೆಗಳಿದ್ದಂತೆ ! ಎಂದು ಆತ ತಿಳಿದುಕೊಂಡ.

ಸುಶೀಲೆ ಬಂದು ಅವನು ಕುಳಿತ ಕುರ್ಚಿಯ ತೋಳಿನ ಮೇಲೆ ಕುಳಿತೊಡನೆ ಆತ ತುಸು ಬದಿಗೆ ಸರಿದನಾದರೂ ಅಲ್ಲಿಂದ ಏಳಲಿಲ್ಲ !

"ಬುದ್ಧಿಗೇಡಿ" ಅಂತರಾತ್ಮ ಕೂಗಿತು.

ಸುಶೀಲೆ ಅವನ ಕೈಯನ್ನೆತ್ತಿ ಹಿಡಿದು ತಟ್ಟಿದಳು. ಅವನ ಕೂದಲು ನಿಮಿರಿ ನಿಂತವು. ಆದರೂ ಆತ ಅಲ್ಲಿಯೇ ಕುಳಿತಿದ್ದ.

"ಕತ್ತೆ," ಅಂತರಾತ್ಮ ಅಣಕಿಸಿತು.

ಅವನ ಕೈ ತಟ್ಟುತ್ತಿದ್ದುದನ್ನು ನಿಲ್ಲಿಸಿ ಆಕೆ ಅದನ್ನೀಗ ಸವರುತ್ತಿದ್ದಳು. ವಿಲಾಸರಾಯನ ಉಸಿರಿನ ವೇಗ ಹೆಚ್ಚಾಗಿತ್ತು. ಅವಳು ಮೃದು ಸ್ವರದಿಂದ,

"ವಿಲಾಸರಾಯರೆ, ನಾನು ಮೂರ್ಖಳಂತೆ ವರ್ತಿಸಿದ್ದುದಕ್ಕಾಗಿ ವಿಷಾದ ವಾಗಿದೆ. ನೀವಂತೂ ಒಳ್ಳೆಯವರು, ವಿಶಾಲ ಹೃದಯಿಗಳು, ದಯಾಪರರು. ನನ್ನನ್ನು ದಯೆಯಿಟ್ಟು ಕ್ಷಮಿಸಿರಿ" ಎಂದಳು.

ವಿಲಾಸರಾಯನ ತುಟಿಗಳು ತುಸು ಅಲುಗಾಡಿದವು. ಸುಶೀಲೆ ಅವನ ಹಣೆಯನ್ನು ಚುಂಬಿಸಿ ತುಸು ತಡೆದು,

"ಅದೆಲ್ಲಿದೆ ?" ಎಂದು ಪ್ರಶ್ನಿಸಿದಳು.

ವಿಲಾಸರಾಯನ ಬಾಯಿ ತೆರೆಯಿತು.

"ಏನು ?"

"ಅದೆಲ್ಲಿದೆ ? ಎಲ್ಲಿದೆ ಆ ಉಂಗುರ ?"

ಅವನ ಅಂತರಾತ್ಮ ಒಂದೇ ಸವನೆ ಕಿರಿಚಿಕೊಳ್ಳುತ್ತಿರುವಂತೆ ಭಾಸವಾ ಯಿತು. ಪರಿಸ್ಥಿತಿ ಗಂಭೀರವಾಯಿತೆಂದು ಅದು ಒತ್ತಿ ಒತ್ತಿ ಹೇಳುತ್ತಿತ್ತು:

"ಅಯ್ಯೋ, ನೀನೆಂಥ ಹುಚ್ಚ ! ಭ್ರಮಿಷ್ಠ ! ನಿನ್ನ ಹುಚ್ಚಿಗೆ ಕೊನೆಯಿ ಲ್ಲವೆ ? ಇದೇ ಈಗ ನಾನು ಎಚ್ಚರಿಸಿದ್ದೆ. ಮತ್ತೆ ಅದೇ ಹುಚ್ಚುತನ !"

"ಅವಳು ಅತ್ಯಂತ ಸುಂದರಿ, ಅವಳ ಕಣ್ಣುಗಳನ್ನಾದರೂ ನೋಡು." ಅಂತರಾತ್ಮನನ್ನು ಎದುರಿಸಲೆಂದು ವಿಲಾಸರಾಯ ಪ್ರತಿಭಟಿಸಿ ಹೇಳಿದ.

"ಅಯ್ಯೋ—ಕತ್ತೆ ! ಸೌಂದರ್ಯದ ಬಗ್ಗೆ ನಾನು ಹೇಳಿದ್ದುದನ್ನು ಮರೆತೆಯಾ ?"

"ಹೌದು. ನೀನು ಹೇಳಿದ್ದು ಗೊತ್ತಿದೆ. ಆದರೆ...."

"ಅವಳು ಕಬ್ಬಿಣದಷ್ಟು ಕಠೋರ ಹೃದಯಿ."

"ನಿನ್ನ ಕಲ್ಪನೆ ತಪ್ಪಾಗಿದೆ, ಅಂತರಾತ್ಮ."

"ಇಲ್ಲ, ನಾನು ತಪ್ಪು ಹೇಳುವದಿಲ್ಲ."

"ಅವಳು ನನ್ನನ್ನು ಪ್ರೀತಿಸುತ್ತಿದ್ದಾಳೆ."

"ಪ್ರೀತಿಯನ್ನು ಮರೆತು ಬಿಡು."

ಅವನ ಭುಜಗಳನ್ನು ಅಲುಗಾಡಿಸುತ್ತ ಸುಶೀಲೆ,

"ವಿಲಾಸರಾಯರೆ, ದೆವ್ವ ಬಡಿದವರಂತೆ ಕುಳಿತು ಯೋಚಿಸುತ್ತಿರುವದೇನನ್ನು? ಆ ಉಂಗುರವೆಲ್ಲಿದೆ ?" ಎಂದಳು.

ವಿಲಾಸರಾಯ ಅದನ್ನು ಹೊರತೆಗೆದು ಸುಶೀಲಳ ಮುಂದೆ ಹಿಡಿದ. ಅತ್ಯಂತ ಪ್ರೀತಿಯಿಂದ ಅದನ್ನು ನೋಡಿ ಅವಳು ತನ್ನಷ್ಟಕ್ಕೇ ಅಂದುಕೊಂಡಳು:

"ಅಯ್ಯೋ, ಇದನ್ನು ಬಿಸಾಕಿ ಅವನ ಹೃದಯವನ್ನೇ ಪುಡಿಮಾಡಿದ್ದೆ."

"ಹೂಂ, ಏಳು. ಓಡಿ ಹೋಗು ಮದ್ರಾಸಕ್ಕೆ" ಅಂತರಾತ್ಮ ಕೂಗಿತು.

ವಿಲಾಸರಾಯ ಎಲ್ಲಿಗೂ ತೆರಳಲಿಲ್ಲ. ಭಕ್ತನು ದೇವರ ಮೂರ್ತಿಯನ್ನು ಭಕ್ತಿಯಿಂದ ನೋಡುತ್ತ ಮೈಮರೆಯುವಂತೆ ಆತ ಸುಶೀಲಳನ್ನು ನೋಡುತ್ತ ಕುಳಿತಿದ್ದ. ಆ ಭಕ್ತಿಯ ನೋಟದಲ್ಲಿ ಅವನ ಕಣ್ಣಿನ ಹೊಳಪು, ಗಲ್ಲಗಳ ನುಣುಪು, ಕತ್ತಿನ ಮೇಲ್ಭಾಗದ ಮೆರುಗನ್ನೂ ಗುರುತಿಸಿಕೊಂಡ. ಅಗೋಚರವಾದ ಹೊಲಸು ಅಂತರಾತ್ಮನ ಉಪದೇಶ ಕೇಳಲು ಅವನಿಗೆ ಮನಸ್ಸಾಗಲಿಲ್ಲ. ಸುಶೀಲಳ ಗುಣಗಳ ಬಗೆಗೆ ಸಂಶಯ ತಾಳಿದುದಕ್ಕಾಗಿ ಆತನಿಗೆ ವ್ಯಸನವಾಯಿತು. ವಿಲಾಸರಾಯನಲ್ಲಿ ಈಗ ಯಾವ ಸಂಶಯಗಳೂ ಉಳಿಯಲಿಲ್ಲ. ಅವನ ದೃಷ್ಟಿಯಲ್ಲಿ ಅವಳು ದೇವತೆಯಾಗಿ ಕಂಡಳು. ಆ ಭಕ್ತ ಮಂತ್ರಮುಗ್ಧನಾಗಿದ್ದ !

"ಇಲ್ಲಿ ನೋಡಿರಿ," ಎಂದವಳೇ ಅವನ ಮುಂದೆ ಉಂಗುರವನ್ನಿಟ್ಟುಕೊಂಡ ಬೆರಳನ್ನು ಹಿಡಿದಳು. ಮತ್ತೊಮ್ಮೆ ಅವನ ಹಣೆ ಚುಂಬಿಸಿ,

"ನಾವಿಬ್ಬರೂ ಮತ್ತೆ ಒಂದಾದೆವು." ಎಂದಳು.

"ನಾವಿಬ್ಬರೂ ಒಂದು…………" ಮಂತ್ರಮುಗ್ಧನಾಗಿದ್ದ ವಿಲಾಸರಾಯ ತೊದಲಿದ.

"ಸಮಾಧಾನವಾಯಿತೇ ?"

"ಹೌದು."

"ಹಾಗಿದ್ದರೆ ನನ್ನನ್ನು ಚುಂಬಿಸಿರಿ."

ವಿಲಾಸರಾಯ ಅವಳನ್ನು ಚುಂಬಿಸಿದ.

"ನನ್ನ ವಿಲಾಸ........ನಾವಿಬ್ಬರೂ ಸುಖಿಗಳಾಗುವೆವು, ಅಲ್ಲವೆ ?"

"ಹೌದು, ಸುಶೀ........"

ಅಂತರಾತ್ಮ ದೂರ ಸರಿದಿದ್ದ, ಮಾತಾಡಲು ಅವನ ನಾಲಿಗೆಯೇ ಏಳಲಿಲ್ಲ.

* * * *

ಸುಶೀಲೆ ಹೊರಟು ಹೋದ ಕೆಲ ಸಮಯದ ವರೆಗೆ ರಾಜಾಸಾಹೇಬ ಅದೇ ಸ್ಥಳದಲ್ಲಿ ದಂಗು ಬಡಿದವನಂತೆ ನಿಂತಿದ್ದ. ಅಲ್ಲಿಂದ ಹೊರಡಲು ಅವನ ಕಾಲುಗಳಲ್ಲಿ ಶಕ್ತಿಯೇ ಇಲ್ಲದಂತಾಗಿತ್ತು. ಸುಶೀಲೆ ಹೇಳಿದ್ದ ಮಾತುಗಳಲ್ಲಿನ ವಿಷಯವನ್ನೆಲ್ಲ ತೊಡೆದು ಹಾಕಲು ಆತ ಶಕ್ತಿಮೀರಿ ಪ್ರಯತ್ನಿಸಹತ್ತಿದ್ದ. ಒಂದೊಂದೇ ಶಬ್ದವನ್ನು ಮರೆತು ಬಿಡುತ್ತಿದ್ದರೂ ಮುಂದೆ ಹೋಗಲು ಸಾಕಷ್ಟು ಶಕ್ತಿ ಆತನಲ್ಲಿ ಬಂದಿರಲಿಲ್ಲ.

ಸಂಕಟದ ಪ್ರಸಂಗಗಳಲ್ಲಿ ಮನುಷ್ಯನ ಶಕ್ತಿಯಾಗಲಿ, ಒಳ್ಳೆಯ ವಿಚಾರಗಳಾಗಲಿ ಅವನಿಗೆ ಸಹಾಯ ಮಾಡದೆ ದೂರವುಳಿದು ಬಿಡುವದುಂಟು. ಅವನ ವಿರುದ್ಧ ಅವು ಬಂಡನ್ನೆಬ್ಬಿಸದಿರುವದೊಂದೇ ಅವನ ಪುಣ್ಯವೆನಿಸುತ್ತದೆ. ರಾಜಾಸಾಹೇಬನದೂ ಅದೇ ಗತಿಯಾಗಿತ್ತು. ಸೌಜನ್ಯವೆಂದರೆ ಮಾನವನ ಅಂತರಂಗದ ಸೌಂದರ್ಯವೆಂದು ಎಲ್ಲರೂ ಹೇಳುವದುಂಟು. ಅದರ ಸಹಾಯದಿಂದ ಎಂಥವರ ಹೃದಯವನ್ನಾದರೂ ಗೆದ್ದು ಬಿಡಬಹುದು. ಪ್ರಮೀಲೆಯ ಬಗ್ಗೆ ಸುಶೀಲೆ ಹೇಳಿದ್ದುದೆಲ್ಲವನ್ನೂ ಅವನು ನಂಬಿ ಸೌಜನ್ಯದ ಪ್ರಭಾವದಿಂದ ಆತ್ಮವಂಚನೆ ಮಾಡಿಕೊಳ್ಳತೊಡಗಿದ್ದ. ಸ್ವಸಾಮರ್ಥ್ಯದಿಂದ ಪ್ರಮೀಲೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವದು ತನ್ನಿಂದ ಸಾಧ್ಯವೇ ಎಂದೂ ಯೋಚಿಸುತ್ತಿದ್ದ.

ಬೇರೆಯವರ ಮಾತಿನಲ್ಲಿನ ತಪ್ಪುಗಳಿಗಿಂತ ಒಪ್ಪುಗಳನ್ನೂ ತನ್ನ ಮಾತಿನ ಒಪ್ಪುಗಳಿಗಿಂತ ತಪ್ಪುಗಳನ್ನೂ ಹೆಚ್ಚಾಗಿ ಕಂಡು ಹಿಡಿಯುವ ಮನಸ್ಸು ಅವನದಾಗಿತ್ತು. ಅವನ ಸಂಬಂಧವಿದ್ದ ನಾನಾ ದರ್ಜೆಯ ಜನರಲ್ಲಿ ಯಾರೂ ಇದೇ ಸ್ವಭಾವಕ್ಕೆ ಸೌಜನ್ಯವೆನ್ನುವರು ಎಂದು ತಿಳಿಸಿಯೂ ಹೇಳಿರಲಿಲ್ಲ, ಆತ

ನಿಗೆ. ಸುಶೀಲೆ ಸಿಟ್ಟಿಗೆದ್ದ ಹೆಂಗಸು, ತನ್ನ ಸಿಟ್ಟಿನ ಭರದಲ್ಲಿ ಪ್ರಮೀಲೆಯ ಬಗ್ಗೆ ಹಾಗೆ ತಪ್ಪು ಮಾತಾಡಿರಬೇಕೆಂಬ ವಿಚಾರವನ್ನು ಅವನ ಸೌಜನ್ಯ ಒಪ್ಪುತ್ತಿರಲಿಲ್ಲ. ಅವಳು ಹೇಳಿದುದೆಲ್ಲ ನಿಜವೆಂದೇ ಆತ ಭಾವಿಸಿದ್ದ. ಸುಶೀಲೆ ಹೇಳಿದುದನ್ನು ಹಿಂದೆ ನಡೆದು ಹೋದ ಸಂಗತಿಗಳೊಡನೆ ತುಲನೆ ಮಾಡಿ ನೋಡಿದ. ಕಮಲಾಕಾಂತ ತಾನಿದ್ದ ಕೋಣೆಗೆ ಬಂದುದು, ಅದು ಆಕಸ್ಮಿಕವೆ ? ಒಂದೇ ದಿನದ ಪರಿಚಯದಿಂದ ಅವನು ತನ್ನ ಮನೆಯುಲ್ಲಿರಲು ಕರೆಯುವದೇ ? ಆ ಆಮಂತ್ರಣದಲ್ಲಿ ಉದ್ದೇಶವಿರಲಾರದೇ ?

ಇದೇ ಯೋಚನೆಯುಲ್ಲಿಯೇ ರಾಜಾಸಾಹೇಬ ಮನೆಯತ್ತ ಸಾಗಿದ. ದಣಿವೂ ವ್ಯಸನವೂ ಆಡಂತೆನ್ನಿಸಿತು. ನೇರವಾಗಿ ಹಾಸಿಗೆ ಸೇರಿ ಈ ಹೊಲಸು ವಿಚಾರ ಮತ್ತು ಸಂಶಯಗಳನ್ನು ಮರೆತು ಬಿಡಲು ನಿರ್ಧರಿಸಿದ. ಮುಂಜಾವಿನಲ್ಲಿ ಮನಸ್ಸು ತಾನೇ ತಿಳಿಯಾಗುವದು.

ಮನೆಯ ಮುಂಬಾಗಿಲು ತೆರೆದಿತ್ತು, ಒಳಗೆ ಮಾತಾಡುತ್ತಿದ್ದವರ ಧ್ವನಿ ಕೇಳಿ ತುಸು ತಡೆದು ನಿಂತ. ಅಟ್ಟದ ಮೇಲಿನ ಕೋಣೆಯುಲ್ಲಿಂದ ಕಮಲಾಕಾಂತನ ಮಾತು ಕೇಳಬಂದವು. ಆತ ಎತ್ತರಿಸಿದ ಸ್ವರದಲ್ಲಿ ಹೇಳುತ್ತಿದ್ದುದನ್ನು ಕೇಳಲು ರಾಜಾಸಾಹೇಬ ತುಸು ಮುಂದೆ ಸಾಗಿದ, ಕಮಲಾಕಾಂತ ನೆನ್ನುತ್ತಿದ್ದ:

"ನೀನು ಅವನನ್ನು ದ್ವೇಷಿಸುತ್ತಿರಬಹುದು, ಆದರೆ ನಿನಗೆ ಐದು ಲಕ್ಷ ರೂಪಾಯಿ ಸಿಗುವವೆಂಬುದನ್ನು........"

ರಾಜಾಸಾಹೇಬ ಮುಂದಿನ ಶಬ್ದ ಕೇಳಲು ನಿಲ್ಲದೆ, ತನ್ನ ಕೋಣೆಯನ್ನು ಪ್ರವೇಶಿಸಿ, ಕತ್ತಲೆಯಲ್ಲೇ ಹಾಸುಗೆಯ ಮೇಲೆ ಕುಳಿತ. ಅವನ ಹಿಂದಿನಿಂದಲೇ ಬಾಗಿಲು ತಟ್ಟಿದ ಸದ್ದು ಕೇಳಬಂದಿತು.

"ಈಗ ಬಂದವರು ನೀವೇ ಏನು ರಾಜಾಸಾಹೇಬ ?" ಬಾಗಿಲ ತೆರೆದು ಒಳಗೆ ಬರುತ್ತ ಪ್ರಮೀಲೆ ಕೇಳಿದಳು.

"ರಾಜಾಸಾಹೇಬ್...."

ಅವನ ಗಂಟಲು ಆರಿದಂತಾಯಿತು. ಉಗುಳು ನುಂಗುತ್ತ ಮಾತಾಡಲು ಪ್ರಯತ್ನಿಸಿ,

"ಏನು ?" ಎಂದ.

"ನೀವು ಈಗ ತಾನೇ ಬಂದಿರಲಿಲ್ಲವೆ ?"

"ಹೌದು."

"ಹಾಗಾದರೆ ನೀವು ನಮ್ಮ ಮಾತುಗಳನ್ನು ಕೇಳಿರಬೇಕು."

"ಹೌದು."

ಮೌನ ಪಸರಿಸಿತು. ಅವಳು ಹೊರಕ್ಕೆ ಹೋಗುತ್ತಿದ್ದುದನ್ನು ಆತ ಅವಳ ಕಾಲು ಸಪ್ಪಳದಿಂದ ಗುರುತಿಸಿಕೊಂಡ.

## ೨೧

ಮರುದಿನ ರಾಜಾಸಾಹೇಬ ಎದ್ದಾಗ ಒಂಬತ್ತು ಗಂಟೆಯಾಗಿತ್ತು. ಎದ್ದೊಡನೆ ನಾಚಿಕೆಯೆನ್ನಿಸಿತು. ಮನಸ್ಸಿನ ಮೇಲೆ ಭಯಂಕರ ಪರಿಣಾಮ ವನ್ನುಂಟು ಮಾಡುವ ಅನೇಕ ಸಂಗತಿಗಳು ಹಿಂದಿನ ರಾತ್ರಿ ನಡೆದುಹೋಗಿ ದ್ದರೂ ತಾನು ಸುಖ ನಿದ್ರೆಗೈದುದಕ್ಕಾಗಿ ನಾಚಿಕೆಯೆನ್ನಿಸದಿನ್ನೇನು ? ಬೇರೆ ಯವರಿಗೆ ಅಂಥ ರಾತ್ರಿಯಲ್ಲಿ ನಿದ್ರೆ ಬಂದೀತೇ ? ಅವರಿಗೆಲ್ಲ ಆ ಅನುಭವವಾ ಗುವಾಗ ತಾನು ನಿದ್ರಿಸಿದ್ದುದೂ ಸೋಜಿಗವೇ! ತನ್ನ ವಿಚಿತ್ರ ಪ್ರಕೃತಿ ಗುಣ ಕ್ಕಾಗಿ ನೊಂದುಕೊಂಡು ಆತ ತನ್ನ ಕೋಣೆಯ ಹೊರಕ್ಕೆ ಬಂದ.

ದಾರಿಯಲ್ಲಿ ಪ್ರಮೀಲೆ ಆವನ ಎದುರಿಗೆ ಬಂದಳು. ಹೆಂಗಸು ಹನ್ನೊಂ ದರ ವಯಸ್ಸನ್ನು ಮುಟ್ಟಿದೊಡನೆ ಅತ್ಯಂತ ಜಟಿಲವಾದ ಸಮಸ್ಯೆಗಳನ್ನೆದುರಿ ಸುವ ಧೈರ್ಯ ಮತ್ತು ಶಕ್ತಿಗಳನ್ನು ಪಡೆದುಕೊಳ್ಳಬಹುದು. ಗಂಡಸು ಆರ ವತ್ತರ ಸೀಮೆ ದಾಟಿದ ನಂತರವೇ ಅದು ಸಾಧ್ಯ. ಪ್ರಮೀಲೆಯ ಮುಖದ ಮೇಲೆ ವಿಚಿತ್ರವಾದ ಕಾಂತಿಯಿತ್ತು. ಅವಳ ಕಣ್ಣುಗಳಲ್ಲಿನ ಪ್ರಕಾಶ ತುಸು ಮಂದವಾಗಿತ್ತು. ಅವಳ ಚಲನವಲನದಲ್ಲಿ ಉತ್ಸಾಹ ತೋರಿಬರುತ್ತಿರಲಿಲ್ಲ ವಾದರೂ ಅವಳು ಗಂಭೀರವಾಗಿದ್ದಳು.

"ನಾನು ನಿಮ್ಮನ್ನು ಬೇಕೆಂದೇ ಎಬ್ಬಿಸಲಿಲ್ಲ, ರಾಜಾಸಾಹೇಬ್. ನಿದ್ರಿಸ ಲೆಂತ ಬಿಟ್ಟಿದ್ದೆ."

ತಾನು ನಿದ್ರಿಸುತ್ತಿದ್ದಾಗ ಪ್ರಮೀಲೆ ಬಂದು ತನ್ನನ್ನು ನೋಡಿರಬೇಕು; ನಿರ್ಜೀವ ದೇಹವೊಂದು ಹಾಸುಗೆಯಲ್ಲಿ ಬಿದ್ದುಕೊಂಡಿದ್ದುದು ಕಂಡಿರಬೇಕಲ್ಲವೆ? ತಾನೆಂಥ ನಾಚಿಕೆಗೇಡಿ, ಹಾಗೆ ಬಿದ್ದಿರಬೇಕಾದರೆ ? ಎಂದು ಆ ಚಿತ್ರ ಕಲ್ಪಿಸಿ ಕೊಂಡ.

"ಕಮಲಾಕಾಂತ ವಾಕಿಂಗ್ ಹೋದವನು ಇನ್ನೂ ಬಂದಿಲ್ಲ. ನಿಮಗಾಗಿ ತಿಂಡಿ ಮತ್ತು ಚಹಾ ತಯಾರಿದೆ."

"ನನಗೇನೂ ಬೇಕಿಲ್ಲ." ಆತನೆಂದ.

"ಛೆ, ತುಸು ತಿನ್ನಲೇ ಬೇಕು, ಬನ್ನಿರಿ."

"ಸತ್ಯವಾಗಿಯೂ ಹಸಿವಿಲ್ಲ."

"ಬರ್ರಿ."

ಆತ ಅವಳನ್ನು ಹಿಂಬಾಲಿಸಿ ಹೋಗಲೇ ಬೇಕಾಯಿತು: ಹೆಂಗಸರೆಂದರೆ ಎಂಥ ಧೂರ್ತರು, ಪ್ರಸಂಗಾವಧಾನಿಗಳು! ದಿನದ ಕಾರ್ಯಗಳಲ್ಲಿ ಏನೇ ಅಡ್ಡ ಬಂದರೂ ಅವರು ಲೆಕ್ಕಿಸಲಾರರು. ಆದರೂ ಅವಳ ವರ್ತನೆಯಲ್ಲಿ ಎಲ್ಲವೂ ಬದಲಾಗಿರುವಂತೆ ಕಂಡಿತು. ಅವನು ಸಾಕಷ್ಟು ತಿಂಡಿ ತಿಂದ. ಪ್ರಮೀಲೆ ತುಸು ದೂರದಲ್ಲಿ ನಿಂತು ಅವನನ್ನೇ ನೋಡುತ್ತಿದ್ದಳು.

"ಮುಗಿಯಿತೇ ?"

"ಹೂಂ...."

ಅದೇತಕ್ಕೋ ಅವಳು ತುಸು ಹಿಂಜರಿಯುತ್ತಿದ್ದಂತೆ ಕಂಡಿತು.

"ರಾಜಾಸಾಹೇಬ್, ನಾನು ಎಲ್ಲಾ ಯೋಚಿಸಿ ನಿಶ್ಚಯ ಮಾಡಿಕೊಂಡಿದ್ದೇನೆ. ಗೊಂದಲದ ವಿಷಯವೇನೋ, ಸರಿಯೆ: ಏನೇ ಇರಲಿ, ಸ್ಪಷ್ಟವಾಗಿ ಹೇಳಿ ಬಿಡುವೆ. ನಿನ್ನಿನ ರಾತ್ರಿ ಕಮಲಾಕಾಂತ ಆಡಿದ ಮಾತು ಹೇಗೆ ಉದ್ಭವಿಸಿತು ಗೊತ್ತೇ? ನೀವು ಸಿಗರೇಟು ಹೊತ್ತಿಸಲಿಲ್ಲವಲ್ಲ ?"

"ಏನೋ ಬೇಸರ."

"ಒಂದು ಸೇದಿರಿ, ಸ್ವಲ್ಪ ಸಮಾಧಾನವಾದೀತು."

"ಮನಸ್ಸೇ ಬರಲೊಲ್ಲದು."

ಅಷ್ಟರಲ್ಲಿ ಜೇನುಹುಳುವೊಂದು ಆ ಕೋಣೆಯೊಳಗೆ ಪ್ರವೇಶಿಸಿದ್ದುದನ್ನು ಪ್ರಮೀಲೆ ನೋಡಿದ್ದಳು. ತುಸು ಸಮಯದ ನಂತರ ಅದು ಕಿಟಕಿಯೊಳಗಿಂದ

ಪಾರಾಗಿ ಹೊರಗಿನ ಬಿಸಿಲಿನಲ್ಲಿ ಮಾಯವಾಯಿತು. ಅವಳು ರಾಜಾಸಾಹೇಬ ನತ್ತ ಹೊರಳಿ,

"ಕಮಲಾಕಾಂತ ನನ್ನನ್ನು ಸಮಾಧಾನಗೊಳಿಸಲು ಹಾಗೆ ಮಾತಾಡಿದ" ಎಂದಳು.

ರಾಜಾಸಾಹೇಬ ಮೌನವಾಗಿಯೇ ಕುಳಿತಿದ್ದ.

"ಕಮಲಾಕಾಂತನ ಸ್ವಭಾವವೇ ವಿಚಿತ್ರ. ನಾನು ನಿಮ್ಮನ್ನು ಪ್ರೀತಿಸಿ ನಿಮ್ಮೊಡನೆ ಲಗ್ನವಾಗಲು ಒಪ್ಪಿರುವ ವಿಚಾರವೂ ಅವನಿಗೆ ಹೊಳೆದಿರಲಿಲ್ಲ. ನಮ್ಮ ಮನೆತನವನ್ನು ಬಡತನದಿಂದ ಉಳಿಸಿಕೊಳ್ಳಲು ನಾನು ಯತ್ನಿಸುತ್ತಿರುವೆ ನೆಂದು ಆತ ತಿಳಿದುಕೊಂಡಿದ್ದ. ನಾನು ನಿಮ್ಮನ್ನು ಲಗ್ನವಾಗಬೇಕೆಂದು ಅವ ನಿಗೆ ಮೊದಲಿನಿಂದಲೂ ಆತುರ. ಅದಕ್ಕೆಂದೇ ಆತ ನಿಮ್ಮನ್ನು ಇಲ್ಲಿಗೆ ಕರೆದು ತಂದಿರಬೇಕು. ಯಾರೋ ಒಬ್ಬರು ನಿಮ್ಮನ್ನು ಗುರುತಿಸಿ ಅವನಿಗೆ ಹೇಳಿ ದ್ದರು. ನಿನ್ನೆ ರಾತ್ರಿ ಆ ಹುಡುಗಿ ನಿಮಗೆ ಹೇಳಿದ್ದು ಸತ್ಯವಾಗಿದೆ."

"ಅವಳ ಮಾತುಗಳನ್ನು ಕೇಳಿದಿರಾ, ಪ್ರಮೋಲಾದೇವಿ ?"

"ಬೇರೆ ಗತ್ಯಂತರವೇ ಇರಲಿಲ್ಲ. ನಾನು ಕೇಳಲಿ ಎಂದೇ ಅವಳು ಮಾತಾ ಡಿರಬೇಕು. ಇಲ್ಲವಾದರೆ ಅವಳು ಅಷ್ಟೊಂದು ಎತ್ತರಿಸಿದ ಧ್ವನಿಯಲ್ಲೇಕೆ ಹೇಳಬೇಕಿತ್ತು ? ನಾನೂ ನಿಮ್ಮ ಸಂಭಾಷಣೆಯಲ್ಲಿ ಭಾಗ ವಹಿಸಬೇಕೆಂದೂ ಆಕೆ ಇಚ್ಛಿಸಿರಬೇಕು. ಕಮಲಾಕಾಂತನನ್ನು ನೋಡಲು ನಾನು ಮನೆಗೆ ಹೋಗಿರಲಿಲ್ಲವೇ ? ಅವನು ಸಿಗಲಿಲ್ಲ, ನಿಮ್ಮ ಹತ್ತಿರ ತಿರುಗಿ ಬರುತ್ತಿದ್ದೆ. ನಿಮ್ಮ ಬೆನ್ನು ನನ್ನ ಕಡೆಗಿದ್ದುದರಿಂದ ನೀವು ನನ್ನನ್ನು ನೋಡಲಿಲ್ಲ. ಅವಳು ಮಾತ್ರ ನನ್ನನ್ನು ನೋಡಿದಳು."

"ಅವಳು ಯಾರೆಂಬುದು ನಿಮಗೆ ಗೊತ್ತಿಲ್ಲ ?"

"ಅವಳು ಯಾರೇ ಇರಲಿ, ಅದು ಮಹತ್ವದ್ದೂ ಅಲ್ಲ, ಅವಳ ಮಾತು ಮಾತ್ರ ಮಹತ್ವದವು. ನೀವು ಅತ್ತೀಗೇರಿ ರಾಜಾಸಾಹೇಬ ಎಂಬ ಸಂಗತಿ ನಮಗೆ ಗೊತ್ತಿದೆಯೆಂದು ಅವಳು ಅನ್ನಲಿಲ್ಲವೆ ?"

"ಆ ಸಂಗತಿ ನಿಮಗೇನು ತಿಳಿದಿತ್ತೇ ?"

"ಎರಡು ದಿನಗಳ ಹಿಂದೆ ಕಮಲಾಕಾಂತ ನನಗೆ ತಿಳಿಸಿದ್ದ," ಅವಳ ಧ್ವನಿ ತುಸು ನಡುಗಿತು, ಮುಖದ ಮೇಲೆ ತುಸು ನಾಚಿಕೆಯೂ ಮೂಡಿ ಬಂದಿತು,

"ನೀವು ನಂಬಲಿಕ್ಕಿಲ್ಲ. ಆದರೆ ನೀವೇ ಅತ್ತೀಗೇರಿ ರಾಜಾಸಾಹೇಬ ಎಂಬ ಸುದ್ದಿಯಿಂದ ನನ್ನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಅತ್ತೀಗೇರಿ ರಾಜಾಸಾಹೇಬನೆಂದರೆ ಕಪಟಿಯೆಂದೇ ನಾನು ನಂಬಿಕೊಂಡಿದ್ದೆ, ಕಪಟಿಯೂ ಮೋಸಗಾರನೂ ಆಗಿರದಿದ್ದರೆ ನಮ್ಮ ಮಾವನನ್ನು ವಶಮಾಡಿಕೊಳ್ಳುವದು ಸಾಧ್ಯವೇ ಇರಲಿಲ್ಲ. ಆದರೆ ಈ ಅಲ್ಪಾವಧಿಯಲ್ಲಿ ನಿಮ್ಮನ್ನು ಕಂಡುದರ ಮೇಲಿಂದ ನಾನು ಕಲ್ಪಿಸಿಕೊಂಡಿದ್ದರ ತೀರ ವಿರುದ್ಧವಾಗಿ ನೀವಿದ್ದುದು ಸಿದ್ಧವಾಗಿತ್ತು. ಅಲ್ಲದೆ ನಿಮಗೆ ಆ ಹಣ ದೊರೆತೊಡನೆ ನೀವು ಮಾಡಿದ ಮೊದಲ ಕೆಲಸವೆಂದರೆ ಅದರೊಳಗಿನ ಅರ್ಧ ಭಾಗ ನನಗೆ ಕೊಡಲು ಮುಂದೆ ಬಂದುದು. ಮೋಸದಿಂದ ಹಣ ಪಡಕೊಂಡವನು ಹಾಗೆ ಮಾಡಬಹುದೇ? ನೀವೇ ರಾಜಾಸಾಹೇಬರೆಂದು ಗೊತ್ತಾದ ನಂತರವೂ ಈ ಎಲ್ಲ ಕಾರಣಗಳಿಂದ ನನ್ನಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ನೀವು ಶ್ರೀಮಂತರು, ನಾನು ಬಡವಳೆಂಬ ಸಂಗತಿಯನ್ನೂ ನಾನು ಹಚ್ಚಿಕೊಳ್ಳಲಿಲ್ಲ. ನಾನು ನಿಮ್ಮನ್ನು ಪ್ರೀತಿಸುತ್ತಿದ್ದೆ, ತೀರಿತು. ಆದರೆ ನಿನ್ನಿನ ಘಟನೆ ಜರುಗಿರದಿದ್ದರೆ ಅದೆಲ್ಲ ಸರಿಹೋಗಬಹುದಿತ್ತು. ಆ ಹುಡುಗಿ ನಿಮಗೆ ಹೇಳಿದ್ದರಲ್ಲಿ ಹತ್ತರಲ್ಲಿ ಒಂಬತ್ತು ಭಾಗ ಸತ್ಯವಿದೆ. ಇನ್ನುಳಿದ ಒಂದು ಭಾಗ ಅಸತ್ಯವನ್ನೂ ಅಸತ್ಯ ಎಂದು ಅನ್ನಲು ಮನಸ್ಸು ಸಿದ್ಧವಾಗಲಾರದು. ಅಂಥ ಪರಿಸ್ಥಿತಿಯಲ್ಲೇ ನಾನಿದ್ದಾಗ ಕಮಲಾಕಾಂತ ನನ್ನನ್ನು ಸಮಾಧಾನಗೊಳಿಸುತ್ತಲಿದ್ದ...."

"ನಾನು...."

"ತಡೆಯಿರಿ. ಕಮಲಾಕಾಂತನ ಬಗ್ಗೆ ಹೇಳುವೆ ನಿಮ್ಮನ್ನು ನಾನು ಲಗ್ನವಾಗಬೇಕೆಂದು ಆತ ಬಯಸುತ್ತಿದ್ದನೆಂದು ಹೇಳಲಿಲ್ಲವೆ? ಅವನ ಉತ್ಸಾಹ ಹೆಚ್ಚುವ ಪ್ರಸಂಗವೊಂದು ನಿನ್ನೆ ಬಂದಿತ್ತು. ಅವನು ಮುಂಬಯಿಯಲ್ಲಿ ಮೂರು ರಾತ್ರಿಗಳನ್ನು ಹೇಗೆ ಕಳೆದನೆಂದೂ ಅವನು ವೆಚ್ಚ ಮಾಡಿದ್ದ ಹಣವನ್ನು ಎಲ್ಲಿಂದ ತಂದನೆಂದೂ ನಾನು ಚಿಂತಿಸುತ್ತಿರಲಿಲ್ಲವೇ? ಅದರ ಬಗ್ಗೆ ನಿನ್ನೆ ರಾತ್ರಿ ಹೇಳಿದ. ನಾನು ನಿಮ್ಮನ್ನೂ ಆ ಹುಡುಗಿಯನ್ನೂ ಅಲ್ಲಿಯೆ ಬಿಟ್ಟು ಮನೆಗೆ ಬಂದಾಗ ಅವನು ಆಗ ತಾನೇ ಮನೆ ಸೇರಿದ್ದ. ಅವನಿಗೆ ಯಾವುದೋ ಅಂಜಿಕೆಯೊಂದು ಪೀಡಿಸುತ್ತಿತ್ತು. ಗೊಬ್ಬೂರಿನ ವಕೀಲರಿಂದ ಅವನಿಗೊಂದು ಪತ್ರ ಬಂದಿರಲಿಲ್ಲವೇ, ನಮ್ಮ ಮಾವ ಅವನಿಗೆ ಎರಡು ನೂರು

ರೂಪಾಯಿ ಬಿಟ್ಟಿರುವನೆಂದು. ಅದರ ಆಧಾರದ ಮೇಲೆ ಅವನು ಅಲ್ಲಲ್ಲಿ ಸಾಲ ಪಡೆದಿರಬೇಕು. ಅದೊಂವೇ ಪತ್ರ ತೋರಿಸಿ ಹತ್ತೆಂಟು ಜನರಿಂದ ಹಣ ಪಡೆದುಕೊಂಡಿರಬೇಕು. ಅವರನ್ನು ಮೋಸಗೊಳಿಸಿ ತಾನು ಹಣ ಪಡೆಯು ತ್ತಿರುವ ವಿಚಾರವೂ ಅವನಿಗೆ ಬಂದಿರಲಿಲ್ಲ. ಅವನ ಬುದ್ಧಿಯೇ ವಿಚಿತ್ರ. ಪಾಪ! ಆ ಜನರಿಗೇನು ಗೊತ್ತು ಇವನ ಬೂಟಾಟಿಕೆ? ಕೆಲವು ದಿನ ಅವರು ತಡೆದುಕೊಂಡರು. ನಿನ್ನೆ ಒಬ್ಬ ಮನೆಗೇ ಬಂದು ತೀವ್ರ ಹಣ ಕೊಡ ದಿದ್ದರೆ ನೆಟ್ಟಗಾಗಲಾರದೆಂದು ಹೇಳಿ ಹೋಗಿದ್ದ. ಅದೇ ವೇಳೆಗೆ ನಾನು ಅವನ ಹತ್ತಿರ ಹೋಗಿ ನಿಮ್ಮೊಡನೆ ನಾನು ಲಗ್ನವಾಗುವ ವಿಚಾರ ಹೇಳಿದೆ. ಅವನಿಗಾದ ಆನಂದ ಹೇಳತೀರದು. ನಿಮ್ಮ ಆರ್ಥಿಕ ಸ್ಥಿತಿ ನನಗೆ ಗೊತ್ತಿದ್ದು ಅವನ ಹಿತಕ್ಕಾಗಿಯೇ ನಿಮ್ಮನ್ನು ನಾನು ಲಗ್ನವಾಗುತ್ತಿರುವೆನೆಂದು ಆತ ಭಾವಿಸಿಕೊಂಡ. ಆ ಹಣದ ಕುರಿತು ನನ್ನ ಅಭಿಪ್ರಾಯಗಳನ್ನು ಅವನಿಗೆ ಹೇಳುತ್ತಿದ್ದಾಗ ಅವನು ನನ್ನನ್ನು ಸಮಾಧಾನಗೊಳಿಸುತ್ತಿದ್ದ. ನೀವು ನಮ್ಮ ಮನೆತನದ ವೈರಿಯೆಂದೇ ಕಮಲಾಕಾಂತ ತಿಳಿದಿದ್ದಾನೆ. ನಾನೂ ಹಾಗೆಯೇ ತಿಳಿದಿದ್ದೇನೆಂದೂ ಅವನ ಕಲ್ಪನೆ. ಹೀಗೆ ಒಲ್ಲದ ಮನಸ್ಸಿನಿಂದ ನಾನು ನಿಮ್ಮೊಡನೆ ಲಗ್ನವಾಗಲಿರುವೆನೆಂದು ನಂಬಿಕೊಂಡಿದ್ದ ಆತ ಈ ಲಗ್ನದಿಂದಾ ಗುವ ಲಾಭಗಳನ್ನು ಎತ್ತಿ ತೋರಿಸಹತ್ತಿದ್ದ. ಅವೇ ಶಬ್ದಗಳನ್ನು ನೀವು ಕೇಳಿದ್ದು. ಎಲ್ಲವನ್ನೂ ನಿಮ್ಮ ಮುಂದೆ ಸ್ಪಷ್ಟವಾಗಿ ಹೇಳಿದ್ದೇನೆ. ನೀವು ನನ್ನ ಮಾತುಗಳನ್ನು ನಂಬುವಿರಾ ?"

ಅವಳು ಮುಖವನ್ನು ಆತ್ತ ಹೊರಳಿಸಿ ಬೆರಳುಗಳಿಂದ ಮೇಜನ್ನು ಬಾರಿ ಸುತ್ತಿದ್ದಳು. ಇತ್ತ ರಾಜಾಸಾಹೇಬನ ಮನಸ್ಸಿನ ಎಲ್ಲ ಸಂಶಯಗಳೂ ಮಾಯ ವಾಗಿದ್ದವು. ಪ್ರಮಿಲೆ ಸರಳ ಸ್ವಭಾವದವಳು. ಅವಳು ಏನನ್ನೂ ಬಚ್ಚಿಟ್ಟಿರ ಲಿಲ್ಲ. ಅವನ ಶರೀರದಲ್ಲಿ ಸೇರಿಕೊಂಡಿದ್ದ ವಿಷವೆಲ್ಲ ತೊಡೆದು ಹೋದಂತೆನ್ನಿ ಸಿತು. ಮನಸ್ಸು ಹಗುರವಾಯಿತು, ಹೃದಯ ಹಿಗ್ಗಿತು; ಉಸಿರಾಡಿಸಲು ಧೈರ್ಯ ಬಂತು.

"ನೀವು ಹೇಳಿದ್ದರ ಮೇಲೆ ನನ್ನ ನಂಬುಗೆಯಿದೆ, ಪ್ರತಿ ಶಬ್ದವನ್ನೂ ನಂಬಿರುವೆ " ಎಂದ.

"ಇಷ್ಟೊಂದು ಆಧಾರಗಳು ನಿಮ್ಮ ಬಳಿಯಲ್ಲಿರುವಾಗ ನನ್ನ ಹೇಳಿಕೆಯಲ್ಲಿ

ನಂಬುಗೆ ಬರಲಾರದು."

"ಸಂಪೂರ್ಣ ಸಂಬುಗೆಯಿದೆ."

"ಇಲ್ಲ. ಈ ಕ್ಷಣದಲ್ಲೇನೋ ನೀವು ನಂಬಬಹುದು. ಆದರೆ ಇನ್ನೊಂದು ಗಳಿಗೆಯ ನಂತರ ಆ ನಂಬುಗೆ ತಪ್ಪೆಂದು ಸಿದ್ಧಮಾಡಿ ತೋರಿಸುವ ಆಧಾರಗಳ ನೆನಪು ಬಂದೇ ಬರುವದು. ಅದರಲ್ಲಿ ನಿಮ್ಮದೇನೂ ತಪ್ಪಿಲ್ಲ. ಆಧಾರ ಮತ್ತು ಸಾಕ್ಷಿಗಳ ಮಹತ್ವ ನಿಮಗೆ ಗೊತ್ತಿಲ್ಲ. ಎಂಥ ಕಠೋರ ಸತ್ಯವನ್ನೂ ಅವು ಅಲ್ಲಗಳೆಯಬಹುದು. ನಿಮ್ಮ ಮನಸ್ಸು ಒಪ್ಪದಿದ್ದರೂ ಆ ಸಾಕ್ಷ್ಯಗಳಿಗೆ ತಲೆ ಬಾಗಿಸಬೇಕಾಗುವದು. ಸಾಕ್ಷಿಗಳೇ ಮಾರ್ಗದರ್ಶಕರು. ನಾನು ಹೇಳಿದ್ದು ಸತ್ಯವೆಂದು ನೀವು ಹೇಗೆ ಹೇಳುವಿರಿ ? ನಿಮಗೆ ಹಾಗನ್ನಿಸುವ ದೆಂದೇ ? ಹಾಗಾದರೆ ನೀವು ನಂಬುತ್ತಿರುವದು ನಿಮ್ಮ ಹೃದಯವನ್ನು, ಬುದ್ಧಿಯನ್ನಲ್ಲ. ಬುದ್ಧಿಗೇ ಗೆಲುವಾಗುವದರಲ್ಲಿ ಸಂಶಯುವೇ ಇಲ್ಲ. ಕೆಲ ಸಮಯದ ವರೆಗೆ ಈ ನಂಬುಕೆ ನಿಮ್ಮಲ್ಲಿ ನಿಲ್ಲಬಹುದು. ಮುಂದೆ ಅದರ ಬಗ್ಗೆ ನೀವು ವಿಚಾರ ಮಾಡುತ್ತ ಹೋದಂತೆ, ನಿಮ್ಮ ಆ ಹೃದಯದ ನಂಬುಗೆಗೆ ಆಧಾರಗಳಿಲ್ಲವೆಂದು ಗೊತ್ತಾಗಿ ನೀವು ದುಃಖಕ್ಕೀಡಾಗುವಿರಿ. ಆಗ ನಿಮ್ಮ ಮನಸ್ಸು ವ್ಯಸನ ಪಡುತ್ತದಲ್ಲವೆ ? ನಾನು ಹೇಳಿದ್ದೆಲ್ಲ ಸತ್ಯವಲ್ಲ ಎಂದು ನಿಮ್ಮ ಹೃದಯಕ್ಕೆ ತುಸು ಸಂಶಯ ಬಂದರೆ ಸಾಕು, ಹಾಗೆ ಸಂಶಯ ಬರಲು ಆಧಾರವಾದ ಸಾಕ್ಷ್ಯಗಳೊಡನೆ ನೀವು ಹೊಡೆದಾಡಿ ಗೆಲ್ಲಲಾರಿರಿ. ಆ ಹೊಡೆದಾಟವ ಕಲ್ಪನೆಯನ್ನೂ ತಂದುಕೊಳ್ಳಿರಿ. ನಿಮ್ಮ ಬುದ್ಧಿಯು ಆ ಹೊಡೆದಾಟವನ್ನು ನಿಶ್ಚಿತಗೊಳಿಸಲು ಪಡುವ ಶ್ರಮವನ್ನೂ ಕಲ್ಪಿಸಿಕೊಳ್ಳಿರಿ. ಆ ಶ್ರಮದಿಂದ ನಿಮ್ಮ ವ್ಯಕ್ತಿತ್ವವೇ ಇಲ್ಲವಾಗುವದು. ವ್ಯಕ್ತಿತ್ವವಿಲ್ಲದಿರುವಾಗ ಪ್ರತ್ಯಕ್ಷವಾಗಿ ಎದುರಿಗಿರುವ ಆಧಾರಗಳನ್ನೂ ಸಾಕ್ಷ್ಯಗಳನ್ನೂ ಎದುರಿಸುವ ಸಾಮರ್ಥ್ಯವೆಲ್ಲಿಯದು ? ಯೋಚಿಸಿ ನೋಡಿರಿ, ಸತ್ಯ ಸಂಗತಿಗಳನ್ನೇ ತೆಗೆದುಕೊಂಡು ಸರಿಯಾಗಿ ಯೋಚಿಸಿರಿ: ನೀವೇ ರಾಜಾಸಾಹೇಬರೆಂದು ಗೊತ್ತಿದ್ದೇ ಕಮಲಾಕಾಂತ ನಿಮ್ಮನ್ನು ಇಲ್ಲಿಗೆ ಕರೆದು ತಂದುದು; ರಾಜಾಸಾಹೇಬರ ಬಗ್ಗೆ ನನಗಿದ್ದ ಅಭಿಪ್ರಾಯವನ್ನಂತೂ ನಾನು ನಿಮಗೆ ಮೊದಲೇ ತಿಳಿಸಿದ್ದೇನೆ. ನಾನು ಅವರನ್ನು ದ್ವೇಷಿಸುತ್ತಿದ್ದುದನ್ನೂ ಬಲ್ಲಿರಿ. ಹೀಗಿದ್ದರೂ ರಾಜಾಸಾಹೇಬ್ ನೀವೇ ಎಂದು ನನಗೆ ಗೊತ್ತಾದ ನಂತರವೂ ನಿಮ್ಮೊಡನೆ ಲಗ್ನವಾಗಲು ನಾನು

ಸಿದ್ಧಳಾದುದು; ಆದಾದ ನಂತರ ನಾನು ನನ್ನ ಮನಸ್ಸಿನ ವಿರುದ್ಧವಾಗಿಯೇ ನಿಮ್ಮೊಡನೆ ಲಗ್ನವಾಗಲಿರುವೆನೆಂದು ಭಾವಿಸಿದ್ದ ಕಮಲಾಕಾಂತ ನನ್ನನ್ನು ಸಮಾಧಾನಪಡಿಸಲೆಂದು ಆಡಿದ ಮಾತುಗಳು; ಈ ಎಲ್ಲ ಸಾಕ್ಷ್ಯಗಳನ್ನು ಲಕ್ಷ ದಲ್ಲಿಟ್ಟುಕೊಂಡು ಯೋಚಿಸಿ ನೋಡಿರಿ. ನಿಮ್ಮನ್ನು ತಿರಸ್ಕರಿಸುತ್ತಿದ್ದ ನನ್ನನ್ನು ನೀವು ಸದಾಕಾಲ ನಂಬುವದಾದರೂ ಹೇಗೆ ಸಾಧ್ಯ?"

"ನೀವು ಸರಳ ಸ್ವಭಾವದವರು, ನಿಮಗೆ ಕಪಟ ಗೊತ್ತಿಲ್ಲ...."

"ನನ್ನಲ್ಲಿ ಕಪಟವಿದೆಯೆಂದು ಹೇಳುವ ಸಾಕ್ಷ್ಯಗಳ ಆಧಾರವಿದೆಯಲ್ಲ?"

"ಅದರ ಪರಿವೆ ನನಗಿಲ್ಲ."

"ಅದಾಗದು," ಅವಳು ತಲೆಯನ್ನಲ್ಲಾಡಿಸಿ ನುಡಿದಳು, "ನೀವು ನನ್ನ ಬಗ್ಗೆ ವಿಶ್ವಾಸ ತಾಳಿದ್ದಕ್ಕಾಗಿ ನನಗೆ ಆನಂದವಾಗಿದೆ. ಆದರೆ ನೀವು ಅಸಾಧ್ಯ ವಾದುದನ್ನು ಸಾಧಿಸ ಹೊರಟಿರುವಿರಿ. ಅಸಾಧ್ಯವೆಂದುದನ್ನು ನಾನು ನಂಬ ಬೇಕೆಂದು ನೀವು ಬಯಸುವಿರಿ. ಅದೇ ನನ್ನಿಂದ ಅಸಾಧ್ಯವಾದ್ದರಿಂದಲೂ ನಿಮ್ಮನ್ನು ನಾನು ಬಹಳವಾಗಿ ಪ್ರೀತಿಸುತ್ತಿರುವೆನೆಂದೂ ನಿಮ್ಮನ್ನು ಇಲ್ಲಿಂದ ಹೊರಗೆ ಹಾಕುತ್ತಿರುವೆ...."

"ನನ್ನನ್ನು ಹೊರಗೆ ಹಾಕುವಿರಾ?"

"ಹೌದು. ಅದರಿಂದ ನನಗೆ ವ್ಯಸನವೂ ಆಗಬಹುದು. ಆದರೆ ಅದರ ಹೊರತು ಬೇರೆ ಮಾರ್ಗವೇ ಇಲ್ಲ. ರಾಜಾಸಾಹೇಬ, ನಾನು ನಿಮ್ಮನ್ನು ತುಂಬಾ ಪ್ರೀತಿಸುತ್ತಿದ್ದರೂ ಇಡಿಯ ಜೀವನದಲ್ಲೆಲ್ಲ ನೀವು ನನ್ನನ್ನು ನಂಬಿರು ವಿರೋ ಇಲ್ಲವೋ, ವಿಶ್ವಾಸವಿದೆಯೋ ಇಲ್ಲವೋ ಎಂದು ಚಿಂತಿಸುತ್ತ ಕಾಲ ಹರಣ ಮಾಡಲು ನಾನು ಸಿದ್ಧಳಿಲ್ಲ, ನನ್ನಿಂದ ಅದು ಆಗಲಾರದು. ನನ್ನ ಹೃದಯದಲ್ಲಿನ ಸತ್ಯವನ್ನು ನೀವು ಗುರುತಿಸಲು ಸಮರ್ಥರಾಗಲಾರಿರಿ, ಅದೇ ಭಯಂಕರವಾದುದು. ಕೆಲವು ಸಾರೆ ನೀವು ನನ್ನನ್ನು ನಂಬಬಹುದು. ಆದರೆ ಸಂಶಯ ಮತ್ತು ಅವನಂಬಿಕೆ ಎಂಬ ಪಿಶಾಚದ ಕೈ ಆ ಅಲ್ಪ ಸಮಯದ ನಂಬುಗೆಯನ್ನೂ ತಳ್ಳಿಬಿಡುವದು. ಅದರಿಂದ ನಮ್ಮಿಬ್ಬರ ಜೀವನ ದುಃಖ ಮಯವಾಗುವದು. ಹೀಗೆ ಅಪನಂಬಿಗೆಯಿರುವಾಗ ಕ್ಷುಲ್ಲಕ ಕಾರಣಗಳೂ ಆ ಅಪನಂಬಿಕೆಯನ್ನು ಹೆಚ್ಚಿಸುತ್ತ ಹೋಗುವವು.

"ನಮ್ಮಿಬ್ಬರಲ್ಲಿ ಜಗಳ ಬರುವದೂ ಸಹಜ, ನಾವೂ ಮನುಷ್ಯರೇ ಅಲ್ಲವೆ? ಅವು ಮರುಕ್ಷಣದಲ್ಲಿ ಮಾಯವಾಗಲಾರವು. ಅವು ನಿಮ್ಮ ಮನಸ್ಸಿನಲ್ಲಿ ಉಳಿದುಬಿಡುವವು, ನಾನು ನಿಮ್ಮನ್ನು ಪ್ರೀತಿಸಿ ಲಗ್ನವಾಗಿಲ್ಲವೆಂದು ಎತ್ತಿ ತೋರಿಸುವವು. ಇಂಥ ವ್ಯಸನದಲ್ಲಿ ನೀವು ತೊಳಲುತ್ತಿರುವಾಗ ನನಗೂ ವ್ಯಸನವಾಗುವದು ಸಹಜವೇ. ಆದರೆ ನಾನು ಆ ರೀತಿಯ ನಟನೆ ಮಾಡುತ್ತಿರುವಂತೆ ನೀವು ಭಾವಿಸಿಕೊಳ್ಳಬಹುದು. ನಾನು ಹೇಳುತ್ತಿರುವದು ಕಲ್ಪನೆಯ ಮಾತು ಎಂದು ನೀವು ಅನ್ನಬಹುದು. ಆದರೆ ಸತ್ಯವಾಗಿಯೂ ಅದು ಕಲ್ಪನೆಯ ಮಾತಲ್ಲ. ಹಾಗೆ ಆಗುವದೇ ಖಂಡಿತ. ಒಳ್ಳೇದು, ನನ್ನ ಬಗ್ಗೆ ನಿಮಗೇನು ಗೊತ್ತಿದೆ? ನೀವು ನನ್ನನ್ನು ಇಷ್ಟೊಂದು ನಂಬುವಂತೆ ಮಾಡುವ ಯಾವ ಗುಣ ನನ್ನಲ್ಲಿದೆ? ಈ ಹಿಂದೆಯೇ ನಮ್ಮಿಬ್ಬರ ಲಗ್ನವಾಗಿ ಹೋಗಿ ಅನೇಕ ದಿನಗಳ ನಂತರ ಇಂಥ ಪ್ರಸಂಗ ಬಂದಿದ್ದರೆ ನಾವಿಬ್ಬರೂ ನಲಿದು ಬಿಡಬಹುದಾಗಿತ್ತು. ಆದರೆ ನಾವಿನ್ನೂ ಪರಕೀಯರೇ. ನಾವಿಬ್ಬರೂ ಒಂದೆಡೆಗೆ ಸೇರಿದೆವು. ಒಬ್ಬರನ್ನೊಬ್ಬರು ಪ್ರೀತಿಸಿದೆವು. ಅದಕ್ಕೆ ಕಾರಣ ನಮ್ಮಿಬ್ಬರಲ್ಲಿ ಪರಸ್ಪರರನ್ನು ಆಕರ್ಷಿಸುವ ಏನೋ ಇತ್ತು. ಆ ಆಕರ್ಷಕ ವಸ್ತುವನ್ನೇ ಆಧಾರವಾಗಿಟ್ಟುಕೊಂಡು ಗೋಪುರವೊಂದರ ತಳ ಕಟ್ಟಿದೆವು. ಅದನ್ನೂ ಈಗ ಸಂಭವಿಸಿದ ಘಟನೆ ಅಲುಗಾಡಿಸಿ ಬಿಟ್ಟಿತು. ಅಲ್ಲಿಗೆ ಮುಗಿಯಿತು ಆ ಗೋಪುರದ ಕಥೆ. ನಾವಿಬ್ಬರೂ ಒಬ್ಬರನ್ನೊಬ್ಬರು ಚೆನ್ನಾಗಿ ಪರೀಕ್ಷಿಸಿ ನೋಡಿ ಅಭ್ಯಸಿಸಿಲ್ಲ. ಕೇವಲ ಕಲ್ಪನೆಯ ಸಾಮ್ರಾಜ್ಯದಲ್ಲಿ ವೈಮರೆತಿದ್ದೆವು." ಅವಳು ಮಾತು ನಿಲ್ಲಿಸಿ ಗಡಿಯಾರ ನೋಡಿ, "ನಾನು ನಿಮ್ಮ ಗಂಟು ಕಟ್ಟುವೆ. ನಿಮಗೆ ಟ್ರೇನ್ ಸಿಕ್ಕುವದು." ಎಂದಳು.

ಅವನು ತಿರಸ್ಕಾರದಿಂದ ನಗುತ್ತ, "ನೀವು ನನ್ನನ್ನು ಹೊರಗೆ ಬಿಸಾಕುತ್ತಿರುವಿರಿ." ಎಂದ.

"ಹೌದು. ನಿಮ್ಮನ್ನು ಹೋಗಗೊಡುವಷ್ಟು ಶಕ್ತಿ ನನ್ನಲ್ಲಿರುವಾಗಲೇ ನಾನು ನಿಮ್ಮನ್ನು ಹೊರಕ್ಕೆ ಕಳಿಸಿ ಬಿಡುವೆ."

"ನನ್ನನ್ನು ಹೊರದೂಡಲು ನಿಮ್ಮ ಮನಸ್ಸು ಒಪ್ಪುತ್ತಿದೆಯೇ?"

"ನನ್ನ ಮನಸ್ಸು ಒಪ್ಪುತ್ತಿದೆಯೆಂದು ನೀವೇಕೆ ತಿಳಿಯಬೇಕು?"

ರಾಜಾಸಾಹೇಬ ತಲೆಯನ್ನಲ್ಲಾಡಿಸಿದ.

"ನನಗೆ ಅರ್ಥವಾಗುತ್ತಿದೆ, ರಾಜಾಸಾಹೇಬ್. ನಿಮಗೆ ಇಲ್ಲದ ದುಃಖ ತಂದಿರಿಸಲು ನಾನು ಬೇಕೆಂದೇ ನಿಮ್ಮಿಂದ ದೂರವಿರಲು ಪ್ರಯತ್ನಿಸುತ್ತಿರುವೆನೆಂದು ನೀವು ಅನ್ನಬಹುದು. ಆದರೆ ನನ್ನ ಇಚ್ಛೆ ಅದಲ್ಲ, ನಾನು ಭವಿಷ್ಯ ಜೀವನದ ಕುರಿತು ಯೋಚಿಸುತ್ತಿದ್ದೇನೆ. ನಿಮ್ಮ ಹಣ ದೊರಕಿಸಲು ನಾನು ಈ ನಾಟಕ ಹೂಡಿದ್ದೆನಾದರೆ ನಿಮ್ಮನ್ನು ಹೀಗೆ ಹೊರಗೆ ಅಟ್ಟುತ್ತಿದ್ದೆನೇ? ಇಲ್ಲ. ಆದರೆ ನಿಮ್ಮನ್ನು ಇಲ್ಲಿ ಇರಗೊಟ್ಟಿದ್ದೇ ಆದರೆ ನಿಮ್ಮ ಹಣದ ಲಾಭ ಪಡೆಯಲು ನಾನು ಹಾಗೆ ಮಾಡಿದ್ದರ ಬಗ್ಗೆ ನಿಮ್ಮಲ್ಲಿ ಇಂದಿಲ್ಲ ನಾಳೆಯಾದರೂ ಸಂಶಯ ಬಂದೇ ಬರುವದು. ಆ ಸಂಶಯವನ್ನು ಹೊಡೆದೋಡಿಸಲು ನೀವು ಒಂದು ಸಲವಲ್ಲ, ನೂರು–ಸಹಸ್ರ ಸಲ ಪ್ರಯತ್ನಿಸಬಹುದು. ಆದರೆ ಆ ಸಂಶಯ ನಿರ್ಮೂಲವಾಗಲಾರದು. ಕೊನೆಗೆ ನಿಮಗೆ ಸೋಲಾಗುವದು."

"ವಾದ ಹಾಕಲು ನಾನು ಸಿದ್ಧನಿಲ್ಲ." ಅವನು ವ್ಯಸನದಿಂದ ನುಡಿದ.

"ನನಗೂ ಅಷ್ಟೆ. ಸತ್ಯ ಸಂಗತಿಗಳನ್ನೂ ಸರಿಯಾಗಿ ಹೇಳಲು ನನಗೆ ಬರುವದಿಲ್ಲ. ಇನ್ನು ವಾದವಂತೂ ನನಗೆ ಸಲ್ಲದ ವಿಷಯ. ಬರ್ರಿ, ನಿಮ್ಮ ಸೂಟ್ ಕೇಸಿನಲ್ಲಿ ಬಟ್ಟೆಬರೆ ಇಡೋಣ."

"ನಾನು ಇಡುತ್ತೇನೆ, ನಿಮಗೇಕೆ ತೊಂದರೆ."

"ಛೆ ಪ್ರಯಾಣದ ಸಿದ್ಧತೆಯನ್ನು ಸಮರ್ಪಕ ರೀತಿಯಿಂದ ಯಾವ ಗಂಡಸೂ ಮಾಡಿಕೊಳ್ಳಲಾರ."

ಆಕೆ ಕೋಣೆಗೆ ಹೊರಟುದನ್ನು ಕಂಡು ಆತ ಅವಳನ್ನು ಹಿಂಬಾಲಿಸಿದ. ಸೂಟ್ ಕೇಸಿನ ಬಾಯಿ ತೆರೆದು ನೆಲದ ಮೇಲಿರಿಸಿ ಅವಳು ಸಾಮಾನನ್ನೆಲ್ಲ ಕಲೆ ಹಾಕುತ್ತಿದ್ದುದನ್ನು ನೋಡುತ್ತ ನಿಂತ. ಆಕೆ ಕಿಟಕಿಗಳ ಎದುರಿಗೆ ಹಾಯ್ದು ಹೋಗುತ್ತಿದ್ದಾಗ ಒಳಗೆ ತೂರಿ ಬರುತ್ತಿದ್ದ ಸೂರ್ಯ ಕಿರಣಗಳು ಅವಳ ತಲೆಗೂದಲನ್ನು ಬೆಳಗಿಸುತ್ತಿದ್ದುದನ್ನೇ ನಿರೀಕ್ಷಿಸುತ್ತಿದ್ದ. ಬಟ್ಟೆಗಳನ್ನು ಕೈಗೆತ್ತಿಕೊಂಡು ಆಸ್ಥೆಯಿಂದ ಮುಡಚಿ ಸೂಟ್ ಕೇಸಿನಲ್ಲಿ ತುಂಬುತ್ತಿದ್ದಳು. ಆ ಸೂಟ್ ಕೇಸು ಅವನ ಪ್ರಯಾಣದ ಸೂಚಕವಾಗಿತ್ತು! ಅತ್ಯಂತ ವ್ಯಸನದಿಂದ ಒಮ್ಮೆ ಅದನ್ನು, ಇನ್ನೊಮ್ಮೆ ಅವಳ ಚಟುವಟಿಕೆಗಳನ್ನು ನೋಡಿ ಅವಳ ಸಲುಗೆ ಪ್ರಾಮಾಣಿಕತೆ ಅಚ್ಚುಕಟ್ಟುತನಗಳನ್ನು ಕಂಡು, "ಇವಳು ನನ್ನ ಹೆಂಡತಿಯಾಗಿದ್ದರೂ ಹೀಗೆಯೇ ವರ್ತಿಸುತ್ತಿದ್ದಳೆಂಬುದರಲ್ಲಿ ಸಂಶಯವೇ ಇಲ್ಲ"

ತಮ್ಮಿಬ್ಬರ ಸುಖಜೀವನಕ್ಕೆ ಅಡ್ಡವಾಗಿ ಕೊನೆಯ ಸಲ ಪರದೆ ಬಿಡುತ್ತಿರುವಾಗಲೂ ಅವಳಲ್ಲಿ ಅಂಥ ಮಮತೆ ಆತ್ಮೀಯತೆಗಳನ್ನು ಕಂಡು ಆತನ ಹೃದಯ ಚೂರು ಚೂರಾಗಿ ಹೋಗಹತ್ತಿತ್ತು. ಅವಳ ಆ ರೀತಿಯನ್ನು ಖಂಡಿಸಲು ಹೋರಾಡುತ್ತಿದ್ದ. ಆಕೆ ಹೀಗೆ ವರ್ತಿಸಬಹುದೆಂದು ಆವನೆಂದೂ ಭಾವಿಸಿರಲಿಲ್ಲ. ತಮ್ಮಿಬ್ಬರ ಭವಿಷ್ಯ ಸುಖವನ್ನು ಹೀಗೆ ಮಾಡುವದೆಂದರೆ ಮೂರ್ಖತನ—ಹುಚ್ಚುತನಗಳ ಪರಮಾವಧಿ! ಗಂಡಸು ಕುಸಿದು ಬೀಳಬಹುದಾದ ಕಠಿಣ ಪ್ರಸಂಗದಲ್ಲೂ ಹೆಂಗಸು ತಾಳ್ಮೆಯಿಂದ ಅದನ್ನು ಹೇಗೆ ಎದುರಿಸಬಲ್ಲಳೆಂಬುದನ್ನು ಪ್ರತ್ಯಕ್ಷ ನೋಡುವ ಪ್ರಸಂಗ ಬಂದಿತ್ತು. ಅವಳು ಕೈಯಲ್ಲಿ ಏನೋ ಹಿಡಿದು ಹೇಳಿದಳು:

"ನೀವು ಮೊದಲೇ ಹೇಳಬಾರದಿತ್ತೇ? ನಿಮ್ಮ ಕಾಲುಚೀಲ ನೋಡಿರಿ, ಹೊಲಸು ರಾಡಿಯಾಗಿವೆ."

ತಲೆಗೆ ಯಾರೋ ಬಲವಾಗಿ ಹೊಡೆದಂತಾಯಿತವನಿಗೆ. ಇಂಥ ದುಃಖದ ಪರಿಸ್ಥಿತಿ ಬದಿಗಿರಿಸಿ ಕಾಲುಚೀಲದಂಥ ಕ್ಷುಲ್ಲಕ ವಿಚಾರಗಳತ್ತ ಸಹಜವಾಗಿ ತನ್ನ ಮನ ಹೊರಳಿಸುವ ಸಾಮರ್ಥ್ಯ ಸ್ತ್ರೀಯಲ್ಲಿರುವಂತೆ ಗಂಡಸಿಗೆಲ್ಲಿಯದು!

ಅವಳ ಬಾಯಿಂದ ನೊಂದ ಉಸಿರೊಂದು ಹೊರಬಂದು ಹುಬ್ಬು ತುಸು ಮೇಲಕ್ಕೇರಿದವು.

"ಗಂಡಸರ ಹಣೆ ಬರೆಹವೇ ಹೀಗೆ, ಎಲ್ಲದರಲ್ಲೂ ನಿರಾಸ್ಥೆ. ನೀವಂತೂ ಯಾತರ ಬಗೆಗೂ ಹೆಚ್ಚಿಗೆ ಯೋಚಿಸುವಂತೆ ಕಾಣುವದಿಲ್ಲ. ಬೇಸಿಗೆಯ ಬಿಸಿಲಿನಿಂದಲೂ ಚಳಿಗಾಲದ ಚಳಿಯಿಂದಲೂ ರಕ್ಷಿಸಿಕೊಳ್ಳುವ ಕುರಿತೂ ಯೋಚಿಸುತ್ತಿರಲಿಕ್ಕಿಲ್ಲ. ಕಾಲುಚೀಲದ ಗತಿಯೂ ಅಷ್ಟೆ. ನಿಮ್ಮನ್ನು ಸರಿಯಾದ ದಾರಿಗೆ ತರುತ್ತಿದ್ದೆ, ಆದರೆ ಇನ್ನು ಮೇಲೆ ಅದೂ ಸಾಧ್ಯವಿಲ್ಲ."

ರಾಜಾಸಾಹೇಬನಿಗೆ ಈಗ ಮಾತ್ರ ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಅವನ ಕೈಕಾಲುಗಳಲ್ಲಿ ನಡುಕ ಹುಟ್ಟಿತು. ಧ್ವನಿ ತೆಗೆಯುವ ಸಾಹಸವನ್ನು ಮಾಡಿದ:

"ಪ್ರ....ಮಿ....ಲಾ...."

ಮೊಳಕಾಲು ನೆಲಕ್ಕೂರಿ ಸೂಟ್ ಕೇಸಿನಲ್ಲಿ ಬಟ್ಟೆಗಳನ್ನಿಡುತ್ತಿದ್ದ ಪ್ರಮಿಲೆ ಮುಖ ಮೇಲಕ್ಕೆತ್ತಿ ಅವನ ದೃಷ್ಟಿಗೆ ದೃಷ್ಟಿ ಸೇರಿಸಿ,

"ಇನ್ನು ಯಾವ ಪ್ರಯೋಜನವೂ ಆಗುವಂತಿಲ್ಲ, ರಾಜಾಸಾಹೇಬ, ಇದರ ಹೊರತು ಬೇರೆ ಮಾರ್ಗವೇ ಇಲ್ಲ." ಎಂದು ಮುಖ ಕೆಳಗೆ ಮಾಡಿದಳು.

ಕೊನೆಯ ಗಳಿಗೆ ಬರುತ್ತಿದ್ದುದರ ಕಲ್ಪನೆಯಿಂದ ಅವನ ಮೌನ ಮಾಯವಾಗಿ ಸ್ಫೂರ್ತಿ ಬಂದಿರಬೇಕು.

"ಪ್ರಮಿಲಾ, ಇದು ನನ್ನಿಂದ ಸಾಧ್ಯವಿಲ್ಲ. ನಮ್ಮ ಸುಖವನ್ನು ಹೀಗೆ ಗಾಳಿಗೆ ತೂರುವದರಿಂದ ಯಾವ ಪುರುಷಾರ್ಥ ?"

ಒಂದು ನಿಮಿಷ ಮೌನದಿಂದುಳಿದು ಅವಳು,

"ರಾಜಾಸಾಹೇಬ, ಈವರೆಗೆ ನಾನು ಒಂದೇ ದೃಷ್ಟಿಯಿಂದ ಮಾತಾಡಿದೆ, ಇನ್ನು ನೀವು ನನ್ನ ವಿಚಾರವಾಗಿ ತುಸು ಯೋಚಿಸಿರಿ. ನಾನು ನಿಮ್ಮನ್ನು ಪ್ರೀತಿಸಿಯೇ ಲಗ್ನವಾಗಲು ಒಪ್ಪಿದ್ದೆನೆಂದು ಈವರೆಗೆ ನಾನು ನಿಮಗೆ ಹೇಳಿದೆ. ಆದರೆ ನೀವೂ ನನ್ನನ್ನು ಹೃದಯದಿಂದ ಪ್ರೀತಿಸುತ್ತಿರುವಿರೆಂದು ನಾನು ಹೇಗೆ ನಂಬಬೇಕು ?" ಎಂದಳು

ತುಸು ಮುಂದುವರಿದಿದ್ದ ಆತ ಆಶ್ಚರ್ಯಚಕಿತನಾಗಿ ಒಂದು ಹೆಜ್ಜೆ ಹಿಂದೆ ಸರಿದು,

"ನಾನೇ ಹೇಳುತ್ತಿರುವೆನಲ್ಲ, ಅದಕ್ಕೂ ಹೆಚ್ಚಿನ ಪ್ರಮಾಣವೇಕೆ ಬೇಕು ?" ಎಂದ.

"ಅಷ್ಟೇ ಸಾಲದು. ನಾನು ಈಗ ಶ್ರಮಪಟ್ಟು ನಿಮಗೆ ತಿಳಿಸಿ ಹೇಳಿದ್ದನ್ನು ನೀವು ಎರಡೇ ಶಬ್ದಗಳಲ್ಲಿ ಹೇಳಿ ಮುಗಿಸಿದಿರಿ. ಜೀವನದ ವಿಚಾರದಲ್ಲಿ ಅದೇ ಭಯಂಕರವಾದುದು, ಎಲ್ಲರೂ ತಮಗನ್ನಿಸಿದುದನ್ನೇ ಹೇಳುವರು. ಜೀವನದ ತುಂಬೆಲ್ಲ ಏನಿದೆ ? ಕೇವಲ ಶಬ್ದಗಳು....ಶಬ್ದ....ಶಬ್ದ.... ! ಈ ಶಬ್ದಗಳೆಲ್ಲ ಸತ್ಯವೆಂದೇ ನಂಬುವ ಬಗೆ ಹೇಗೆ ? ನನ್ನ ಕರುಣಾಜನಕ ಸ್ಥಿತಿ, ಬಡತನಗಳ ಮೇಲೆ ನಿಮಗೆ ಕನಿಕರ ಹುಟ್ಟಿ ನೀವು ನನ್ನೊಡನೆ ಲಗ್ನವಾಗಲು ಸಿದ್ಧರಾಗಿಲ್ಲವೆಂದು ನಾನು ನಂಬುವದಾದರೂ ಹೇಗೆ ? ಆಧಾರಗಳೇನಿವೆ ?"

ಆತ ಅವಳನ್ನೊಮ್ಮೆ ದಿಟ್ಟಿಸಿ ನೋಡಿ,

"ನೀನು ಹಾಗೆ ಭಾವಿಸುವದು ಮೂರ್ಖತನದ ಪರಮಾವಧಿ." ಎಂದ.

"ಯಾಕೆ? ಕೆಲ ವರ್ಷಗಳ ನಂತರ ನಾನು ಹಾಗೆ ಸಂಶಯ ತಾಳ ಬಹುದು, ಅದನ್ನು ಯೋಚಿಸಿರಿ. ಹಾಗೆ ನಾನು ಭಾವಿಸುವದರಲ್ಲಿ ಅರ್ಥವಿ ಲ್ಲೆಂದು ನನ್ನ ಅಂತರಾತ್ಮ ಒತ್ತಿ ಹೇಳಿದರೂ ನಾನು ಸಂಶಯಗ್ರಸ್ತಳಾಗಿಯೇ ಉಳಿಯುವೆ. ಆ ಆಂತರಾತ್ಮನಿಗಿಂತಲೂ ಶಕ್ತಿಯುತವಾದ ಯಾವುದೋ ಒಂದು ಅದೃಶ್ಯ ಶಕ್ತಿ ನೀವು ನನ್ನನ್ನು ಪೂರ್ಣ ಮನಸ್ಸಿನಿಂದ ಪ್ರೀತಿಸುತ್ತಿರುವಿ ರೆಂದು ಈಗಿನ ಮಟ್ಟಿಗೆ ನನಗೆ ಸಾರಿ ಸಾರಿ ಹೇಳುತ್ತಿದೆ. ಆದರೆ ಕೊನೆಯ ವರೆಗೂ ಅದೇ ಸ್ಥಿತಿಯಲ್ಲಿ ನನ್ನ ಮನಸ್ಸು ಉಳಿಯಲಾರದು, ಬಿರುಗಾಳಿಯ ಮಧ್ಯದಲ್ಲಿ ಉರಿಯುತ್ತಿರುವ ದೀಪವಿದ್ದಂತೆ ಅದು. ಈಗೇನೋ ಆ ದೀಪ ಉರಿಯುತ್ತಿದೆ. ಅದರ ಬೆಳಕಿನಲ್ಲಿ ನಾವು ಸತ್ಯವನ್ನು ಕಾಣುತ್ತಿದ್ದೇವೆ. ನಾಳೆ ಆ ಬಿರುಗಾಳಿ ಜೋರಾಗಿ ಬೀಸಹತ್ತಿ ಆ ದೀಪ ಹೊಯ್ದಾಡಹತ್ತಿದರೆ, ಸತ್ಯ ಅಸ್ಪಷ್ಟವಾಗಿ ಕಾಣಿಸುವದು, ಕಾಣಿಸಲೂ ಇರಲಿಕ್ಕಿಲ್ಲ. ಆ ಪ್ರೇಮ ಜ್ಯೋತಿಯ ಸುತ್ತಲು ಸಂಶಯ ಸುತ್ತುಗಟ್ಟಿ ಬಿರುಗಾಳಿಯಾಗಿ ಪರಿಣಮಿಸ ಬಹುದು.

"ನಿಮ್ಮನ್ನು ನಾನು ಈಗ ಇಲ್ಲಿಂದ ಕಳುಹಿಸದಿದ್ದರೆ ನನ್ನ ಸ್ಥಿತಿ ಏನಾಗು ವದು ಗೊತ್ತೇ? ಆ ಹುಡುಗಿ ನಿನ್ನೆಯ ರಾತ್ರಿ ಅಂದದ್ದು ನಾನೂ ಕೇಳಿದ್ದೇನೆ. ನೀವು ಅವಳಿಗೆ ಉತ್ತರ ಕೊಟ್ಟದ್ದೂ ನೆನಪಿದೆ. ಸುಂದರರಾವ್ ಸರಕಾರದ ಹಣ ನಿಮಗೆ ಸಿಕ್ಕ ವರ್ತಮಾನ ತಿಳಿದೊಡನೆ ನನ್ನ ಹಣವನ್ನು ಬಲಾತ್ಕಾರ ದಿಂದ ದೋಚಿಕೊಂಡದ್ದಕ್ಕೆ ನಿಮಗೆ ವ್ಯಥೆಯಾಯಿತು. ನನ್ನ ಬಗ್ಗೆ ಮರುಕ ಹುಟ್ಟಿ ಅದರೊಳಗಿಂದ ಅರ್ಧ ಭಾಗ ನನಗೆ ಕೊಡಲು ಮುಂದೆ ಬಂದಿರಿ. ನಿಮ್ಮಂಥ ಸರಳ ಸ್ವಭಾವದವರಿಗೆ ಅದು ಒಪ್ಪುವ ಮಾತೂ ಹೌದು. ಆದರೆ ಅದೇ ನನಗೆ ಗಂಡಾಂತರಕಾರಿಯಾಗಿದೆ. ನಾನು ಮುಂದೆ ಕೆಲದಿನಗಳನಂತರ ಯೋಚಿಸಬಹುದು: ನನ್ನನ್ನು ಲಗ್ನವಾಗಿ ಬಿಟ್ಟರೆ ಆ ಹಣದ ವಿಚಾರದ ಗೊಂದಲವೇ ತಪ್ಪುವದೆಂದು ಭಾವಿಸಿಯೇ ನೀವು ನನ್ನನ್ನು ಲಗ್ನವಾದಿರಿ, ಎಂದು. ನಿಮ್ಮಿಂದ ನನಗಾದ ಅನ್ಯಾಯವನ್ನು ಸರಿಪಡಿಸಲೆಂದೇ ನೀವು ಮದುವೆಯಾದಿರಿ ಎಂದು ನಾನು ತಿಳಿದುಕೊಳ್ಳಬಹುದು. ಬೇರೆಯವರು ನನಗೆ ಉಪಕಾರ ಮಾಡಬೇಕೆಂದು ನಾನು ಎಂದೂ ಇಚ್ಛಿಸುವದಿಲ್ಲ. ಅದೊಂದು

ಅಹಂಕಾರವೆನ್ನಿರಿ, ಆದರೆ ಅದು ನನ್ನ ಸ್ವಭಾವ. ಬೇರೆಯವರ ಋಣದಲ್ಲಿರು ವದು, ನಾನು ಗಳಿಸದಿದ್ದುದನ್ನು ಬಯಸುವದು ನನ್ನ ಮನಸ್ಸಿಗೆ ಹಿಡಿಸುವದಿಲ್ಲ. ನಿಮ್ಮೊಡನೆ ಲಗ್ನವಾದ ಕೆಲ ದಿನಗಳ ನಂತರ ನನ್ನ ಅಹಂಕಾರ ಜಾಗ್ರುತವಾಗಿ ನಿಲ್ಲಬಹುದು ನನ್ನಂತೆಯೇ ನೀವೂ. ಆಗ ನಮ್ಮಿಬ್ಬರಲ್ಲಿ ಅಸಂತೋಷ ಮನಸ್ತಾಪಗಳು ತಲೆದೋರಿ ನಮ್ಮ ವಿಚಾರ ಕೋನಗಳೇ ಬದಲಾಗುವವು. ನಾವು ಒಬ್ಬರನ್ನೊಬ್ಬರು ಕಾಯುವದು, ಒರೆಗೆ ಹಚ್ಚುವದು, ಪರೀಕ್ಷಿಸುವದೂ ಪ್ರಾರಂಭವಾಗುವದು. ಆದರ ಪರಿಣಾಮ ಭಯಂಕರವಾಗುವದು........ಅತಿ ಭಯಂಕರ !"

ಅವನಿಗೆ ಮಾತಾಡಲು ಮನಸ್ಸಾಗುತ್ತದೇನೋ, ನಿಜ. ಆದರೆ ಅದ ರಿಂದ ಪ್ರಯೋಜನವಿಲ್ಲವೆಂದೂ ಕಂಡುಬಂದಿತ್ತು. ಪ್ರಮೀಲೆ ಎದ್ದು ನಿಂತಳು. ಈಗ ಅವರು ಒಬ್ಬರನ್ನೊಬ್ಬರು ನೋಡುತ್ತಿರಲಿಲ್ಲ. ಆತ ಸೂಟ್ ಕೇಸ್ ಮುಚ್ಚಿ ಕೈಗೆತ್ತಿಕೊಂಡ. ಅವರಿಬ್ಬರ ಸಂಬಂಧ ಕಡಿದು ಹೋಗುವ ಕೊನೆಯ ಗಳಿಗೆ ಸಮೀಪಿಸಿತ್ತು.

"ನಗುನಗುತ್ತಲೇ ಅಗಲಿ ಬಿಡೋಣ, ನಗುನಗುತ್ತಲೇ ಎಲ್ಲವನ್ನೂ ಮರೆತು ಬಿಡೋಣ....ರಾಜಾಸಾಹೇಬ್...."

ಅವನು ಆಗಲೂ ತುಟಿ ಬಿಚ್ಚಲಿಲ್ಲ,

"ಗೇಟಿನ ತನಕ ನಿಮ್ಮನ್ನು ಕಳಿಸಲು ಬರುವೆ." ಅವಳೇ ಹೇಳಿದಳು.

ಅವರಿಬ್ಬರೂ ಮೌನವಾಗಿ ಮುಂದೆ ಸಾಗಿದರು. ಬೇಸಗೆಯ ಅಂತ್ಯ ಕಾಲ—ಮಳೆಗಾಲದ ಪ್ರಾರಂಭದ ಕಾಲದ ಜಡವಾದ ಗಾಳಿ ಬೀಸುತ್ತಿತ್ತು. ಗೇಟ್ ತಲುಪಿದರು.

"ನಮಸ್ಕಾರ್ ರಾಜಾಸಾಹೇಬ್...."

ಆತ ಅವಳ ಕೈಗಳನ್ನು ಕುಲುಕುತ್ತ,

"ನಮಸ್ಕಾರ, ಪ್ರಮೀಲಾದೇವಿ." ಎಂದ.

ಅವನು ಹೋಗುತ್ತಿದ್ದುದನ್ನೇ ನೋಡುತ್ತ ಅವಳು ಗೇಟಿಗೆ ಆಸರೆಯಾಗಿ ನಿಂತಳು. ದಾರಿ ಹೊರಳಿದ್ದಲ್ಲಿ ಆತ ತುಸು ತಡೆದು ಅವಳು ಸನ್ನೆ ಮಾಡಬಹು ದೆಂದು ತಿರುಗಿ ನೋಡಿದ. ಮತ್ತೆ ಮುಂದೆ ಸಾಗಿ ಕಾಣದಾದ. ಪ್ರಮೀಲೆ

ಗೇಟಿನ ಕಂಬವನ್ನು ಬಿಗಿಯಾಗಿ ಹಿಡಿದಿದ್ದಳು. ಅದರ ಆಧಾರವಿದ್ದಿತೆಂದೇ ಅವಳಿಗೆ ನಿಂತಿರಲು ಸಾಧ್ಯವಾಗಿತ್ತು.

ಸುತ್ತಲಿನ ಬಯಲು ಬರಿದಾಗಿ ಏಕಾಂತವಾಸದಲ್ಲಿರುವಂತೆ ಕಂಡಿತು. ಆಗಲೇ ತನ್ನೆಡೆಗೆ ಕಮಲಾಕಾಂತ ಬರುತ್ತಿದ್ದುದನ್ನು ಕಂಡಳು.

"ಪ್ರಮೀಲಾ...."

ಆವನು ಅತ್ಯಂತ ಉತ್ಸಾಹಿತನಾಗಿದ್ದ. ಆ ಚಿಕ್ಕ ಕಣ್ಣುಗಳಲ್ಲಿ ತೃಪ್ತಿಯ ಛಾಯೆ ಮೂಡಿ ಬಂದಿತ್ತು. ಸಿನೀಮಾ ಹಾಡೊಂದನ್ನು ಗುಣ ಗುಟ್ಟುತ್ತಿದ್ದ.

"ರಾಜಾಸಾಹೇಬನೆಲ್ಲಿ ಪ್ರಮೀಲಾ ?"

"ಅವರು ಹೊರಟು ಹೋದರು."

ಕಮಲಾಕಾಂತನ ಹಾಡು ಅರ್ಧಕ್ಕೇ ನಿಂತಿತು. ತಂಗಿಯ ಮಾತಿನಲ್ಲಿ ಭಯಾನಕವಾದುದೇನೋ ಕಂಡುಬಂತು. ಉತ್ಸಾಹದ ಬದಲು ಭಯವೆನ್ನಿಸ ಹತ್ತಿತು.

"ಅವನು ಹೋದನೇ ? ಹಾಗೆಂದರೇನು ಮನೆಬಿಟ್ಟು ಹೋದನೇ ?"

"ಹೌದು...."

"ತನ್ನೂರಿಗೆ ಹೋದನೇ ?"

"ಈ ಮನೆ ಬಿಟ್ಟು ಹೋದ."

ಅವರಿಬ್ಬರೂ ಮನೆಯ ಸಮೀಪಕ್ಕೆ ಬಂದಿದ್ದರು.

"ತನ್ನ ಊರಿಗೆ ಹೋದನೆಂದು ನೀನು ಹೇಳುತ್ತಿಲ್ಲವಷ್ಟೆ, ಪ್ರಮೀಲಾ ?"

"ಅವನು ಹೊರಟುಹೋದ."

"ಅದೂ ಗಾಳಿಯ ಮಾತಾಯಿತು."

ಜಗತ್ತೇ ಸ್ತಬ್ಧವಾಗಿ ನಿಂತುಬಿಟ್ಟಂತಾಯಿತು. ಸುತ್ತಲಿನ ಗಿಡಗಂಟಿ ಗಳಲ್ಲಿನ ಕ್ರಿಮಿಕೀಟಗಳು ಕಮಲಾಕಾಂತನ ಕಿವಿಯಲ್ಲಿ ಕೂಗಿದಂತಾಯಿತು.

"ಹಾಯ್, ದುರ್ದೈವವೇ !" ಮೂರ್ಛೆ ಹೋಗುವವರಂತೆ ನುಡಿದು, ಗಾಳದಲ್ಲಿ ಸಿಕ್ಕುಬಿದ್ದ ಮೀನದಂತೆ ಮುಂಬಾಗಿಲ ಕಟ್ಟೆಯ ಮೇಲೆ ಆತ ಕುಸಿದು ಬಿದ್ದ.

ದುಃಖದಿಂದ ಕಮಲಾಕಾಂತ ಕುಸಿದುಬಿದ್ದರೂ ಅದರಿಂದ ಪ್ರಮೀಲೆಯ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಹುಟ್ಟುವಾಗಲೇ ದುಃಖವನ್ನು ಹೊತ್ತು ಬಂದಿದ್ದ ಅವಳಿಗೆ ತುಸುವೂ ವಿಷಾದವೆನ್ನಿಸಲಿಲ್ಲ. ದುಃಖ ಸಾಂತ್ವನಗೊಳ್ಳಬೇಕಾದರೆ ಬೇರೆಯವರ ಸಹವಾಸ ಸಿಕ್ಕಬೇಕು, ಅವರು ನಾಲ್ಕು ಸಮಾಧಾನದ ಮಾತು ಹೇಳಬೇಕು. ದುಃಖಿಯಾದವನು ಬಯಸುವದೂ ಅದನ್ನೇ. ಆದರೆ ಪ್ರಮೀಲಾ ಅವನನ್ನು ನಿರಾಸಕ್ತಿಯಿಂದ ನೋಡುತ್ತಿದ್ದಳು. ಕೆಲ ಸಮಯದ ನಂತರ ಅವನು ನಿಧಾನವಾಗಿ ಬಾಯಿ ತೆಗೆದು, ಒಮ್ಮೆ ಮುಚ್ಚಿ ಮತ್ತೊಮ್ಮೆ ತೆರೆದ. ಇದು ಮಾತಿಗೆ ಪ್ರಾರಂಭವಾಗುವ ಸೂಚನೆಯೆಂದು ತಿಳಿದೊಡನೆ ಅವಳು ಅಲ್ಲಿಂದ ಹೊರಟು ಗೇಟಿನತ್ತ ತೆರಳಿದಳು. ಕಮಲಾಕಾಂತನ ಸ್ವಭಾವ ಅವಳಿಗೆ ಗೊತ್ತಿದ್ದುದೇ. ಒಮ್ಮೆ ಅವನ ಪ್ರಶ್ನೆಗಳು ಪ್ರಾರಂಭವಾದರೆ ಸಾಕು, ಅವುಗಳಿಗೆ ಕೊನೆಯೇ ಇರುತ್ತಿರಲಿಲ್ಲ.

ಅವಳಿಗೆ ಏಕಾಂತ ಬೇಕಾಗಿತ್ತು; ಅಂತೆಯೇ ಕಮಲಾಕಾಂತನನ್ನು ಅಲ್ಲಿಯೇ ಬಿಟ್ಟು ತೆರಳಿದಳು. ಕೆಲಸವಿಲ್ಲದೆ ಏಕಾಂತದಲ್ಲಿರುವದೆಂದರೆ ಮನಸ್ಸಿನ ಅಸ್ವಾಸ್ಥ್ಯತೆಯನ್ನು ಹೆಚ್ಚಿಸಿಕೊಳ್ಳುವದು! ಅದನ್ನು ತಪ್ಪಿಸಲು ಜೇನು ಹುಳುಗಳ ಮಧ್ಯದಲ್ಲಿ ಕೆಲಸ ಮಾಡಲು ಬಯಸಿದಳು. ಅದರಿಂದಲೂ ಮನಸ್ಸು ಸಮಾಧಾನವಾಗದಿದ್ದರೆ ಮನೆ ಸೇರಿ ಎಲ್ಲ ಸಾಮಾನುಗಳನ್ನು ಕಿತ್ತೊಗೆದು ಮತ್ತೆ ಜೋಡಿಸಿ ಇಡುತ್ತ ವೇಳೆ ಕಳೆದು ದಣಿವಾದೊಡನೆ ಮಲಗಿಬಿಡುವದೆಂದು ನಿರ್ಧರಿಸಿದಳು.

ಅವಳ ಮನಸ್ಸಿನ ಮೇಲೆ ವಿರುದ್ಧ ಪರಿಣಾಮಗಳಾಗಹತ್ತಿದ್ದವು. ಹಾಗೆ ಆಗುವದೆಂದು ಅವಳಿಗೆ ಮೊದಲೇ ಗೊತ್ತಿತ್ತು. ಅದನ್ನು ಎದುರಿಸುವ ನಿಶ್ಚಯವನ್ನೂ ಮಾಡಿಕೊಂಡಿದ್ದಳು. ಆದರೆ ವೈರಿಯ ಶಕ್ತಿಯ ಬಗ್ಗೆ ಅವಳ ಗ್ರಹಿಕೆ ತಪ್ಪಾಗಿತ್ತು. ಮೊದಮೊದಲು ತಾನೊಂದು ಹುಚ್ಚುತನ ಮಾಡಿದೆನೆಂದೇ ಕಂಡಿತು. ಎಲ್ಲವನ್ನೂ ಯೋಚಿಸಿ ಸರಿಯಾದ ದಾರಿ ಕಂಡುಕೊಂಡೆನೆಂದು ಹೇಳುವ ಸ್ಥೈರ್ಯ ಅವಳಲ್ಲಿ ಉಳಿದಿರಲಿಲ್ಲ. ರಾಜಾಸಾಹೇಬ ಹೊರಟು

ಹೋದ ನಂತರವೂ ಮುಂದಿನ ಪರಿಸ್ಥಿತಿ ಧೈರ್ಯವಾಗಿ ಎದುರಿಸಬಲ್ಲೆನೆಂದು ಆಕೆ ತಿಳಿದಿದ್ದಳು. ಆದರೆ ಅವನು ಹೋದ ನಂತರ ಅವಳ ನಂಬುಗೆ ವಿಶ್ವಾಸ ಸುಳ್ಳಾಗಿ ಪರಿಣಮಿಸಿತ್ತು. ಈಗ ಅವಳು ಚಿಂತಿಸುತ್ತಿದ್ದುದು: ನಾನು ಅವನನ್ನು ಪ್ರೀತಿಸುತ್ತಿದ್ದೆ. ನಾನೇ ಅವನನ್ನು ಕಳೆದುಕೊಂಡೆ, ಎಂದು ಮಾತ್ರ.

ಅವನಾದರೂ ಅವಳ ಮಾತುಗಳನ್ನೇಕೆ ಕೇಳಬೇಕಿತ್ತು ? ಅವಳನ್ನು ತನ್ನ ತೋಳ ತೆಕ್ಕೆಯಲ್ಲಿ ಸೆಳೆದುಕೊಂಡು, "ನೀನು ಮೂರ್ಖಳಿರುವಿ," ಎಂದೇಕೆ ಹೇಳಲಿಲ್ಲ ? ಹೆಂಗಸರು ಹೇಳಿದಂತೆ ಈ ಗಂಡಸರು ವರ್ತಿಸುವದರ ಅರ್ಥ ವೇನು ? ಅವಳನ್ನು ಆತ ನಿಜವಾಗಿ ಪ್ರೀತಿಸುತ್ತಿದ್ದರೆ ಹಾಗೆ ಹೋಗಬಹುದಿತ್ತೇ ? ಈ ವಿಚಾರ ಅವಳನ್ನು ತುಸು ಸಮಯ ಕಾಡಿಸಿತು. ಅವಳ ಹೃದಯ ಅದರಿಂದ ಗಾಸಿಯಾಗುತ್ತಿರುವಾಗಲೇ ವ್ಯಸನದಿಂದ ಭಾರವಾದ ಧ್ವನಿಯೊಂದು ಕೇಳಬಂತು.

ಅವಳು ಹೊರಳಿ ನೋಡಿದಳು. ಕಮಲಾಕಾಂತ ಜೋಲು ಮೋರೆ ಹಾಕಿಕೊಂಡು ಅವಳ ಹತ್ತಿರ ನಿಂತಿದ್ದ

"ನಾನೆಂದೂ ನಂಬಲಾರೆ...." ಆತ ಬಡಬಡಿಸುತ್ತಿದ್ದ.

ಪ್ರಮೀಲೆ ಹಲ್ಲು ಕಚ್ಚಿಕೊಂಡಿದ್ದಳು. ಅವನನ್ನು ಸಮಾಧಾನಪಡಿಸುವ ಸ್ಥಿತಿ ಅವಳದಾಗಿರಲಿಲ್ಲ.

"ಕೆಲ ದಿನಗಳಲ್ಲಿ ಇದೆಲ್ಲ ಮರೆತು ಹೋಗುವದು." ಆಕೆ ಕಠೋರಳಾಗಿ ಉತ್ತರಿಸಿದಳು.

"ಅವನನ್ನು ನೀನೇ ಕಳುಹಿಸಿ ಬಿಟ್ಟೆಯೇನು ?"

"ಹೌದು."

"ಹಾಗೇಕೆ ಮಾಡಬೇಕಿತ್ತು ?"

"ಅದರ ಹೊರತು ಬೇರೆ ಮಾರ್ಗವೇ ಇರಲಿಲ್ಲ."

"ನಾನಂದುದನ್ನು ಆತ ನಿನ್ನೆ ರಾತ್ರಿ ಕೇಳಿದ್ದನೇ ?"

"ಹೌದು, ಕೇಳಿದ್ದ."

"ಹಾ !" ತುಸು ಮೌನ ತಾಳಿ ಆತ ಮತ್ತೆ ಹೇಳಿದ, "ನೀನು ತಿಳಿಸಿ ಹೇಳಬಹುದಿತ್ತು."

"ಹೇಗೆ ಸಾಧ್ಯ....?"

"ನನಗೆ ತಿಳಿಯದು. ಏನಾದರೆಂದು ಹೇಳಿದ್ದರೆ ಸಾಕಾಗಿತ್ತು. ಅದಿರಲಿ, ನೀನೇ ಅವನನ್ನು ಕಳುಹಿಸಿದೆಯೆಂದೆಯಲ್ಲ ?"

"ಹೌದು, ನಾನೇ ಹೊರಕ್ಕೆ ಹಾಕಿದೆ."

"ಅದೇ ನನಗೆ ಅರ್ಥವಾಗುತ್ತಿಲ್ಲ."

ಅವಳ ತಾಳ್ಮೆಗೆ ಕೊನೆ ಬಂದಿತು.

"ಕಮಲಾಕಾಂತ, ದಯಮಾಡಿ ಅದರ ವಿಚಾರ ಮಾತಾಡಬೇಡ, ಆ ವಿಷಯ ಮುಗಿದಿದೆ."

"ಅದೇನೋ ನಿಜ, ಆದರೆ........"

"ಸಾಕು ಅಣ್ಣಾ, ನನ್ನಿಂದ ಅದೆಲ್ಲವನ್ನೂ ಕೇಳಲು ಬೇಡ, ನಾನು ಹೇಳಲೂ ಶಕ್ತಳಿಲ್ಲ. ನನ್ನ ಬಗೆಗೆ ನನಗೇ ತಿರಸ್ಕಾರ ಬಂದಿದೆ. ನನ್ನ ಮನಸ್ಸನ್ನು ಮತ್ತಿಷ್ಟು ನೋಯಿಸಬೇಡ...."

ಕಮಲಾಕಾಂತ ಅವಳನ್ನೊಮ್ಮೆ ನೋಡಿದ. ಅವಳಿಗೆ ನೋವನ್ನುಂಟು ಮಾಡಲು ಬಯಸಲಿಲ್ಲವಾದರೂ ಅವನ ಹೃದಯಕ್ಕಾದ ಸಂತಾಪ ಹೊರದೂಡಲು ದಾರಿ ಬೇಡವೇ ?

"ಹಾಗಿದ್ದರೆ ನಮ್ಮ ಜೀವನವೆಲ್ಲ ಇದೇ ಸ್ಥಿತಿಯಲ್ಲಿ ಕಳೆಯುವದು ತಾನೇ ?" ಸುತ್ತಲೂ ವಿಷಾದದಿಂದ ನೋಡಿ, "ಈ ದರಿದ್ರ ಜೇನು ಹುಳುಗಳು, ನೆಲ ಬಳಿಯುವದು, ನೀರು ತರುವದು, ಇವರೊಂದಿಗೆ ತಾನೇ ನಾನು ಜೀವಿಸುವದು ? ನನಗೆ ಸಾಲ ಕೊಟ್ಟವರು ನನ್ನನ್ನು ಜೈಲಿಗೆ ಕಳುಹಿಸದಿದ್ದರೆ ಹೀಗೆ ಇರಬೇಕಾಗುವದೆನ್ನು ! ನಾನು ಸುಳ್ಳು ಹೇಳಿ ಮೋಸದಿಂದ ಹಣ ದೊರಕಿಸುತ್ತಿದ್ದ ನನಗೇಕೆ ಹೊಳೆಯಲಿಲ್ಲವೋ ? ಹತ್ತೆಂಟು ಜನರಿಂದ ಹಾಗೆ ಸಾಲ ಪಡೆಯುವದು ಆನಂದದಾಯಕವಾಗಿ ಕಂಡಿತು. ಅವರ ಸಾಲ ಹೇಗೆ ತೀರಿಸಬೇಕೆಂಬುವದೇ ನನಗೆ ತಿಳಿಯದಾಗಿದೆ. ಜೈಲು ಸೇರುವದೇ ಲೇಸು !"

ಅವನ ಮಾತುಗಳನ್ನೆಲ್ಲ ಪೂರ್ತಿಯಾಗಿ ಸಹನೆಯಿಂದ ಕೇಳಲು ಅವಳು ಮನಸ್ಸು ಮಾಡಿದ್ದಳೇನೋ ನಿಜ, ಆದರೆ ಆ ನಿರ್ಧಾರಕ್ಕೆ ಸೋತು,

"ಅಣ್ಣಾ, ಅದನ್ನು ನಾನು ನೋಡಿಕೊಳ್ಳುವೆ. ನನ್ನಲ್ಲಿ ತುಸು ಹಣ

ವಿದೆ, ಅದರಿಂದ ನಿನ್ನ ಸಾಲ ತೀರಬಹುದು. ಅದನ್ನು ಉಳಿಸಿಟ್ಟ ಉದ್ದೇಶ ಬೇರೆಯಾಗಿತ್ತಾದರೂ ಇನ್ನು ಅದರ ಅವಶ್ಯಕತೆಯಿಲ್ಲ." ಎಂದಳು.

"ಉಪಕಾರವಾದೀತು." ಅವನ ಧ್ವನಿಯಲ್ಲಿ ವ್ಯಂಗ್ಯವಿತ್ತು. ಮನಸ್ಸಿನಲ್ಲಿದ್ದುದನ್ನು ಮುಖ ಹೇಳುವಂತಾಗಿತ್ತು. ಜೈಲಿನ ಕತ್ತಲೆಯ ಕೋಣೆಯಲ್ಲಿ ತಾನು ಕುಳಿತಿರುವ ಚಿತ್ರವನ್ನು ಆತ ಕಾಣುತ್ತಲಿದ್ದ. ಆವನಂಥ ಮನುಷ್ಯ ಜೈಲಿನಲ್ಲಿರುವದೂ ಒಂದೇ, ಈ ಜೇನುಗೂಡಿನ ಬಳಿಯಲ್ಲಿರುವದೂ ಒಂದೇ. ಆವೆರಡರಿಂದಲೂ ಅವನಿಗೆ ಬೇಕಾದುದು ಸಿಗಲಾರದು. ಈ ಮನೆ, ಆದಾದರೇನು? ರಾಜಾಸಾಹೇಬನಂತೂ ಹೋಗಿಬಿಟ್ಟಿದ್ದ. ಅವನಿರುವಾಗ ಕೆಲಸವಾದರೂ ತಪ್ಪಿತ್ತು. ಇನ್ನು ಪ್ರಮೀಲೆ ಆತನನ್ನು ಕೆಲಸಕ್ಕಾಗಿ ಕರೆಯತಕ್ಕ ವಳೇ. ಕೆಲಸದ ನೆನಪು ಬಂದೊಡನೆ ಅವನಿಗೆ ಇನ್ನಿಷ್ಟು ಭಯವೆನ್ನಿಸಿತು. ಆ ಮನೆಯಲ್ಲಿ ಇದ್ದರೆ ತನ್ನ ತಂಗಿಯ ಸಮಾಧಾನಕ್ಕಾಗಿ ಜೇನು ಹುಳುಗಳಿಂದ ಕಚ್ಚಿಸಿಕೊಳ್ಳುವದು, ನೀರು ಹೊತ್ತು ತರುವದು, ಕಟ್ಟಿಗೆಯೊಡೆಯುವದು, ಕೈಯಲ್ಲಿ ಕಾಸೂ ಇಲ್ಲದೆ ಬಿದ್ದಿರುವದು! ಅದೇ ಶ್ರೀಮಂತ ಬೀಗನೊಡನಿದ್ದು ತನಗೆ ಅಡಚಣಿಯೆನ್ನಿಸಿದಾಗ ಹಣವನ್ನು ಬೇಡಿ ಪಡೆದುಕೊಂಡು ಜೀವಿಸುವದರಲ್ಲಿ ಎಷ್ಟೊಂದು ಆನಂದ! ಅದೂ ತಪ್ಪಿತ್ತು. ಈ ತುಲನೆಯಿಂದ ಅವನ ಮನಸ್ಸು ಇನ್ನೂ ವ್ಯಥೆ ಪಟ್ಟಿತು. ಜಗತ್ತಿನ ರೀತಿಯೇ ಹೊಲಸು! ಜಗತ್ತೇ ಹೊಲಸಾದುದು!

ಅತ್ತ ಇತ್ತ ಸುತ್ತಲೆಲ್ಲ ತಿರುಗಿ ಮತ್ತೆ ಅದೇ ವಿಷಯಕ್ಕೆ ಬಂದು ನಿಲ್ಲುವ ಮನಸ್ಸು ಕಮಲಾಕಾಂತನದು. ಜಗತ್ತಿನಲ್ಲಿಯ ಹೊಲಸಿನ ಬಗ್ಗೆ ಕೆಲ ಸಮಯ ಯೋಚಿಸಿ ಮತ್ತೆ ಹೊರಟ ಸ್ಥಳಕ್ಕೇ ಅವನ ಮನಸ್ಸು ಬಂದಿತು.

"ನನಗೆ ಇದೆಲ್ಲದರ ಅರ್ಥವೇ ಆಗುತ್ತಿಲ್ಲ. ಏನೂ ತಿಳಿಯದಂತಾಗಿದೆ" ಎನ್ನುತ್ತ ಎದುರಿಗೆ ಬಿದ್ದಿದ್ದ ಒಂದು ಹರಳನ್ನು ಕಾಲಿನಿಂದ ಒದೆದು, "ನೀನು ಅವನನ್ನೇಕೆ ಕಳಿಸಬೇಕಾಗಿತ್ತು? ನಾನಂದುದನ್ನು ಕೇಳಿ ಅವನೇ ಹೊರಟು ಹೋಗಿದ್ದರೆ ನಾನು ನಂಬುತ್ತಿದ್ದೆ. ಆದರೆ ನೀನೇಕೆ ಅವನನ್ನು........"

ಈ ವಿಷಯದ ಬಗ್ಗೆ ಏನಾದರೊಂದು ವಿವರ ಕೊಡದಿದ್ದರೆ ಕಮಲಾಕಾಂತ ಕಲ್ಲುಗಳನ್ನು ಒದೆಯುತ್ತ ತನ್ನನ್ನು ಪೀಡಿಸುತ್ತ ನಿಲ್ಲುವನೆಂದು ಪ್ರಮೀಲೆಗೆ ತೋರಿತು.

"ಅವನನ್ನು ನಾನು ಪ್ರೀತಿಸುತ್ತಿರುವೆನಾದ್ದರಿಂದ ಕಳಿಸಿದೆ. ಈಗಾದು ದನ್ನು ನೋಡಿದ ಮತ್ತು ಕೇಳಿದ ಆತ ನಾನು ಅವನನ್ನು ಪ್ರೀತಿಸುವದನ್ನು ನಂಬುವಂತಿರಲಿಲ್ಲ. ಈಗಾದರೂ ತಿಳಿಯಿತೇ ?"

"ಇಲ್ಲ." ಕಮಲಾಕಾಂತ ಸ್ಪಷ್ಟವಾಗಿ ಹೇಳಿದ. "ನನಗೆ ಅದರ ಅರ್ಥ ವಾಗಿದ್ದರೆ ನಾನು ಇಲ್ಲಿ ನಿಲ್ಲುತ್ತಿದ್ದಿಲ್ಲ."

"ನಾನು ಅವನನ್ನು ಲಗ್ನವಾಗಿ ದ್ರೋಹ ಬಗೆದಂತಾಗುತ್ತಿರಲಿಲ್ಲವೆ ?"

"ಇಲ್ಲ...."

ಕಮಲಾಕಾಂತ ಹೇಳಿದಂತೆಯೇ ಅವಳ ಮನಸ್ಸಿನಲ್ಲೂ ಸಂಶಯ ಏಳು ತ್ತಿರಲಿಲ್ಲವೆ ? ಈಗಂತೂ ಆ ಸಂಶಯಗಳು ಬೃಹದಾಕಾರ ತಾಳಿ ನಿಂತವು ಕಮಲಾಕಾಂತನ ಅಭಿಪ್ರಾಯಗಳನ್ನು ಅವಳು ಗೌರವಿಸುತ್ತಿದ್ದಳೆಂದೇನೂ ಅಲ್ಲ. ಆದರೆ ಅವನ ಅಭಿಪ್ರಾಯ ಅವಳ ಮನಸ್ಸಿನ ಈಗಿನ ಅಭಿಪ್ರಾಯಕ್ಕೆ ಸರಿ ಹೋಗುತ್ತಿತ್ತು ಅವಳು ಮಾಡಿದ್ದೇ ಯೋಗ್ಯವೆಂದು ಹೇಳುವ ಯಾರಾ ದರೂ ಸಿಕ್ಕಬೇಕೆಂದು ಅವಳು ಬಯಸಿದಳು. ಇದಕ್ಕೆ ತೀರ ವಿರುದ್ಧವಾದ ಮಾತು ಕಮಲಾಕಾಂತನವು. ಅವನ ಮಾತುಗಳು ಅವಳ ನಂಬುಗೆಯನ್ನು ಸಿಥಿಲಗೊಳಿಸಿ, ಸಂಶಯಗಳನ್ನು ಬಲಪಡಿಸಿ, ಅಸಮಾಧಾನವನ್ನು ಹೆಚ್ಚಿಸುತ್ತಿ ದ್ದವು. ತಾನೀಗ ಅಳುವ ಸ್ಥಿತಿಗೆ ಬಂದಿರುವ ಅರಿವಾಯಿತು, ಅವಳಿಗೆ. ತುಸು ಅತ್ತುಬಿಟ್ಟರೆ ಮನಸ್ಸು ಹಗುರವಾಗಬೇಕೆಂದೂ ತೋರಿತು.

ಅತ್ತ ಕಮಲಾಕಾಂತನ ದೃಷ್ಟಿಗೆ ಇನ್ನೊಂದು ಕಲ್ಲು ಬಿದ್ದಿತ್ತು. ಆದ ನ್ನಾತ ಒದೆಯುವದರಲ್ಲಿ ಮಗ್ನನಾಗಿದ್ದ. ಹೆಣ್ಣಿನ ವಿಚಿತ್ರ ಸ್ವಭಾವವನ್ನು ಅಳೆದು ನೋಡಲು ಅವನ ಮನಸ್ಸು ಶ್ರಮಿಸುತ್ತಿತ್ತು. ಪ್ರಮಿಳೆಯೆಂದರೆ ಸಾದಾ ಮತ್ತು ಸರಳ ಸ್ವಭಾವದ ಹೆಂಗುಸೆಂದು ಅವನು ತಿಳಿದುಕೊಂಡಿದ್ದ. ಕಥೆ ಕಾದಂಬರಿಗಳಲ್ಲಿ ಬರುವ ಧೂರ್ತ ಹೆಣ್ಣಿನ ಜಾತಿಗೆ ಅವಳು ಸೇರಿದವಳಲ್ಲ ವೆಂದೇ ನಂಬಿಕೊಂಡಿದ್ದ. ಆದರೆ ಅವಳ ಬಾಳು ಸುಖದ ದಾರಿಗೆ ಹೊರಳು ತ್ತಿದ್ದ ಸಮಯದಲ್ಲಿ ಅವಳು ಹೀಗೆ ಅವಿವೇಕಿಯಂತೆ ವರ್ತಿಸಿದ್ದುದು ಅವನಿಗೆ ಆಶ್ಚರ್ಯರಿಯಾಗಿ ಕಂಡಿತು. ಅವಳ ವರ್ತನೆಯಿಂದ ಯಾವನ ತಲೆ ಕೆಡಲಾ ರದು ? "ಹೆಂಗಸರನ್ನು ಯಾವ ಕಾಲಕ್ಕೂ ನಂಬಬಾರದು " ಎಂಬ ಸಿದ್ಧಾಂತಕ್ಕೆ

ಬಂದು ತಲುಪಿದ್ದನಾತ. ಇಂಥ ವಿಚಾರಗಳಲ್ಲಿ ತೊಡಗಿರುವಾಗಲೇ ಟ್ಯಾಕ್ಸಿಯೊಂದು ವೇಗವಾಗಿ ತೂರಿಕೊಂಡು ಬಂದು ಅವರ ಮನೆಯ ಗೇಟಿನ ಮುಂದೆ ನಿಂತಿತು. ಅದರೊಳಗಿಂದ ಓರ್ವ ತರುಣ ಕೆಳಕ್ಕೆ ಹಾರಿದ.

## ೨೩

ಟ್ಯಾಕ್ಸಿಯಿಂದ ಕೆಳಗಿಳಿದ ತರುಣ ಉತ್ಸಾಹಿಯೂ ಆಗಿದ್ದ. ಫ್ಲಾನಲ್ ಸೂಟು, ಬೂದಿ ಬಣ್ಣದ ಹ್ಯಾಟ್ ಧರಿಸಿದ್ದ. ಒಂದೇ ಕಣ್ಣಿಗೆ ಕನ್ನಡಕ ಧರಿಸಿ ಆತ ಸುತ್ತಲೆಲ್ಲ ನೋಡುತ್ತಿದ್ದ ರೀತಿಯನ್ನು ನೋಡಿದರೆ, ಜಗತ್ತೆಲ್ಲವೂ ತನ್ನ ಇಚ್ಛೆಯಂತೆಯೇ ನಿರ್ಮಾಣವಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸುತ್ತಿರುವವನಂತೆ ತೋರುತ್ತಿತ್ತು. ಅವನ ಮಾತಿನ ರೀತಿಯೂ ತುಸು ವಿಚಿತ್ರವೇ. ಎಲ್ಲ ಭಾಷೆಗಳ ಒಂದೊಂದು ಶಬ್ದವನ್ನು ಜೋಡಿಸಿಕೊಂಡು ಮಾತಾಡುತ್ತಿದ್ದ.

ಅವನ ಉತ್ಸಾಹ ಕಂಡ ಕಮಲಾಕಾಂತನಿಗೆ ಅವನ ಬಗೆಗೆ ಒಳ್ಳೆಯ ಭಾವನೆ ಮೂಡಿ ಬರಲಿಲ್ಲ. ತನ್ನ ಈಗಿನ ಸ್ಥಿತಿಗೆ ವಿರುದ್ಧವಾಗಿ ಬೇರೆಯವರು ಉತ್ಸಾಹಿಗಳಾಗಿಯೂ ಉಲ್ಲಸಿತರಾಗಿಯೂ ಇರುವದು ಅವನಿಗೆ ಅಸಹ್ಯವಾಗಿ ಕಂಡಿತು. ತುಸು ನೊಂದ ಮುಖದವರನ್ನು ಆಗ ಅವನು ಆನಂದದಿಂದ ಸ್ವಾಗತಿಸಬಹುದಿತ್ತು. ಆತ ಆ ತರುಣನನ್ನು ಎವೆಯಿಕ್ಕದೆ ನೋಡುತ್ತಿದ್ದ.

ಪ್ರಮೀಲೆಗಂತೂ ಆ ತರುಣ ಬಂದಿದ್ದುದರ ಪರಿವೆಯೇ ಇರಲಿಲ್ಲ. ಆಗಂತುಕ ಅವಳನ್ನು ಮಾತಾಡಿಸಿದಾಗಲೇ ಅವಳಿಗೆ ಎಚ್ಚರವಾದುದು.

"ದೇಶಪಾಂಡೆ ಮಹಲ್ ಇದೇ ಏನ್ರೀ ?"

ಅವಳು ಅವನತ್ತ ದೃಷ್ಟಿ ತೂರಿ ಅವನ ಕನ್ನಡಕ ನೋಡಿದಳು.

"ಹೌದು...."

ಮೋಟರಿನ ಎಂಜಿನು ನಿಂತಿರಲಿಲ್ಲ, ಆಗ ಮೋಟಾರು ನಡುಗುವದನ್ನು ಕಂಡಿರುವಿರಲ್ಲವೇ ? ಅದರಲ್ಲಿ ಕುಳಿತಿದ್ದ ಆ ಡ್ರಾಯವ್ಹರ್ ಕೂಡ ಭಯದಿಂದ ನಡುಗುತ್ತಿದ್ದಂತೆ ಕಂಡುಬರುತ್ತಿತ್ತು ಎಂಜಿನು ಸಪ್ಪಳ ಮಾಡುತ್ತಲೇ ನಿಂತಿ

ದ್ದರೆ ಅದು ಮುಂದೆ ಚಲಿಸುವ ಅವಸರದಲ್ಲಿದೆ ಎಂದೇ ಅರ್ಥವಲ್ಲವೆ? ಮಾತಾಡುವದನ್ನೂ ತೀವ್ರ ಮುಗಿಸಬೇಕು ಎಂಬ ಸೂಚನೆ ಇದ್ದಂತಲ್ಲವೆ? ಎಂಜಿನಿನ ಸ್ಥಿತಿಗೆ ಸಂಬಂಧವಿರದೆ ಅವನ ಸ್ವಭಾವವೇ ಹಾಗಿದ್ದಿತೋ ಏನೋ. ಆ ತರುಣ ಕೆಳಕ್ಕಿಳಿದವನೇ ಒಂದು ನಿಮಿಷವೂ ತಡೆಯದೆ ಮಾತಿಗೆ ಪ್ರಾರಂಭಿಸಿದ್ದ. ಆವನು ಗೇಟಿನಾಚೆಗೆ ನಿಂತು ಮಾತಾಡುತ್ತಿದ್ದುದನ್ನು ಕಂಡೂ ಮುಚ್ಚಿದ್ದ ಗೇಟ್ ತೆಗೆಯಬೇಕೆಂಬ ವಿಚಾರ ಪ್ರಮೀಲೆಗೆ ಹೊಳೆದಿರಲಿಲ್ಲ. ಅವನ ದೃಷ್ಟಿಯೂ ಆ ಗೇಟಿನತ್ತ ಹೋಗಿರಲಿಲ್ಲವೇನೋ. ಗೇಟಿನ ಆಚೆಯಿಂದಲೇ ಆಕೆಯನ್ನು ಕಂಡು 'ನಾನು ಭಾವಿಸಿಕೊಂಡಂತೆಯೇ ಸುಂದರಿಯಾಗಿದ್ದಾಳೆ' ಎಂದುಕೊಂಡು ಹರ್ಷಭರಿತನಾಗಿ,

"ನನ್ನ ಹೆಸರು ದಲಾಲ; ಮಾಣಿಕಲಾಲ ದಲಾಲ. ಈಗ ಕೆಲದಿನಗಳ ಹಿಂದೆ ನಾನು ನಿಮಗೊಂದು ಪತ್ರ ಬರೆದಿದ್ದೆನಷ್ಟೆ?" ಎಂದ.

ಆ ಹೆಸರನ್ನು ಕೇಳಿದುದೆಲ್ಲಿ, ಎಂದು ನೆನಪು ಮಾಡಿಕೊಳ್ಳುವ ಮೊದಲೆ ಆತ ಅದರ ವಿವರಗಳನ್ನು ಹೇಳಿದ್ದನಾದ್ದರಿಂದ ಪ್ರಮೀಲೆಗೆ ಹೆಚ್ಚಿನ ತೊಂದರೆ ತಪ್ಪಿತು.

"ನಾನು ವಕೀಲ, ನಿಮಗೆ ನೆನಪಿಲ್ಲವೇ? ನಿಮ್ಮ ಸೋದರಮಾವ ಎಲ್ಲ ಹಣವನ್ನು ಅತ್ತೀಗೇರಿ ರಾಜಾಸಾಹೇಬನಿಗೆ ಕೊಡಮಾಡಿದುದನ್ನು ಬರೆದಿದ್ದವನೇ ನಾನು."

"ನೆನಪಿದೆ," ಎನ್ನುತ್ತ ಗೇಟ್ ತೆರೆದು ಆವನನ್ನು ಒಳಗೆ ಬರಮಾಡಿಕೊಳ್ಳಬೇಕೆಂದು ಯೋಚಿಸುತ್ತಿರುವಾಗಲೇ ಅವನು ಹೇಳಹತ್ತಿದ:

"ಆ ಪತ್ರದ ವಿವರಗಳನ್ನು ತಿಳುಹಿಸಲೆಂದೇ ನಾನೀಗ ಬಂದಿರುವದು. ಆಕಸ್ಮಿಕ ಸ್ಫೂರ್ತಿಯಲ್ಲಿದ್ದಾಗ ಬರೆದುದು ಆ ಪತ್ರ. ಹೀಗೆ ಆಕಸ್ಮಿಕವಾಗಿ ಬರುವ ಸ್ಫೂರ್ತಿಗೆ ಹೊಂದಿಕೊಂಡು ವರ್ತಿಸಬಾರದೆಂಬುದು, ವಕೀಲನಾದವನು ಕಾನೂನಿನ ಅಭ್ಯಾಸ ಹೆಚ್ಚೆಚ್ಚು ಮಾಡುತ್ತ ಅನುಭವ ಗಳಿಸುತ್ತ ಹೋದಂತೆ ತಿಳಿಯುವದು. ನಿಮ್ಮ ಮನಸ್ಸಿನ ವ್ಯಸನ ತುಸು ಕಡಿಮೆ ಮಾಡುವ ಮನಸ್ಸಾಯಿತು; ನಿಮಗೆ ಅತ್ತೀಗೇರಿಯ ರಾಜಾಸಾಹೇಬನ ಬಗೆಗೆ ಗೊತ್ತಿರಬಹುದು; ಅವನು ನನ್ನ ಜೀವದ ಗೆಳೆಯನಾಗಿದ್ದಾನೆ. ನಿಮ್ಮ ಮಾವ ಸುಂದರರಾಯರು ಸತ್ತು ಹೋದ ಸುದ್ದಿ ನನಗೆ ತಿಳಿದೊಡನೆಯೇ ಅವರು ನಮ್ಮಲ್ಲಿ ವಿಲ್

ಬರೆದಿಟ್ಟದ್ದು ನೆನಪಾಗಿ ರಾಜಾಸಾಹೇಬನನ್ನು ಕರೆಯಿಸಿಕೊಂಡೆ. ಅವನು ಬಂದೊಡನೆ ಹೇಳಿದೆ: 'ರಾಜಾಸಾಹೇಬ, ಆ ಮೂರ್ಖ ಸುಂದರರಾಯ....' ಕ್ಷಮಿಸಿರಿ, ನಿಮ್ಮ ಮಾವನಿಗೆ ಮೂರ್ಖ ಎಂದುದಕ್ಕೆ—ಗೆಳೆಯರು ತಮ್ಮ ತಮ್ಮೊಳಗೆ ಮಾತಾಡುವ ರೀತಿಯದು. 'ಸತ್ತು ಹೋದ, ಅದರೊಡನೆ ಅವನ ಹಣವೆಲ್ಲ ನಿನಗೆ ಸೇರಿದಂತಾಯಿತು.' ಎಂದು ತಿಳಿಸಿದೆ. ಅದರಂತೆ ನಿಮಗೂ ಒಂದು ಪತ್ರ ಬರೆದೆ. ಅವನಂತೂ ನನ್ನ ಮಾತುಗಳನ್ನು ನಂಬಲಿಕ್ಕೇ ಸಿದ್ಧನಿರಲಿಲ್ಲ. ಅದಿರಲಿ, ನೀವೇ ಪ್ರಮೀಲಾ ಸರಕಾರರೇ....?"

"ಹೌದು...."

ಅವನಿಗೆ ಸಮಾಧಾನವೆನ್ನಿಸಿತು.

"ಹಾಗಿದ್ದರೆ ಸರಿಯಾಯಿತು. ನೀವು ಪ್ರಮೀಲಾದೇವಿಯರಾಗಿರದಿದ್ದರೆ ನನ್ನ ಮಾತು ಕೇಳಿ ನಗಬಹುದಾಗಿತ್ತು."

ಪ್ರಮೀಲಾದೇವಿ ಅವಳೇ ಆಗಿದ್ದರೂ ಆಕೆ ಮನದಲ್ಲಿಯೇ ನಗಹತ್ತಿದಳು. ಅವಳ ಮನಸ್ಸು ಇನ್ನೂ ತಿಳಿಯಾಗಿರಲಿಲ್ಲ. ದಲಾಲ ಹೇಳಿದ ಒಂದು ಮಾತೂ ಅವಳಿಗೆ ಅರ್ಥವಾಗಿರಲಿಲ್ಲ. ಕಮಲಾಕಾಂತನ ಮುಖ ನೋಡಿದರೆ ಏತಕ್ಕಾಗಿಯೋ ಹೆದರಿ ನಿಂತಿರುವ ಜಿಂಕೆಯ ಮುಖಕ್ಕೆ ಅದು ಹೋಲುತ್ತಿತ್ತು. ಅವರಿಬ್ಬರ ಮಾತಿನಲ್ಲಿ ತನಗೂ ಸಂಬಂಧವಿದೆಯೆನ್ನುವವರಂತೆ ತೀರ ಸನಿಯದಲ್ಲಿ ನಿಂತಿದ್ದನಾತ.

ಆ ತರುಣ ಹೇಳುತ್ತಿದ್ದ,

"ನಮ್ಮ ಕಂಪನಿಯ ಮುಖ್ಯಸ್ಥರಾದ ನಮ್ಮ ತಂದೆಯವರು ಎಲ್ಲ ನಿಯಮಗಳನ್ನೂ ಸರಿಯಾಗಿ ಪಾಲಿಸತಕ್ಕವರು. ಹಾಗೆ ಕಾನೂನಿನ ಎಲ್ಲ ನಿಯಮಗಳನ್ನು ಪಾಲಿಸುತ್ತ ನಡೆದರೆ ಒಂದು ಕಾರ್ಯ ಸಾಧಿಸಲು ತಿಂಗಳುಗಳೇ ಬೇಕಾಗುವವು. ಅಷ್ಟರಲ್ಲಿ ಸಂಬಂಧಪಟ್ಟವರು ದುಃಖದಲ್ಲಿ ತೊಳಲಾಡಬೇಕು, ಆ ಹಣವೆಲ್ಲ ಯಾರಿಗೆ ಹೋಯಿತು, ಅದರ ನಿಷ್ಕರ್ಷೆ ಹೇಗಾಯಿತು. ಹಾಗೆ ಹೀಗೆ ಎಂದು. ಅದಕ್ಕಾಗಿ ನಿಮಗೂ ಅದರ ಬಗ್ಗೆ ತಿಳಿದಿರಲಿ ಎಂದು ನಾನು ತಕ್ಷಣ ಪತ್ರ ಬರೆದು ಹಾಕಿದ್ದೆ. ನನ್ನ ಸ್ವಭಾವಕ್ಕೆ ವಕೀಲಿ ವ್ಯವಸಾಯ ಒಗ್ಗಲಾರದೆಂದೇ ನನ್ನ ಮತ. ನಾನು ನಿಮಗೆ ಪತ್ರ ಬರೆದುದು ನಮ್ಮ ತಂದೆಯವರಿಗೆ ಗೊತ್ತಾದರೆ—ಅದು ಗೊತ್ತಾಗುವದೂ ಖಂಡಿತವೆನ್ನಿ,

ಛೀ ಹಾಕುವರು. ಅಂತೆಯೇ ನಾನಿಲ್ಲಿಗೆ ಬಂದುದು. ನೀವು ಅವರೊಡನೆ ಮಾತಾಡುವ ಪ್ರಸಂಗ ಬಂದರೆ—ಬಂದೇ ಬರುವದೆನ್ನಿ, ನಾನು ಪತ್ರ ಬರೆದು ದನ್ನು ಹೇಳಬಾರದೆಂದು ವಿನಂತಿಸಿಕೊಳ್ಳಲು ಇಲ್ಲಿಯತನಕ ಧಾವಿಸಿ ಬಂದುದು. ಸದುದ್ದೇಶದಿಂದ ಬರೆದ ಪತ್ರವಾದರೂ ಹಾಗೆ ಬರೆದುದು ಮಾತ್ರ ತಪ್ಪು."

ತನ್ನ ತಪ್ಪು ಒಪ್ಪಿಕೊಂಡದ್ದಕ್ಕಾಗಿ ಅಭಿಮಾನಪಡುತ್ತ ಆತ ಅವಳನ್ನೇ ಆ ಕನ್ನಡಕದೊಳಗಿಂದ ನೋಡುತ್ತ ನಿಂತ. ಅವನ ಆ ಹರಕು ಮುರುಕು ಭಾಷಣದಿಂದ ಪ್ರಮೀಲೆಗೆ ಏನೇನು ಅರ್ಥವಾಗಿತ್ತೋ ದೇವರೇ ಬಲ್ಲ.

"ನಿಮ್ಮ ಪತ್ರ ಬಂದುದನ್ನು ನಿಮ್ಮ ತಂದೆಯವರಿಗೆ ತಿಳಿಸದಿದ್ದರೆ ಆಯಿತಲ್ಲವೇ ?"

"ನಿಜಕ್ಕೂ ಅಷ್ಟೆ, ಪ್ರಮೀಲಾದೇವಿ."

"ಅದೆಲ್ಲ ಸರಿ, ಆದರೆ ನಿಮ್ಮ ತಂದೆಯವರ ಮುಂದೆ ನಾನು ಅದನ್ನು ಹೇಳಬಹುದೆಂದು ನೀವೇಕೆ ಭಾವಿಸುತ್ತಿರುವಿರಿ ?"

"ಸ್ತ್ರೈಮರೆತು ಹೇಳಿಬಿಡಬಹುದು."

"ಆದರೆ ನಿಮ್ಮ ತಂದೆಯವರನ್ನು ನಾನು ಕಾಣುವ ಪ್ರಸಂಗವೇ ಇಲ್ಲವಲ್ಲ ?"

"ಭೇಟಿಯಾಗುವ ಸಂಭವವಿದೆ. ಆ ಹಣದ ವಿಚಾರವಾಗಿ ಅವರು ನಿಮ್ಮನ್ನು ಕರೆಕಳಿಸಬಹುದು."

"ಹಣದ ವಿಚಾರದಲ್ಲಿ ? ನನ್ನನ್ನೇ ?"

ಕನ್ನಡಕದ ಮೇಲಿನ ಹುಬ್ಬು ಮೇಲಕ್ಕೇರಿದವು.

"ಅಂದರೆ ? ನಮ್ಮ ತಂದೆಯವರು ನಿಮಗೊಂದು ಪತ್ರ ಬರೆದಿಲ್ಲವೇ ?"

"ಇಲ್ಲ."

ಪ್ರಮೀಲೆಯ ಈ ಉತ್ತರದಿಂದ ಅವನು ಅಚ್ಚರಿಪಡುತ್ತ ಎರಡೂ ಭುಜ ಮೇಲಕ್ಕೆ ಹಾರಿಸಿ ಕೈ ಅಲುಗಾಡಿಸಿದ.

"ನಾನು ಬಂದ ಮೇಲ್ ಟ್ರೇನಿನಿಂದ ಅದೂ ಬರಬಹುದೆಂದು ಭಾವಿಸಿದ್ದೆ. ನೋಡಿದಿರಾ, ನಮ್ಮ ತಂದೆಯ ವಕೀಲಿ ಕೌಶಲ್ಯ ! ಕಾನೂನಿನ ಯಾವುದೋ ಭಾಗ ಅಡ್ಡ ಬಂದಿರಬೇಕು. ಆ ಪತ್ರವನ್ನೂ ತಡೆ ಹಿಡಿದಿರಬೇಕು. ನಿಜವಾಗಿಯೂ ನಿಮಗೆ ಅವರಿಂದ ಪತ್ರ ಬಂದಿಲ್ಲವೆ ?" ಎಂದು ಕೇಳಿ

ತುಸು ಯೋಚಿಸಿದ. ಎಲ್ಲವನ್ನೂ ವಿವರವಾಗಿ ಹೇಳಿದೆನೆಂದು ಭಾವಿಸಿದ್ದ ಆತ ನಿಗೆ ತುಸು ನಿರಾಸೆಯಾಯಿತು.

"ಹಾಗಿದ್ದರೆ ನಾನು ಈವರೆಗೆ ಹೇಳಿದ್ದರ ಅರ್ಥವೇ ನಿಮಗಾಗಿರಲಿಕ್ಕಿಲ್ಲ."

ಈಗಂತೂ ಪ್ರಮೀಲೆಗೆ ನಗು ತಡೆಯದಾಗಲಿಲ್ಲ. ತಾಳ ತಂತ್ರಗಳಿಲ್ಲದೆ ಮಾತಾಡುತ್ತಿದ್ದ ಆ ಯುವಕನ ಬಗೆಗೆ ಮರುಕ ಬಂದಿತು.

"ಇಲ್ಲ." ಅವಳೆಂದಳು.

"ಆ ವಿಲ್‌ನ ವಿವರ ನಿಮಗೆ ಗೊತ್ತಿಲ್ಲವೆ?"

"ನಿಮ್ಮ ಪತ್ರದಲ್ಲಿದ್ದುದನ್ನು ನಾವು ಬಲ್ಲೆವು."

"ಹಾಗಿದ್ದರೆ ಮುಗಿದಂತೇ ಆಯಿತು ಅಲ್ಲ, ನಿಮ್ಮ ಮಾವ ಸುಂದರ ರಾಯರು ಯಾವಾಗಲೂ ಇದೇ ಸ್ವಭಾವದವರೇನು? ವಿಲ್ಲಿನ ವಿಚಾರದಲ್ಲಿದ್ದ ಚಂಚಲತೆ ಅವರ ಜೀವನದಲ್ಲಿಯೂ ನಡೆದು ಬಂದಿದ್ದಿರಬಹುದೆಂದು ನನಗೆ ತೋರುತ್ತದೆ."

ಕಮಲಾಕಾಂತ ನಡುವೆ ಬಂದು,

"ಹೌದು, ಬಹಳ ಚಂಚಲ ಸ್ವಭಾವದವನು. ನಮ್ಮಲ್ಲಿ ಅಕ್ಕನ ಮಗ ಳನ್ನು ತಮ್ಮನೂ ಲಗ್ನವಾಗಬಹುದು, ಅಣ್ಣ ಅಥವಾ ತಮ್ಮನ ಮಗನೂ ಲಗ್ನವಾಗಬಹುದು. ಇದೇ ತರದ ಯಾವುದೋ ಸಂಬಂಧದಿಂದ ನಮ್ಮ ಮಾವನ ಮತ್ತು ನಮ್ಮ ಅಡ್ಡ ಹೆಸರುಗಳು ಒಂದೇ ಆಗಿವೆ. ನಮ್ಮ ಮಾವನ ತಂದೆಯ ಹೆಸರೂ ಕಮಲಾಕಾಂತನೆಂದೇ ಇತ್ತು. ಅವನ ಒತ್ತಾಯಕ್ಕಾ ಗಿಯೇ ನನಗೂ ಅದೇ ಹೆಸರನ್ನಿಟ್ಟರು. ಹೀಗೆ ನಾನು ಅವನ ತಂದೆಯ ಹೆಸ ರನ್ನು ಜೀವಂತವಿಟ್ಟಿರುವದಕ್ಕೆ ಅವನಿಂದ ನನಗಾದ ಅನ್ಯಾಯವಂತೂ ನಿಮಗೆ ಗೊತ್ತೇ ಇದೆ. ಅಲ್ಲ—ಅಲ್ಲ—ಉಪಕಾರ, ಇನ್ನೂರು ರೂಪಾಯಿ ಬಹು ಮಾನ! ಅವನ ಸ್ವಭಾವ ವೈಚಿತ್ರ್ಯದ ಕಲ್ಪನೆ ಬರಬೇಕಾದರೆ ಇನ್ನೊಂದು ಸಂಗತಿ ನೆನಪಾಗುತ್ತದೆ. ಅವನೊಮ್ಮೆ ಮಾಂಸ ತಿನ್ನುವದಿಲ್ಲವೆಂದು ಪ್ರತಿಜ್ಞೆ ಮಾಡಿದ್ದ. ಎರಡು ಮೂರು ದಿನ ಅವನಿಗೆ ಊಟವೇ ರುಚಿಸಲಿಲ್ಲ. ಅವನ ಜಾಣ ಮೆದುಳು ಕಾರ್ಯಕ್ಕೆ ಆರಂಭಿಸಿರಬೇಕು. ಅದೇ ದಿನ ರಾತ್ರಿ ಪೃಥ್ವಿಗೆ ಪ್ರಳಯ ಕಾಲ ಬರುವದೆಂದೂ ಎಲ್ಲರೂ ಪ್ರಾರ್ಥನೆ ಗೈದು ತಾವು ಮಾಡಿರುವ

ತಪ್ಪುಗಳನ್ನು ಒಪ್ಪಿಕೊಂಡು ಮುಂದೆ ಅಂಥ ತಪ್ಪುಗಳಾಗದಂತೆ ವರ್ತಿಸುವ ವಾಗಿ ಪರಮಾತ್ಮನಲ್ಲಿ ಬೇಡಿಕೊಳ್ಳಬೇಕೆಂದೂ ನಿರ್ಧರಿಸಿದ. ಅಂದಿನ ರಾತ್ರಿಯ ನನ್ನ ನಿದ್ರೆಯನ್ನು ಹಾಳು ಮಾಡಿದ, ಏನೇನೋ ಬಡಬಡಿಸಿದ. ಬೆಳಗಾಗು ತ್ತಲೇ ಮಾಂಸ ತಿಂದು ಶಾಂತನಾದ. ಏನು ಮಾಡಬೇಕಿದ್ದರೂ ನನ್ನನ್ನೇ ಕರೆಯುತ್ತಿದ್ದ. ಹಣದ ವಿಚಾರದಲ್ಲಿ ಮಾತ್ರ ನನ್ನನ್ನು ದೂರ ಬಿಸಾಡಿದ.'' ಎಂದು ದೀರ್ಘ ಉಸಿರು ಎಳೆದುಕೊಂಡು ಮೌನ ತಾಳಿದ.

"ಅವನು ಹಾಗೆ ಇರಬಹುದೆಂದು ನಾನೂ ತರ್ಕಿಸಿಕೊಂಡಿದ್ದೆ. ನಾನು ಆ ಪತ್ರದಲ್ಲಿ ಬರೆದಂತೆ ಆ ವಿಲ್ ಬರೆಯಿಸಿ ಎಲ್ಲ ಹಣವನ್ನೂ ರಾಜಾಸಾಹೇಬ ನಿಗೆ ಬಿಟ್ಟುಹೋದುದರ ಕಾರಣ ಗೊತ್ತೇ ? ಸಿಕ್ಸರ್ ಹೊಡೆಯುವ ರೀತಿ ಯನ್ನು ರಾಜಾಸಾಹೇಬ ತಿಳಿಸಿಕೊಟ್ಟದ್ದಕ್ಕಾಗಿ ! ಬೇರೇನೂ ಕಾರಣವಿಲ್ಲ. ನಿಜವಾಗಿಯೂ ರಾಜಾಸಾಹೇಬನ ಬಗ್ಗೆ ನನಗೆ ವಿಷಾದವೆನಿಸುತ್ತದೆ, ಒಳ್ಳೆಯ ಮನುಷ್ಯ."

ವಕೀಲನ ಮಾತುಗಳನ್ನು ತಡೆಯುತ್ತ ಕಮಲಾಕಾಂತ ಹೇಳಹತ್ತಿದ:

"ಅವನು ಸುಖಿಯಾಗಿದ್ದಾನೆ. ನೀವು ವಿಷಾದ ಪಡಬೇಕಾಗಿಲ್ಲ, ಅವ ನಲ್ಲಿ ಹತ್ತು ಲಕ್ಷ ರೂಪಾಯಿಗಳಿರುವಾಗ........"

"ಅವನಲ್ಲಿಲ್ಲ........ತಿಳಿಯಿತೇ ?"

"ಅಂದರೆ ?"

"ಅದನ್ನೇ ನಾನೀಗ ಹೇಳುತ್ತಿದ್ದುದು. ಸುಂದರರಾಯರ ಮತ್ತೊಂದು ವಿಲ್ ಅದನ್ನು ಕಸಿದುಕೊಂಡಿತು."

"ಮತ್ತಾವ ವಿಲ್ ?"

"ಈಗ ನಾನು ಹೇಳುತ್ತಿರುವದು."

ಅವರಿಬ್ಬರನ್ನೂ ಆತ ಕ್ರಮವಾಗಿ ನೋಡಿದ. ತಾನು ಹೇಳಿದ್ದನ್ನು ತಿಳಿದುಕೊಳ್ಳುವಷ್ಟು ಕೂಡ ಅವರಿಗೆ ಬುದ್ಧಿಯಿಲ್ಲದ್ದನ್ನು ಕಂಡು ಅಚ್ಚರಿ ಪಡ ಹತ್ತಿದ. ಅವನಿಗೊಂದು ವಿಚಾರ ಹೊಳೆಯಿತು:

"ಹೌದು, ಈಗ ನನಗೆ ಹೊಳೆಯಿತು. ನಿಮಗೆ ಅದರ ವಿಚಾರವಾಗಿ ಈವರೆಗೆ ಹೇಳಲಿಲ್ಲ. ಸುಂದರರಾಯರು ಸಾಯುವ ಮೊದಲು ತುಸು ದಿನಗಳ ಹಿಂದೆ ಇನ್ನೊಂದು ವಿಲ್ ತಯಾರಿಸಿ ಎಲ್ಲ ಹಣವನ್ನೂ ಪ್ರಮಿಲಾದೇವಿ

ಸರಕಾರರಿಗೆ ಕೊಟ್ಟರು."

ತನ್ನ ಮಾತುಗಳನ್ನು ಆ ಅಣ್ಣತಂಗಿಯರು ಏಕಾಗ್ರಚಿತ್ತದಿಂದ ಕೇಳು ತ್ತಿದ್ದುದನ್ನು ನೋಡಿ ಆ ವಕೀಲನಿಗೆ ಸ್ಫೂರ್ತಿ ಬಂತು. ತನ್ನ ಮೊದಲಿನ ಪತ್ರದಿಂದಾದ ಆಘಾತದಿಂದ ಈ ಜನರು ಏನನ್ನು ಹೇಳಿದರೂ ನಂಬಲಾರದ ಸ್ಥಿತಿಗೆ ಬಂದಿರಬೇಕೆಂದು ಭಾವಿಸಿ ಆತನೆಂದ:

"ನಾನು ಹೇಳುತ್ತಿರುವದು ಹದಿನಾರಾಣೆ ಸತ್ಯ. ನಮ್ಮ ಕಂಪನಿಯ ಸಂಚಾಲಕರಿಂದಲೇ ನನಗೆ ಗೊತ್ತಾಗಿದೆ. ಅಂತೆಯೇ ನಂಬಲರ್ಹವಾಗಿದೆ. ಸರಕಾರರ ಅವಸಾನದ ಕೆಲದಿನಗಳ ಹಿಂದೆ ನಮ್ಮ ಸಂಚಾಲಕರಿಗೂ ಅವರಿಗೂ ಒಂದು ದಿನ ಜಗಳವೇ ಆಗಿತ್ತು. ಅಂದೇ ಬೇರೆ ವಿಲ್ ಬರೆದಿಟ್ಟಿರಬೇಕು. ನನಗೆ ಗೊತ್ತಿದ್ದ ಮಟ್ಟಿಗೆ ಸರಕಾರರ ಸ್ವಭಾವವೇ ಅಂಥದು! ನಮ್ಮ ತಂದೆ ಯವರು ಈಗಾಗಲೇ ಅದನ್ನು ತಿಳಿಸಿರಬೇಕೆಂದು ನಂಬಿದ್ದೆ. ನಾಳೆ ಅವರ ಪತ್ರ ಬರಬಹುದು. ಈ ಪತ್ರ ಅವರು ಬರೆದು ಮುಗಿಸಿದ ಮೇಲೆ ನನಗೆ ಭಯವಾಯಿತು. ನೀವೆಲ್ಲಿಯಾದರೂ ಅವರ ಮುಂದೆ ನನ್ನ ಮೊದಲಿನ ಪತ್ರದ ಪ್ರಸ್ತಾಪವೆತ್ತುವಿರೋ ಎಂದು ಅವರ ಸ್ವಭಾವ ನಿಮಗೆ ಗೊತ್ತಿಲ್ಲ. ಶಿಸ್ತಿನ ಸ್ವಭಾವ! ಅಂತೆಯೇ ಅವರಿಗೆ ನಾನು ಹೇಳಿದೆ: "ತಂದೆಯವರೇ, ನನಗೆ ಬಹಳ ಬೇಜಾರು ಬಂದಿದೆ. ನಾಲ್ಕು ದಿವಸಗಳ ವಿಶ್ರಾಂತಿ ಸಿಗದಿದ್ದರೆ ವಕೀಲಿಯ ಆ ದೊಡ್ಡ ಪುಸ್ತಕಗಳು ನನಗೆ ಹಿಡಿಸಲಾರವು. ಮುಂಬಯಿಗೆ ಹೋಗಿ ಬರುವೆ." ಎಂದು. ಪುಣ್ಯಕ್ಕೆ ಅವರು ಒಪ್ಪಿದರು. ರಾಜಾ ಸಾಹೇಬನ ದುರ್ದೈವಕ್ಕಾಗಿ ವಿಷಾದವೆನ್ನಿಸಿದರೂ ಪ್ರಮೀಲಾದೇವಿ, ನಿಮ್ಮನ್ನು ಅಭಿನಂದಿಸುವೆ"

"ಈಗ ವೇಳೆಯೆಷ್ಟಾಯಿತು?" ಪ್ರಮೀಲೆ ಕೇಳಿದಳು.

"ಹನ್ನೆರಡಕ್ಕೆ ಐದು ನಿಮಿಷಗಳಿವೆ." ಗಡಿಯಾರ ನೋಡಿ ವಕೀಲನೆಂದ.

ಮರುಕ್ಷಣದಲ್ಲೇ ಪ್ರಮೀಲೆ ಅವನನ್ನು ನೂಕಿ ಗೇಟಿನೊಳಗಿಂದ ಪಾರಾಗಿ ಮೋಟಾರಿನಲ್ಲಿ ಕುಳಿತುದನ್ನು ಆತ ಆಶ್ಚರ್ಯದಿಂದ ನೋಡುತ್ತ ನಿಲ್ಲಬೇಕಾ ಯಿತು.

"ನನ್ನನ್ನು ಆದಷ್ಟು ಬೇಗ ಸ್ಟೇಶನ್ನಿಗೆ ಬಿಡು." ಎಂದು ಆ ದಪ್ಪಗಿನ ಡ್ರಾಯವರನಿಗೆ ಸೂಚಿಸಿದಳು. ಅವನಿಗೆ ಅವಳ ಗಡಿಬಿಡಿಯ ಅರ್ಥವೇ ಆಗ

ಲಿಲ್ಲ. ಅವನು ಪ್ರಶ್ನಾರ್ಥಕ ದೃಷ್ಟಿಯಿಂದ ಅವಳತ್ತ ಹೊರಳಿ ನೋಡಿದ.

"ಸ್ಟೇಶನ್ನಿಗೆ ಮೋಟಾರು ಓಡಿಸು, ಹನ್ನೆರಡರ ಟ್ರೇನ್ ಹಿಡಿಯಬೇಕು."

ಆ ದಪ್ಪ ಮನುಷ್ಯನ ವಿಚಾರ ಶಕ್ತಿಯೂ ದಪ್ಪಾಗಿಯೇ ಇತ್ತು. ತಿರುಗಿ ಅವಳನ್ನೇ ನೋಡಹತ್ತಿದ. ಅವನ ಬುದ್ಧಿ ವೈಚಿತ್ರ್ಯವನ್ನು ಕಲ್ಪಿಸಿಕೊಂಡಳು. ಬೇರೆಯವರು ಹೇಳಿದ್ದನ್ನು ಅರ್ಥ ಮಾಡಿಕೊಳ್ಳಲು ಆತನಿಗೆ ತಡವಾಗುತ್ತಿರ ಬೇಕು. ಆ ವಕೀಲ, ದೇಶಪಾಂಡೆ ಮಹಲ್ ವರೆಗೆ ಒಯ್ಯಲು ಹೇಳಿದ್ದ. ಆತ ಅಲ್ಲಿಗೆ ಮೋಟಾರು ಓಡಿಸಿದ್ದ. ಈಗವಳು ಸ್ಟೇಶನ್ನಿಗೊಯ್ಯಲು ಹೇಳುತ್ತಿದ್ದು ದನ್ನು ಅವನು ಕರಗಿಸಿಕೊಳ್ಳುತ್ತಿರಬೇಕು

"ನೀನು ಐದು ನಿಮಿಷಗಳೊಳಗಾಗಿ ನನ್ನನ್ನು ಸ್ಟೇಶನ್ನಿಗೆ ಮುಟ್ಟಿಸಿದರೆ ನಿನಗೆ ಹತ್ತು ರೂಪಾಯಿ ಕೊಡುವೆ." ಎಂದಳು ಪ್ರವೀಣೆ.

ಮೋಟಾರಕ್ಕೂ ಜೀವವಿದ್ದಿತೇನೋ, ರೂಪಾಯಿ ಎಂಬ ಶಬ್ದ ಕಿವಿಗೆ ಬಿದ್ದೊಡನೆ "ರ್‍ರ್‍—ರ್‍ರ್‍—" ಎಂದು ಸಪ್ಪಳ ಮಾಡಿ ಮುಂದೆ ಓಡಿತು. ಹೋಗುತ್ತಿದ್ದ ಮೋಟಾರು ನೋಡುತ್ತಿದ್ದ ಆ ವಕೀಲನನ್ನುದ್ದೇಶಿಸಿ ಕಮಲಾ ಕಾಂತನೆಂದ;

"ನೀವು ಹೇಳಿದ್ದು ಸತ್ಯವೇ ?"

"ವೇದವಾಕ್ಯದಷ್ಟು ಸತ್ಯ."

ವಕೀಲನ ಮಾತು ಮುಗಿದುದೇ ತಡ, ಆ ಬೇಸಿಗೆ ಕಾಲದ ನಿರ್ಜನ ವಾದ ಬಯಲಿನ ಶಾಂತತೆಯನ್ನು ಭೇದಿಸಿ ಕಮಲಾಕಾಂತನ ಮುಖದಿಂದ 'ಹುರ್ರೇ....' ಎಂಬ ಕೂಗು ಕೇಳಬಂತು. ಆನಂದದ ಪರಮಾವಧಿ ತಲುಪಿದ್ದ ಕೂಗು : ಅದು.

"ಬನ್ನಿರಿ, ವಕೀಲರೇ. ಒಳಗಾದರೂ ಬನ್ನಿರಿ. ನಿಮಗೆ ವಿಸ್ಕಿ ಕೊಡುವೆ. ಆನಂದಪಡುವ ಸಂದರ್ಭವಿದು. ಬಾಯಿ ಸಿಹಿಯಾಗಬೇಕು. ಹೊಟ್ಟೆ ತಂಪಾಗಬೇಕು." ಅವನ ಮುಖ ತುಸು ಇಳಿದಂತಾಗಿ, " ಎಲಾ, ನಾನು ಮರೆತೇ ಬಿಟ್ಟಿದ್ದೆನಲ್ಲ ! ಪ್ರತಿಜ್ಞೆಯೊಂದಿದೆಯಲ್ಲ ?" ಎಂದ.

"ಪ್ರತಿಜ್ಞೆ ?" ವಕೀಲ ಆಶ್ಚರ್ಯದಿಂದ ಕೇಳಿದ.

"ಹೌದು. ನಾನು ಸಾಯುವ ತನಕ ಒಂದು ಹನಿ ಮದ್ಯವನ್ನೂ ಮುಟ್ಟುವದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದೇನೆ. ಮದ್ಯ ಕುಡಿದೊಡನೆ ನನ್ನ

ಮುಂದೆ ಮಂಗಗಳು ಬಂದು ನಿಂತಂತಾಗುತ್ತದೆ."

"ನನಗೊಬ್ಬ ಗೆಳೆಯನಿದ್ದ. ಅವನು ಕುಡಿದೊಡನೆ ಅವನ ಮುಂದೆ ಕತ್ತೆಗಳೇ ಬಂದಂತಾಗುತ್ತಿತ್ತು." ಕಮಲಾಕಾಂತನ ಬಗೆಗೆ ಮರುಕಪಡುತ್ತ ವಕೀಲ ತನಗೆ ಗೊತ್ತಿದ್ದುದನ್ನು ತಿಳಿಸಿದ.

"ಬರ್ರಿ ವಕೀಲರೇ, ಬ್ರೆಡ್—ಬೆಣ್ಣೆ—ಜೇನು ತುಪ್ಪ ತಿಂದು ನೀರು ಕುಡಿಯೋಣ. ನಮ್ಮ ಮಾವನ ಬಗೆಗೆ ನಿಮಗೆ ಬಹಳ ಹೇಳುವದಿದೆ, ಅಲ್ಲದೆ ನಿಮ್ಮಿಂದಲೂ ಪೂರ್ತಿ ತಿಳಿದುಕೊಳ್ಳುವದಿದೆ. ಎಂಥ ಶುಭ ದಿನವಿದು! ಆಹ್ಹ ಹ್ಹಾ.........!"

"ಹುಚ್ಚು ಸಂತೋಷದ ಶುಭ ದಿನ! ಬ್ರೆಡ್ ಬೆಣ್ಣೆ ತಿನ್ನಲು ಯೋಗ್ಯ ದಿನ!" ವಕೀಲನು ಕಮಲಾಕಾಂತನ ಮಾತುಗಳನ್ನು ಪೂರ್ಣಗೊಳಿಸಿದ್ದ.

## ೨೪

ರಾಜಾಸಾಹೇಬ್ ರೆಫ್ರೆಶ್‌ಮೆಂಟ್ ಕ್ಯಾರೇಜಿನಲ್ಲಿ ಬಂದು ಕುಳಿತು ಸಿಗರೇಟು ಹೊತ್ತಿಸಿ ಕಾಫಿಗಾಗಿ ಆರ್ಡರ್ ಕೊಟ್ಟಿದ್ದ. ಅವೆರಡರ ಅವಶ್ಯಕತೆಯೆನ್ನಿಸಿಯೇ ಆತ ಅಲ್ಲಿಗೆ ಬಂದಿದ್ದು. ಒಂದು ದಮ್ ಸಿಗರೇಟು ಎಳೆದು ಒಂದು ಗುಟುಕು ಕಾಫಿ ಕುಡಿಯುವದು. ಆನಂತರ ಮತ್ತೊಂದು ದಮ್ ಸಿಗರೇಟು—ಇನ್ನೊಂದು ಗುಟುಕು ಕಾಫಿ: ಹೀಗೆ ಕೆಲವು ವೇಳೆ ಕಳೆದ ನಂತರ ಎಂಥ ಕಠಿಣ ಪ್ರಸಂಗವೇ ಇದ್ದರೂ ಅದರ ಬಗೆಗೆ ಯೋಚಿಸಿ ಕೊನೆಯ ನಿರ್ಣಯಕ್ಕೆ ಬರಲು ಅನುಕೂಲವಾಗುವದನ್ನು ಎಲ್ಲ ಅನುಭವಿಕರೂ ಬಲ್ಲರು. ಮೊದಲನೆಯ ದಮ್ ಸಿಗರೇಟು ಎಳೆದು ಕಿಟಕಿಯಾಚೆ ಹೊಗೆ ಬಿಡುತ್ತ ಸುತ್ತಲಿನ ಪ್ರದೇಶದ ಮೇಲೆ ದೃಷ್ಟಿ ಬೀರಿದ. ಮುಂಬಯಿ ನಗರವು ಅವನಿಂದ ಹಿಂದಕ್ಕೆ ಓಡುತ್ತಿರುವಂತೆ ಕಾಣುತ್ತಿತ್ತು. ಸ್ವಲ್ಪ ಸಮಯದ ನಂತರ ಅದೂ ಕಾಣದಾಯಿತು.

ಅವನ ಪಕ್ಕದಲ್ಲಿ ನಿಂತು ಟಿಕೀಟಿಗಾಗಿ ಟಿಕೆಟ್ ಕಲೆಕ್ಟರ್ ಕೇಳುತ್ತಿದ್ದುದು ನಾಲ್ಕನೆಯ ಸಲ. ಯಂತ್ರದಂತೆ ಅವನಿಗೆ ಟಿಕೀಟು ತೋರಿಸಿ ಅದನ್ನು ತಿರುಗಿ

ಜೇಬಿಗಿಳಿಸಿದ. ಟಿಕೆಟ್ ಕಲೆಕ್ಟರ್ ಮುಂದೆ ಹೋದೊಡನೆ ತನ್ನ ವಿಚಾರ ಗಳಲ್ಲಿ ಮಗ್ನನಾದ. ಇನ್ನೂ ಅವನ ಮನಸ್ಸು ತಿಳಿಯಾಗಿರಲಿಲ್ಲ. ಕಾಫಿ ಕರುಳಿಗೆ ತಲುಪಿರಲಿಲ್ಲವೇನೋ? ಸ್ಟೇಶನ್ನಿನ ವರೆಗೆ ಬಂದುದಂತೂ ಕನಸಿ ನಂತೆ ಕಂಡಿತ್ತು. ಅವನ ಮನಸ್ಸಿನಲ್ಲಾದ ದುಃಖದ ಕಾರಣ ಅವನಿಗೆ ಗೊತ್ತಿತ್ತು. ಆ ಗಿಡ, ನೆಳಲು, ನೆಲಗಳೆಲ್ಲ ತನ್ನನ್ನು ಹಿಂದೆ ಹಾಕಿ ಓಡುತ್ತಿರು ವಂತೆ ಇನ್ನೂ ಕಾಣುತ್ತಲೇ ಇದ್ದವು.

ಮತ್ತೊಮ್ಮೆ ಟಿಕೆಟ್ ಕಲೆಕ್ಟರ್ ಬಂದು ಬೇರೊಂದು ಟಿಕೀಟಿಗಾಗಿ ತನ್ನನ್ನೇ ಕೇಳುತ್ತಿರುವಂತೆ ಕಂಡಿತು. ತನ್ನದನ್ನೇ ಮತ್ತೊಮ್ಮೆ ತೋರಿಸಿದ. ಅದರಿಂದ ಟಿಕೆಟ್ ಕಲೆಕ್ಟರನಿಗೆ ಸಮಾಧಾನವಾದಂತೆ ಕಂಡುಬರಲಿಲ್ಲ. ಆ ಪೀಡೆಯಿಂದ ತಪ್ಪಿಸಿಕೊಳ್ಳಲೆಂದು ಅವನ ಮನಸ್ಸಿನ ಮೇಲೊರಗಿದ್ದ ಭಾರ ತುಸು ಬದಿಗಿರಿಸಿ ಅವನತ್ತ ಲಕ್ಷ ಪೂರೈಸಿದ. ಟಿಕೇಟ್ ಕಲೆಕ್ಟರ್ ಏನೋ ಒಂದು ತರಹೆ ಮಾತನಾಡುತ್ತಿದ್ದುದನ್ನು ಕೇಳಿದ, ತಾನೇ ಸರಿಯಾಗಿ ಕೇಳ ಲಿಲ್ಲವೇನೋ ಎಂಬ ಸಂಶಯದಿಂದ,

"ಏನಂದಿರಿ ?" ಎಂದು ಕೇಳಿದ.

"ಆ ಕಡೆಗೆ ಕೂತಿರುವ ಸ್ತ್ರೀಯೊಬ್ಬಳು ಅವಳ ಟಿಕೀಟಿನ ಹಣವನ್ನು ನಿಮ್ಮಿಂದ ಪಡೆಯಲು ಹೇಳಿದ್ದಾಳೆ."

ರಾಜಾಸಾಹೇಬನಿಗೆ ತುಸು ಗೊಂದಲಕ್ಕಿಟ್ಟುಕೊಂಡಿತು. ಟಿಕೆಟ್ ಕಲೆ ಕ್ಟರ್ ತಪ್ಪನ್ನಾದರೂ ತಿಳಿದುಕೊಂಡಿರಬೇಕು ಅಥವಾ ರಾಜಾಸಾಹೇಬನ ತಲೆಯ ಸ್ಕ್ರೂ ಸಡಿಲಾಗಿರಬೇಕು, ಅಲ್ಲವೆ? ಮೈಮೇಲೆ ಪೂರ್ಣ ಅರಿವನ್ನು ತಂದುಕೊಳ್ಳುವ ಸಾಹಸ ಮಾಡಿ ಕೇಳಿದ:

"ನನ್ನಿಂದ ಹಣ ಪಡೆಯಲು ಒಬ್ಬ ಸ್ತ್ರೀ ಕೇಳಿದಳೇ ?"

"ಹೌದು."

"ಆದರೆ, ನಾನೇಕೆ ಕೊಡಬೇಕು ?" ನಿಜ ಸಂಗತಿಯನ್ನು ತಿಳಿದು ಕೊಳ್ಳಲು ಗಾಬರಿಯಾಗಿಯೇ ರಾಜಾಸಾಹೇಬ ಕೇಳಿದ.

ಅದು ಟಿಕೆಟ್ ಕಲೆಕ್ಟರನಿಗೆ ಸಂಬಂಧಿಸಿದ ವಿಷಯವಾಗಿರಲಿಲ್ಲ. ಅವನು ಹಣ ಮಾತ್ರ ಕೇಳುತ್ತಿದ್ದ.

"ಹಣಾ ಕೊಡ್ರೀ....ನನಗೆ ಅದರ ಕಾರಣ ಗೊತ್ತಿಲ್ಲ."

"ಹಣ ಕೊಡಬೇಕೇ ?"

"ರಿಫ್ರೆಶ್‌ಮೆಂಟ್ ಕ್ಯಾರೇಜಿನಲ್ಲಿ ಬೂದಿ ಬಣ್ಣದ ಸೂಟು ಧರಿಸಿದ ಸದ್ಗೃಹಸ್ಥನ ಪತ್ತಿರ ಹಣ ತೆಗೆದುಕೊಳ್ಳಲು ಅವಳು ಹೇಳಿದಳು. ಈ ಡಬ್ಬಿಯಲ್ಲಿ ನೀವೊಬ್ಬರೇ ಅಂಥ ಸೂಟು ತೊಟ್ಟಿದ್ದೀರಿ."

"ನಿಮ್ಮ ಕಲ್ಪನೆ ತಪ್ಪಾಗಿರಬೇಕು...."

"ನನ್ನದಲ್ಲ........"

"ಅವಳು ಹೇಗಿದ್ದಾಳೆ ?"

ಅವಳನ್ನು ವರ್ಣಿಸಲು ವಿಶೇಷಣಗಳನ್ನು ನೆನಪು ಮಾಡಿಕೊಳ್ಳುತ್ತ ಟಿಕೆಟ್ ಕಲೆಕ್ಟರ್ ನಿಧಾನವಾಗಿ ಹೇಳಹತ್ತಿದ:

"ಮಧ್ಯಮ ನಿಲುವು, ಗೌರವರ್ಣ, ಅಗಲವಾದ ಕಪ್ಪು ಕಣ್ಣುಗಳು...." ಎನ್ನುತ್ತಿರುವಾಗಲೇ ಸ್ಟೇಶನ್ ಬಂದುದರಿಂದ ಸಾವಕಾಶ ಸಾಗಿದ್ದ ಗಾಡಿ ನಿಂತಿತು. ರಾಜಾಸಾಹೇಬ ಒಂದೇ ಕ್ಷಣದಲ್ಲಿ ಆ ಡಬ್ಬಿಯಿಂದ ಕೆಳಕ್ಕೆ ಹಾರಿ ಹಿಂದಿನ ಡಬ್ಬಿಗೆ ಬಂದಿದ್ದ. ಅವನು ಓಡಿಹೋದ ವೇಗವನ್ನು ಕಂಡು ಆಶ್ಚರ್ಯದಿಂದ ಬಾಯಿ ತೆಗೆದುಕೊಂಡು ಟಿಕೆಟ್ ಕಲೆಕ್ಟರ್ ನಿಂತಿದ್ದ.

ಮರುಕ್ಷಣದಲ್ಲಿ ಪ್ರಮೀಲೆಯ ಪಕ್ಕದಲ್ಲಿ ರಾಜಾಸಾಹೇಬ ಹುಚ್ಚನಂತೆ ಏನೋ ಬಡಬಡಿಸುತ್ತ ಕುಳಿತಿದ್ದ. ಅವರ ಎದುರಿನ ಸೀಟಿನ ಮೇಲೆ ಸ್ಥೂಲಕಾಯದ ಸ್ತ್ರೀಯೊಬ್ಬಳು ಹರೆಯದ ತನ್ನ ಮೂವರು ಮಕ್ಕಳೊಂದಿಗೆ ಕುಳಿತಿದ್ದಳು. ರಾಜಾಸಾಹೇಬ ಆ ಡಬ್ಬಿಯಲ್ಲಿ ಬಂದು ಪ್ರಮೀಲೆಯ ಪಕ್ಕದಲ್ಲಿ ಕುಳಿತ ರೀತಿಯನ್ನು ಆ ಹೆಂಗಸು ಕುತೂಹಲದಿಂದ ನೋಡುತ್ತಿದ್ದಳು. ಅವರಿಗೆ ತುಸು ಸಮೀಪವಾಗಿದ್ದ ಇಬ್ಬರು ಹುಡುಗಿಯರು ಅವರ ಮಾತು ಕೇಳಲು ತುಸು ಮುಂದೆ ಬಾಗಿದರು. ಅವರಲ್ಲಿನವಳೊಬ್ಬಳು ಪ್ರಮೀಲೆಯನ್ನು ಕಂಡೊಡನೆ 'ಅವಳು ಸಿನೀಮಾ ತಾರೆ ಶಕುಂತಲಾ ಇರಬೇಕು' ಎಂದು ಎರಡನೆಯವಳ ಕಿವಿಯಲ್ಲಿ ಹೇಳಿದ್ದರಿಂದ ಇಬ್ಬರಲ್ಲೂ ಕುತೂಹಲ ಹೆಚ್ಚಿ ಹಾಗೆ ಮುಂದೆ ಬಾಗಿ ಪ್ರಮೀಲೆ–ರಾಜಾಸಾಹೇಬರ ಮಾತು ಕೇಳಬಯಸಿದ್ದರು.

"ಅಬ್ಬಾ, ದೈವವೇ !" ಪ್ರಮೀಲೆಯ ಪಕ್ಕದಲ್ಲಿ ಕೂಡ್ರುತ್ತ ರಾಜಾಸಾಹೇಬನೆಂದ.

ಆ ಸ್ಥೂಲದೇಹಿ ಹೆಂಗಸು ತನ್ನ ಮೂವರೂ ಮಕ್ಕಳನ್ನು ಗದರಿಸಿದಳು:

"ನಿಮ್ಮ 'ಚಂದಮಾಮ' ಓದಿರಿ."

ಪಾಪ! ತನ್ನ ಮಕ್ಕಳು ತಾವು ಊರು ಮುಟ್ಟುವವರೆಗೆ 'ಚಂದಮಾಮ' ಓದದಿದ್ದರೆ, ಅಥವಾ ಹೊರಗಿನ ಸೃಷ್ಟಿ ಸೊಬಗನ್ನು ನೋಡುವದರಲ್ಲಿ ಮನಸ್ಸು ಹಾಕದಿದ್ದರೆ ಒಳಿತಾಗಲಾರದು. ಚಿಕ್ಕ ಮಕ್ಕಳು ಈ ಹೊಲಸು ಜೋಡಿಯ ವರ್ತನೆ ನೋಡುವುದರಿಂದಲೂ ಅವರ ಮಾತು ಕೇಳುವುದರಿಂದಲೂ ಅವರಿಗೆ ಹೊಲಸು ಚಟಗಳು ಅಂಟಿಕೊಳ್ಳುವ ಸಂಭವವಿದೆಯೆಂದೇ ತಿಳಿದ ಆ ತಾಯಿ, ಹದಿನಾರರಿಂದ ಇಪ್ಪತ್ತರ ವರೆಗಿನ ತನ್ನ ಚಿಕ್ಕ ಮಕ್ಕಳ ಬಗೆಗೆ ಯೋಚಿಸಿ ಹಾಗೆ ಗದರಿಸಿದ್ದು ದು.

"ಪ್ರಮೀಲಾ...."

ಆ ಹೆಸರನ್ನು ಕೇಳಿದೊಡನೆಯೇ ಆ ಇಬ್ಬರು ಹುಡುಗಿಯರ ಉತ್ಸುಕತೆ ಮಾಯವಾಯಿತು.

"ಪ ಮೀಲಾ, ನೀವು ಇಲ್ಲೇಕೆ ?"

ಪ್ರಮೀಲೆ ತುಸು ನಕ್ಕಳು. ರಾಜಾಸಾಹೇಬನ ಮನಸ್ಸು ಹಿಗ್ಗಿತು.

"ನಿಮ್ಮ ಬೆನ್ನು ಹತ್ತಿ ಬಂದೆ, ರಾಜಾಸಾಹೇಬ್."

"ಏನೂ ಸಿದ್ಧತೆಯಿಲ್ಲದೆ ?"

"ಅಷ್ಟು ಗಡಿಬಿಡಿ, ಏನೂ ತಂದಿಲ್ಲ, ಒಂದು ಸೀರೆ ಕೂಡ ಇಲ್ಲ; ನನ್ನಲ್ಲಿದ್ದ ಎಲ್ಲ ಹಣವನ್ನೂ ಆ ಟ್ಯಾಕ್ಸಿಯವನಿಗೆ ಕೊಟ್ಟುಬಿಟ್ಟೆ. ಟಿಕೀಟಿಗೂ ಹಣ ವಿರಲಿಲ್ಲ. ಅದಕ್ಕಾಗಿ ನಿಮ್ಮ ಹತ್ತಿರ ಟಿಕೆಟ್ ಕಲೆಕ್ಟರನನ್ನು ಕಳಿಸಿದ್ದು. ನಿಮ್ಮ ಹಣ ಖರ್ಚು ಮಾಡಲು ಈಗ ನನ್ನ ಅಭಿಮಾನವೂ ಅಡ್ಡ ಬರುತ್ತಿಲ್ಲ........"

"ಮುಂದೆ........?"

"ಟಿಕಿಟ್ ಪ್ಲೀಜ್. ಹಣ ಕೊಡಿ." ಅದೇ ಟಿಕೆಟ್ ಕಲೆಕ್ಟರನ ಧ್ವನಿ.

ಯಾರಿಗೆ ಏನಾದರೇನು ? ರೈಲ್ವೆ ಕಂಪನಿಗೆ ಆತ ಪ್ರಾಮಾಣಿಕವಾಗಿ ಸೇವೆ ಸಲ್ಲಿಸಬೇಕಷ್ಟೆ ? ರಾಜಾಸಾಹೇಬ ಕೆಲ ನೋಟುಗಳನ್ನು ಅವನ ಕೈ-ಗಿತ್ತು ರಸೀದಿ ಪಡೆದು ಉಳಿದ ಹಣ ಇಟ್ಟುಕೊಳ್ಳಲು ಟಿಕೆಟ್ ಕಲೆಕ್ಟರನಿಗೆ ಸೂಚಿಸಿದ. ಟಿಕೆಟ್ ಕಲೆಕ್ಟರ್ ಸಂಶಯದಿಂದ ರಾಜಾಸಾಹೇಬನ ಕಣ್ಣು

ಗಳನ್ನು ನೋಡಿ ಮಾಯವಾದ.

"ರಾಜಾಸಾಹೇಬ, ನೀವು ಅವನಿಗೆ ಕೊಟ್ಟ ಹಣವೆಷ್ಟು ಗೊತ್ತೆ ? ನೀವು ಶ್ರೀಮಂತ ಹುಡುಗಿಯೊಬ್ಬಳನ್ನು ಲಗ್ನವಾಗುತ್ತಿದ್ದೀರೆಂದು ಸರಿ, ಇಲ್ಲವಾದರೆ ನಿಮ್ಮ ದಿವಾಳಿಯಾಗುತ್ತಿತ್ತು."

ಪ್ರಮೀಲೆಯ ಆ ಮಾತುಗಳಲ್ಲಿ ಏನೋ ವಿಶೇಷವಿರುವ ಸಂಶಯ ಬಂದು,

"ಪ್ರಮೀಲಾದೇವಿ, ನೀವೇನು ಹೇಳುತ್ತಿದ್ದೀರಿ, ನನಗಂತೂ ಅರ್ಥವಾಗುತ್ತಿಲ್ಲ. ನಾನು ಲಗ್ನವಾಗುವದೇ ಆದರೆ ನಿಮ್ಮೊಡನೆ ಮಾತ್ರ. ಈಗ ನೀವು ನನಗೆ ತಿರುಗಿ ದೊರಕಿರುವಿರಿ. ಇನ್ನು ಎಂದಿಗೂ ನಿಮ್ಮನ್ನು ಕಳೆದುಕೊಳ್ಳಲಾರೆ. ಆಗ ನಿಮ್ಮ ಮಾತು ಕೇಳಿಯೇ ಮೂರ್ಖನಾಗಿದ್ದೆ. ನೀವು ಮತ್ತೊಮ್ಮೆ ಆಗಿನಂತೆ ಉಪದೇಶ ಮಾಡಿ ಪಾರಾಗಲು ಯತ್ನಿಸಿದರೆ ನಿಮ್ಮನ್ನು ಬಲಾತ್ಕಾರದಿಂದ ಹೊತ್ತು ಒಯ್ಯುವೆ. ನಿಮ್ಮನ್ನು ಬಿಟ್ಟು ಬಂದಾಗಿನಿಂದ ತನ್ನ ತಲೆಯೇ ತಾಣದಲ್ಲಿರಲಿಲ್ಲ. ಈಗ ನನ್ನ ಮನಮುಳು ಪೂರ್ಣ ಎಚ್ಚತ್ತಿದೆ. ಎಲ್ಲವನ್ನೂ ಯೋಚಿಸಿ ನೀವು ನಡೆದುಕೊಂಡ ರೀತಿ ಖಂಡನೀಯವಾದುದೆಂದು ಮನಗಂಡಿದ್ದೇನೆ. ನಾವು ಒಬ್ಬರನ್ನೊಬ್ಬರು ಪ್ರೀತಿಸುವದು ನಮ್ಮ ಹೃದಯಗಳಿಗೆ ಗೊತ್ತಿದೆ. ಯಾವ ಸಂಶಯವೂ ನಮ್ಮ ಹತ್ತಿರ ಖಂಡಿತವಾಗಿ ಸುಳಿಯಲಾರದು. ದಿನಗಳೆದಂತೆ ನಮ್ಮ ಪ್ರೀತಿ ಹೆಚ್ಚುತ್ತ ಹೋಗುವದು." ಎಂದನಾತ.

"ರಾಜ್, ಈ ಭಾಷಣವೇಕೆ ?"

"ಅಗತ್ಯವೇ ಇದೆ."

ಆ ಸ್ಥೂಲದೇಹಿ ಸ್ತ್ರೀ ಅವರಿಬ್ಬರ ಮಾತು ಕೇಳಲು ಅವಳು ಅಸಮರ್ಥಳಾದಳು. ಅವರು ಇಳಿಧ್ವನಿಯಲ್ಲಿ ಮಾತಾಡುತ್ತಿದ್ದ ಸ್ವರ ಕೇಳಿಸುತ್ತಿತ್ತು. 'ನಗ್ನಸತ್ಯ' ಕಾದಂಬರಿ ಅವಳ ಮುಖವನ್ನು ಮರೆಮಾಡಿತ್ತು.

"ನಾನೆಲ್ಲಿಯೋ ಓದಿರುವೆ ರಾಜ. ಬಡ ಹುಡುಗನೊಬ್ಬ ಶ್ರೀಮಂತ ಹುಡುಗಿಯೊಬ್ಬಳನ್ನು ಮದುವೆಯಾಗಲು ಹಿಂಜರಿಯುತ್ತಿದ್ದ. ನೀವೂ ಹಾಗೆ ಮಾಡಲಾರಿರಷ್ಟೇ ?"

"ಹಾಗೇಕೆ ಮಾಡಲಿ? ನಮ್ಮ ವಿಚಾರದಲ್ಲಿ ಅದರ ವಿರುದ್ಧ ಪರಿಸ್ಥಿತಿಯಿದೆ."

"ಇಲ್ಲ ರಾಜ. ಮಾಣಿಕಲಾಲ ದಲಾಲನ ಪರಿಚಯವಿದೆಯಷ್ಟೆ?"

"ಆತ ನನ್ನ ಗೆಳೆಯ, ವಕೀಲ."

"ನಿಮ್ಮ ಸ್ನೇಹವಿರುವದನ್ನು ಆ ವಕೀಲನೇ ಹೇಳಿದ. ಮಾವ ಬಿಟ್ಟು ಹೋದ ಹಣದ ಬಗ್ಗೆ ಅವನೇ ನಿಮಗೆ ಹೇಳಿದ್ದನಂತೆ."

"ಹೌದು. ನಿಮಗೂ ಬರೆದಿದ್ದ."

"ನೀವು ನಮ್ಮ ಮನೆಯಿಂದ ಹೊರಟುಹೋದ ಸ್ವಲ್ಪ ವೇಳೆಯ ನಂತರ ಆ ಮಾಣಿಕಲಾಲ ನಮ್ಮಲ್ಲಿಗೆ ಬಂದ."

"ಮಾಣಿಕಲಾಲ ದಲಾಲ ಬಂದಿದ್ದನೇ?"

"ಅವನೇ ಬಂದಿದ್ದ. ಸುಂದರರಾಯರು ಸಾಯುವ ಮೊದಲು ಮತ್ತೊಂದು ವಿಲ್ ತಯಾರಿಸಿ ಎಲ್ಲ ಹಣವನ್ನೂ ನನಗೆ ಕೊಟ್ಟಿರುವದನ್ನು ತಿಳಿಸಿದ."

ಇಬ್ಬರ ದೃಷ್ಟಿಗಳೂ ಒಂದಾದವು.

"ನಾನು ಆತ ತಂದಿದ್ದ ಟ್ಯಾಕ್ಸಿಯನ್ನೇ ಕದ್ದುಕೊಂಡು ಸ್ಟೇಶನ್ನಿಗೆ ಬಂದೆ."

ಪ್ರಮಿಲೆ ಸಹಜವಾಗಿಯೇ ಈ ಸುದ್ದಿಯನ್ನು ತಿಳಿಸಿದ್ದರೂ ಅದನ್ನು ಕೇಳಿದ ರಾಜಾಸಾಹೇಬನಿಗೆ ಸುಧಾರಿಸಿಕೊಳ್ಳಲು ತುಸು ವೇಳೆ ಹಿಡಿಯಿತು.

"ಅದರಿಂದ ಮಾತ್ರ ಪರಿಸ್ಥಿತಿಯಲ್ಲಿ ಬದಲಾವಣೆಯಾದಂತಾಯಿತು. ನನ್ನ ಆಸ್ತಿಯಂತೂ ನಮ್ಮ ತಂದೆಗೆ ಸಾಲ ಕೊಟ್ಟವರ ಕೈಯಲ್ಲಿದೆ. ಸದ್ಯ ನನ್ನ ಆಸ್ತಿ ಶೂನ್ಯ—ನಾನು ಬಡವ...."

"ಪರಿಸ್ಥಿತಿ....ಬದಲಾವಣೆ ಅಂದರೇನು?"

"ನಿಮಗೆ ಎಲ್ಲಾ ಹಣ ಬಂದಂತಾಯಿತು. ಆದರಿಂದ ಬರುವ ಉತ್ಪನ್ನದಲ್ಲಿ ನನ್ನದೂ ಸಮಪಾಲು ಆದಂತಾಯಿತು."

ಪ್ರಮಿಲೆ ರಾಜಾಸಾಹೇಬನ ತೊಡೆಗೆ ಗುದ್ದಿ,

"ನಾನು ರಾಜಾಸಾಹೇಬ ಅನ್ನುವದನ್ನು ಬಿಟ್ಟು ರಾಜ ಎಂದು ಕರೆಯ ಹತ್ತಿರುವೆ. ನೀವು ನನ್ನನ್ನು ಬಹುವಚನದಿಂದ ಕರೆಯುತ್ತ ತಮಾಷೆ ಮಾಡು ವದನ್ನು ನಿಲ್ಲಿಸಿರಿ. ಇಲ್ಲವಾದರೆ ಇಕೋ, ನನ್ನ ಕೈಯಲ್ಲಿರುವದನ್ನು ನೋಡಿರಿ ........" ಎಂದಳು.

"ಎಲಾ, ಅದೇನು "

"ಇದು ಪಿನ್. ಪ್ರಮೀಲಾದೇವಿ—ನೀವು—ನಿಮ್ಮನ್ನು ಎಂದು ಸಂಬೋಧಿ ಸುತ್ತ ಹೊರಟುದಾದರೆ ಇದರ ತುದಿಯಿಂದ ನಿಮ್ಮ ಮೈಗೆಲ್ಲ ಚುಚ್ಚಿ ಬಿಡುವೆ. ಇನ್ನು ಮುಂದೆ ನೀವು ಮಾಡಬೇಕಾದ ಕೆಲಸಗಳನ್ನು ಹೇಳುವೆ. ಅದರ ವಿರುದ್ಧ ನೀವು ವರ್ತಿಸಿದರೆ ನಿಮ್ಮ ಪರಿಣಾಮ ನೆಟ್ಟಗಾಗದು. ಇಲ್ಲಿಂದ ನೇರ ವಾಗಿ ಗೊಬ್ಬೂರಿಗೆ ಹೋಗುವದು, ನೀವು ತುಸು ಹಣ ನನಗೆ ಸಾಲವಾಗಿ ಕೊಡುವದು, ಅದರಿಂದ ನಾನು ಇನ್ನೊಂದು ಸೀರೆ ಕೊಳ್ಳುವದು; ಆನಂತರ ಇಬ್ಬರೂ ಸೇರಿ ಹೋಗಿ ರಜಿಸ್ಟರ್ಡ್ ಮ್ಯಾರೇಜ್ ಮಾಡಿಕೊಳ್ಳುವದು, ಆ ಕಾಗದದ ವೆಚ್ಚ ನೀವೇ ನೋಡಿಕೊಳ್ಳುವದು; ನಿಮ್ಮ ನಿಜ ಹೆಸರು, ಊರು ಗಳಿಲ್ಲವನ್ನೂ ಇದ್ದಕ್ಕಿದ್ದಂತೆ ಹೇಳುವದು. ನಾನೂ ನನ್ನ ಪೂರ್ಣ ಹೆಸರನ್ನು ಹೇಳುವೆ, ನನ್ನ ನೈಜ ಹೆಸರು ಬೇರೆಯಾಗೇ ಇದೆ—ಅದನ್ನು ಕೇಳಿ ನೀವು ಗಾಬರಿಯಾಗುವಿರಿ. ಅದಾದ ನಂತರ ನಿಮ್ಮ ಬಳಗದವರಿಗೂ ಗೆಳೆಯರಿಗೂ ಒಂದು ಚಿಕ್ಕ ಮೇಜವಾನಿ ಕೊಡುವದು; ಅಲ್ಲಿಂದ ಪ್ರವಾಸ. ಪ್ರಶಾಂತ ಸ್ಥಳ ವೊಂದನ್ನು ಗೊತ್ತುಪಡಿಸುವದು, ನಿಸರ್ಗ ಸೌಂದರ್ಯ ನೋಡುತ್ತ ತುಸು ದಿನ ಗಳನ್ನು ಆನಂದದಿಂದ ಕಳೆಯುವದು

ಆನಂತರ ಆ ಹಣವನ್ನು ಕೈಗೆ ತೆಗೆದುಕೊಂಡು ನಿಮ್ಮ ಆಸ್ತಿಯ ಮೇಲಿನ ಸಾಲವನ್ನೆಲ್ಲ ತೀರಿಸುವದು. ನಾವು ಹಿಂದೆ ಮಾತಾಡಿದಂತೆ ನಾಲ್ಕು ತೋಟ ಗಳನ್ನು ನಾವೇ ಸಾಗು ಮಾಡಿಸುವದು. ಒಂದರಲ್ಲಿ ಪಲ್ಯ—ಕಾಯಿ, ಹಣ್ಣು ಹಂಪಲು ಬೆಳೆಯಲು ಮೀಸಲಿಡುವದು; ಆದರಲ್ಲಿಯೇ ಹೂದೋಟ, ಒಂದೆಡೆ ಜೇನುಹುಟ್ಟುಗಳು, ಬೇರೊಂದು ಕಡೆಗೆ ಬ್ಯಾಡ್ಮಿಂಟನ್ ಆಟದ ಬಯಲು-ಅವು ಗಳ ಮಧ್ಯೆ ಚಿಕ್ಕ ಬಂಗಲೆ. ಕಮಲಾಕಾಂತನ ಹೆಸರಿನಲ್ಲೂ ಒಂದು ಹೊಲ ಕೊಂಡು ಆದರ ಉತ್ಪನ್ನ ಹಾಳು ಮಾಡಲು ಅವನಿಗೆ ಅಪ್ಪಣೆ ಕೊಡುವದು. ನಾವಿಬ್ಬರೂ ಸುಖವಾಗಿ ಜೀವಿಸುವದು........"

"ಇನ್ನೊಂದು ಮರೆತು ಹೋಯಿತು. ಸುಂದರರಾವ್ ಸರಕಾರರ ಸ್ಮರಣಾರ್ಥವಾಗಿ ಆ ತೋಟದ ಒಂದು ಮಗ್ಗಲಿಗೆ ಕ್ರಿಕೆಟ್ ಪಿಚ್ ತಯಾರಿಸುವದು........ಅಲ್ಲವೇ ?" ಎಂದನಾತ.

ಅವನ ಅಂಗೈಯಲ್ಲಿ ಮೃದುವಾದ ಚಿಕ್ಕ ವಸ್ತುವೊಂದು ಸೇರಿದಂತೆ ಭಾಸವಾಯಿತು. ಬಹಳ ದಿನಗಳ ಹಿಂದೆ ಲೀಲಾರಾಣಿಯ ಮನೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಇಂಥದೇ ವಸ್ತು ಕೈಗೆ ಸಿಕ್ಕಿದ್ದುದು ನೆನಪಾಯಿತು. ಅದರೊಡನೆ ಅವನ ಮೈಯಲ್ಲಿ ವಿದ್ಯುತ್ಸಂಚಾರವಾದಂತೆನ್ನಿಸಿತು. ಕೊನೆಯ ಪ್ರತಿಭಟನೆಯನ್ನು ಸೂಚಿಸಲೆಂದು,

"ಎಲ್ಲವನ್ನೂ ಒಪ್ಪುವೆ. ಆದರೆ ಆ ಹಣದ ಉಪಯೋಗವನ್ನು ನಾನು ........" ಎಂದು ಸೂಚಿಸುತ್ತಿರುವಾಗಲೇ "ಅಯ್ಯಯ್ಯೋ........" ಎಂದೂ ಚೀರಿದ. ಅವನ ತೊಡೆಯಲ್ಲಿ ನೋವನ್ನುಂಟು ಮಾಡುವ ಚೂಪಾದ ವಸ್ತುವೊಂದು ಸೇರಿತ್ತು. ಮಾತು ಅರ್ಧಕ್ಕುಳಿದು "ಅಯ್ಯಯ್ಯೋ" ಎಂಬ ನೋವಿನ ಶಬ್ದ ಹೊರಬಂದಿತ್ತು. ಹರಿತವಾದ ತನ್ನ ಶಸ್ತ್ರವನ್ನು ಕೈಯಲ್ಲಿ ಹಿಡಿದು ಮತ್ತೊಂದು ಪ್ರಹಾರಕ್ಕಾಗಿ ಸಿದ್ಧಳಾಗಿದ್ದ ಪ್ರಮೀಲೆ ಅವನನ್ನೇ ನೋಡುತ್ತಿದ್ದಳು

"ನಾನು ಹೇಳಿದಂತೆ ಕೇಳಬೇಕೆಂದು ಮೊದಲೇ ಹೇಳಿಲ್ಲವೇ ?"

"ಆಗಲಿ, ಹಾಗೇ ಮಾಡುವೆ, ಪ್ರಮೀಲಾದೇ........ಅಯ್ಯಯ್ಯೋ........ವಿ........" ಮತ್ತೊಂದು ಪ್ರಹಾರವಾಗಿತ್ತು.

"ಪ್ರಮೀಲಾ........ಪ್ರಮೀ........ಪಮ್ಮಿ........"

"ಶಹಬ್ಬಾಸ್. ಚಿಕ್ಕ ಮಕ್ಕಳೆಂದರೆ ಹೀಗಿರಬೇಕು. ಹೇಳಿದ ಮಾತುಗಳಿಗೆ ತಪ್ಪಬಾರದು. ಹೂಂ........ನನ್ನ ಸಮೀಪಕ್ಕೆ ಬನ್ನಿರಿ. ಈಗ ತಾನೇ ಪುಣೆ ಬಿಟ್ಟಿದ್ದೇವೆ. ಗೊಬ್ಬೂರಿಗೆ ತಲುಪಲು ಬೇಕಾದಷ್ಟು ವೇಳೆಯಿದೆ. ನಿಮ್ಮ ಬಗೆಗಿನ ನನ್ನ ಅಭಿಪ್ರಾಯಗಳೆಲ್ಲವನ್ನೂ ವಿವರವಾಗಿ ತಿಳಿಸಿ ಹೇಳುವೆ. ಇನ್ನೂ ಸಮೀಪಕ್ಕೆ ಬರ್‍ರಿ....":

"ಆಗಲಿ, ಪ್ರಮೀಲಾದೇವಿ........ಅಯ್ಯಯ್ಯೋ....ಪಮ್ಮಿ...."

ಅವಳ ಕೈಯಲ್ಲಿನ ಶಸ್ತ್ರವನ್ನು ಕಸಿದುಕೊಂಡು ಅವಳಿಗೇ ಅದು ಮುಳುವಾಗುವಂತೆ ಮಾಡಿದ.

"ಅಯ್ಯಯ್ಯೋ ರಾಜ........" ಇಬ್ಬರೂ ನಕ್ಕರು. ಆ ನೋವಿನಲ್ಲೂ ಆನಂದವಿರಬೇಕು. ಮಾತೂ ನಗುವೂ ಕ್ಷಣಹೊತ್ತು ಮಾಯವಾದವು.

ಚಂದಮಾಮ ಓದುತ್ತಿದ್ದ ಹುಡುಗಿಯರ ಕಣ್ಣುಗಳು ಅಗಲವಾದುದನ್ನೂ ನಗ್ನಸತ್ಯದ ಹಿಂದಿದ್ದ ಕಣ್ಣುಗಳು ಮುಚ್ಚಿಕೊಂಡುದನ್ನೂ ನೋಡಲು ಅವರಿಗೆ ಎಚ್ಚರವಿರಲಿಲ್ಲ. ಅದೇಕೆ, ತಾವು ರೈಲಿನಲ್ಲಿರುವದನ್ನೂ ಅವರು ಮರೆತುಬಿಟ್ಟಿದ್ದರು.

"ರಾಜಿ........ನನ್ನ ರಾಜ...."

"ಪಮ್ಮಿ....ನನ್ನ ಪಮ್ಮಿ...."

"ಇನ್ನೊವ್ಮೆ ಅದೇ ಹೆಸರಿನಿಂದ ಕರೆಯಿರಿ ರಾಜ, ಜೀವನದ ಕೊನೆಯವರೆಗೂ ಅದೇ ಹೆಸರಿನಿಂದ ಕರೆಯಿರಿ...."

"ಪಮ್ಮಿ....ಪಮ್ಮಿ...."

ರೈಲು ರಭಸದಿಂದ ಮುಂದೆ ಚಲಿಸುತ್ತಿತ್ತು.

